

ಕರ್ನಾಟಕ ಸರಕಾರ

# ಲಾಡ ಜನಾಂಗದ
## ನೆಲೆ ಹಾಗೂ ಸಂಸ್ಕೃತಿ

ಜಯಪ್ರಕಾಶ್ ಎನ್.ಡಿ.ಲಾಡ್





ಕನ್ನಡ ಪುಸ್ತಕ ಪ್ರಾಧಿಕಾರ

# ಲಾಡ ಜನಾಂಗದ

## ನೆಲೆ ಹಾಗೂ ಸಂಸ್ಕೃತಿ


ಜಯಪ್ರಕಾಶ್ ಎನ್. ಡಿ. ಲಾಡ್





ಕರ್ನಾಟಕ ಸರ್ಕಾರ

**ಕನ್ನಡ ಪುಸ್ತಕ ಪ್ರಾಧಿಕಾರ**

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು – ೫೬೦ ೦೦೨

ದೂರವಾಣಿ: ೨೨೪೮ ೪೫೧೬

**LAD JANANGADA NELE HAGU SAMSKRUTHI** — by Jayaprakash N. D. Lad, *Published by* **Ashoka N. Chalavadi,** Administrative officer, Kannada Pustaka Pradhikara, Kannada Bhavana, J.C. Road, Banglaore - 560 002

Pages : x + 138
Price : 58/-
First Edition : 2009
Copies : 1000
ISBN : 81-7713-289-X



ಪುಟಗಳು : x + ೧೩೮
ಬೆಲೆ : ರೂ. ೫೮
ಪ್ರಥಮ ಮುದ್ರಣ : ೨೦೦೯
ಪ್ರತಿಗಳು : ೧೦೦೦
ಕರಡು ತಿದ್ದಿದವರು : ಲೇಖಕರು

ಮುಖಪುಟ ವಿನ್ಯಾಸ : ಎಂ. ಜಿ. ರಾಘವೇಂದ್ರ

**ಪ್ರಕಾಶಕರು :**
**ಅಶೋಕ ಎನ್. ಚಲವಾದಿ**
ಆಡಳಿತಾಧಿಕಾರಿಗಳು
ಕನ್ನಡ ಪುಸ್ತಕ ಪ್ರಾಧಿಕಾರ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು –೫೬೦ ೦೦೨

**ಮುದ್ರಕರು :** ಭಾಗ್ಯಂ ಬೈಂಡಿಂಗ್ ವರ್ಕ್ಸ್
ನಂ. ೨೫/೧, ೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ನ್ಯೂ ಟಿಂಬರ್ ಯಾರ್ಡ್ ಲೇಔಟ್
ಮೈಸೂರು ರಸ್ತೆ ಬೆಂಗಳೂರು – ೫೬೦ ೦೨೬
ದೂರವಾಣಿ : ೨೬೭೫೮೨೮೦, ಫ್ಯಾಕ್ಸ್ : ೨೬೭೫೯೦೮೮

# ಅಧ್ಯಕ್ಷರ ಮಾತು

ಕನ್ನಡ ಪುಸ್ತಕ ಪ್ರಾಧಿಕಾರವು ಶ್ರೀ ಜಯಪ್ರಕಾಶ್ ಎನ್.ಡಿ.ಲಾಡ್ ಅವರ 'ಲಾಡ ಜನಾಂಗದ ನೆಲೆ ಹಾಗೂ ಸಂಸ್ಕೃತಿ' ಅನ್ನುವ ಸಂಶೋಧನಾತ್ಮಕ ಕೃತಿಯನ್ನು ಹೊರತರಲು ಹೆಮ್ಮೆ ಪಡುತ್ತದೆ. ಹಿಂದೊಮ್ಮೆ ಇಂದಿನ ಗುಜರಾತ್ ಪ್ರಾಂತ್ಯದ ದಕ್ಷಿಣ ಭಾಗದ 'ಲಾಠ' ರಾಜ್ಯದಲ್ಲಿ ಆಡಳಿತ ನಡೆಸಿದ ಈ ಜನಸಮುದಾಯ ರಾಜಕೀಯ ಸ್ಥಿತ್ಯಂತರ ಹಾಗೂ ಪ್ರಾಕೃತಿಕ ವಿಕೋಪಕ್ಕೊಳಗಾಗಿ ಛಿದ್ರ ಛಿದ್ರವಾಗಿ ದೇಶದ ತುಂಬೆಲ್ಲಾ ಚದುರಿ ಹೋಯಿತು. ಅಂತೆಯೇ ಕರ್ನಾಟಕಕ್ಕೆ ಕೆಲವರು ಬಂದರು. ಸಾಮಾಜಿಕವಾಗಿ, ಆರ್ಥಿಕವಾಗಿ ಶೈಕ್ಷಣಿಕವಾಗಿ ಹಿಂದುಳಿದ ಈ ಜನಾಂಗದವರ ಧಾರ್ಮಿಕ, ಆರ್ಥಿಕ ಪರಿಸ್ಥಿತಿಯನ್ನು ವಿವರವಾಗಿ ಚಿತ್ರಿಸಿದ್ದಾರೆ. ಲಾಡ ಜನಾಂಗದವರು ತಮ್ಮದೆ ಆದ ಕಸುಬು, ಭಾಷೆ, ಆಚರಣೆಗಳನ್ನು ಹೊಂದಿ ಶತಮಾನಗಳಿಂದ ತಮ್ಮ ಪಾರಂಪರಿಕ ಬದುಕು ಮತ್ತು ಭಾಷೆಯನ್ನು ಸತತವಾಗಿ ಕಾಪಾಡಿಕೊಂಡು ಬಂದಿರುವುದು ಸೋಜಿಗವನ್ನುಂಟು ಮಾಡುತ್ತದೆ. ಲೇಖಕರ ಈ ಪ್ರಯತ್ನ ಅಭಿನಂದನೀಯ.

ಈ ಗ್ರಂಥವನ್ನು ಹೊರತರಲು ಪ್ರಾಧಿಕಾರಕ್ಕೆ ಅನುಮತಿ ನೀಡಿದ ಲೇಖಕರಾದ ಶ್ರೀ ಜಯಪ್ರಕಾಶ್ ಎನ್.ಡಿ. ಲಾಡ್ ಅವರಿಗೂ ಹಾಗೂ ಸಹಕರಿಸಿದ ಪ್ರಾಧಿಕಾರದ ಆಡಳಿತಾಧಿಕಾರಿಗಳಾದ ಶ್ರೀ ಅಶೋಕ ಎನ್.ಚಲವಾದಿ, ನನ್ನ ಆಪ್ತಕಾರ್ಯದರ್ಶಿ ಶ್ರೀ ಕೆ. ಮುಕುಂದನ್, ಸಂಯೋಜನಾಧಿಕಾರಿ ಶ್ರೀ ಜೆ.ಎನ್. ಶಾಮರಾವ್, ಪ್ರಾಧಿಕಾರದ ಎಲ್ಲಾ ಸದಸ್ಯರು ಹಾಗೂ ಸಿಬ್ಬಂದಿ ವರ್ಗದವರಿಗೆ ಆಭಾರಿಯಾಗಿದ್ದೇನೆ. ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿರುವ ಭಾಗ್ಯಂ ಬೈಂಡಿಂಗ್ ವರ್ಕ್ಸ್‌ಗೆ ನನ್ನ ಕೃತಜ್ಞತೆಗಳು. ಕನ್ನಡ ಸಾಹಿತ್ಯಪ್ರಿಯರು ಎಂದಿನಂತೆ ಈ ಕೃತಿಯನ್ನು ತೆರೆದ ಮನದಿಂದ ಸ್ವಾಗತಿಸಿ, ಪ್ರೋತ್ಸಾಹಿಸುವರೆಂಬ ನಂಬಿಕೆ ನನ್ನದಾಗಿದೆ.

(ಡಾ. ಸಿದ್ಧಲಿಂಗಯ್ಯ)
ಅಧ್ಯಕ್ಷರು

# ಲೇಖಕರ ಮಾತು

ಪ್ರಿಯ ಓದುಗರೇ,

ಈ ಪುಸ್ತಕವು ಬಹಳ ಹಿಂದೆಯೇ ಪ್ರಕಟವಾಗಬೇಕಿತ್ತು. ಕಾರಣಾಂತರಗಳಿಂದ ತಡವಾಯಿತು. ದಯವಿಟ್ಟು ಕ್ಷಮೆಯಿರಲಿ.

**''ಲಾಡ ಜನಾಂಗದ ನೆಲೆ ಹಾಗೂ ಸಂಸ್ಕೃತಿ''** ಎಂಬ ಶೀರ್ಷಿಕೆಯ ಈ ಸಮಾಜೈತಿಹಾಸಿಕ (Socio-Histroical) ಕೃತಿಯನ್ನು ತಮ್ಮ ಕೈಯ್ಯಲ್ಲಿಡಲು ಅತೀವ ಸಂತೋಷವೆನಿಸುತ್ತದೆ.

ಲಾಡರ ಬಗ್ಗೆ ಕೃತಿ ರಚನೆಗೆ ಎರಡು ಅಂಶಗಳು ಪ್ರೇರಣೆಯಾದವು :–

ಕ್ರಿ.ಶ. ೨೦೦೦ ದಲ್ಲಿ **ಮೈಸೂರಿನ, ಭಾರತೀಯ ಭಾಷೆಗಳ ಸಂಶೋಧನಾ ಸಂಸ್ಥೆ** ಸಹಕಾರದೊಂದಿಗೆ ಶ್ರೀಯುತ ಲಿಂಗದೇವರು ಹಳೇಮನೆಯವರ ಮಾರ್ಗದರ್ಶನದಲ್ಲಿ ಲಾಡರು ಮಾತನಾಡುವ ಭಾಷೆ 'ಚೌರಾಸಿ' ಅಥವಾ 'ಲಾಡಿ'ಯ ಬಗ್ಗೆ ಒಂದು **ಸಂಶೋಧನಾತ್ಮಕ ಕೃತಿ ''ಲಿಂಗ್ವಿಸ್ಟಿಕ್ ಫೀಚರ್ಸ್ ಆಫ್ ಲಾಡಿ ಆರ್ ಚೌರಾಸಿ''** ಎಂಬ **ಗ್ರಂಥವನ್ನು ಕೇಂದ್ರಸರ್ಕಾರಕ್ಕೆ ಒಪ್ಪಿಸಲಾಯಿತು.**

ನಂತರ, ಸತತ ಎಂಟು ವರ್ಷಗಳ ಕ್ಷೇತ್ರಕಾರ್ಯ, ಜನಾಂಗದ ಹಲವು ಹತ್ತು ಪಂಗಡಗಳ ಸಂದರ್ಶನ, ಇತಿಹಾಸ ಗ್ರಂಥಗಳ ಅಧ್ಯಯನ, ಹಿರಿಯರಿಂದ ಸಂಗ್ರಹಿಸಿದ ಪರಂಪರಾನುಗತವಾಗಿ ಬಂದಿರುವ ದಂತಕತೆಗಳು, ಆಚರಣೆಗಳು, ಅನುಭವಗಳ ವಿಚಾರಧಾರೆ, ಪ್ರತ್ಯಕ್ಷವಾಗಿ ಸಂದರ್ಶಿಸಿ ಸಂಗ್ರಹಿಸಿದ ಪುರಾವೆಗಳು ಇತ್ಯಾದಿ ಒಗ್ಗೂಡಿಸುವ ಕಾರ್ಯದಿಂದ ಮೂಡಿಬಂದ ಕೃತಿಯೇ 'ಲಾಡ ಜನಾಂಗದ ನೆಲೆ ಹಾಗೂ ಸಂಸ್ಕೃತಿ.'

**ಲಾಡ ಜನಾಂಗದ ವಿವಿಧ ಪಂಗಡಗಳ ಬಗ್ಗೆ ದೊರೆತ ಮೊದಲ ಎಳೆಯೆಂದರೆ, ಎಡ್ಗರ್ ಥರಸ್ಟನ್‌ರ 'ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ'' ಮತ್ತು ಹೆಚ್.ವಿ. ನಂಜುಂಡಯ್ಯ ಹಾಗೂ ಎಲ್.ಕೆ. ಅನಂತಕೃಷ್ಣಅಯ್ಯರ್‌ರವರು ಸಂಪಾದಿಸಿಕೊಟ್ಟಿರುವ ''ದಿ ಮೈಸೂರ್ ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್'' ಗೆಝೆಟಿಯರ್‌ನಲ್ಲಿ ನೀಡಿರುವ ಕೆಲವು ವಿವರಗಳು.**

ಈ ಕೃತಿಗೆ ಪ್ರೇರಣೆಯಾದ ಮತ್ತೊಂದು ಮುಖ್ಯ ಆಕರಗ್ರಂಥವೆಂದರೆ **''ಲಾಡ್ ಬ್ರಾಹ್ಮಣ್ ಏಕ್ ಥ್ರೋಟಕ್ ಐತಿಹಾಸಿಕ್ ವ ಸಾಮಾಜಿಕ್ ಅಧ್ಯಯನ್''** ಎಂಬ ಡಾ|| **ಅಭಯ ವ್ಯೆಂಕಟೇಶ್‌ಸಾವ್‌ಜಿಯವರ** ಲಾಡ ಬ್ರಾಹ್ಮಣರನ್ನು ಕುರಿತು ಬರೆದಿರುವ ಅದ್ಭುತ ಗ್ರಂಥ.

ಮೇಲ್ಕಂಡ ಕೃತಿಗಳೆರಡನ್ನು ಬಿಟ್ಟರೆ ಲಾಡ ಜನಾಂಗವನ್ನು ಕುರಿತ ಗ್ರಂಥಗಳು ಅತಿ ವಿರಳ ಅಥವಾ ಇಲ್ಲವೇ ಇಲ್ಲವೆನ್ನಬಹುದು. ಈ ಸಂದರ್ಭದಲ್ಲಿ ಲಾಡಜನಾಂಗದ **ಮಹಾರಾಷ್ಟ್ರದ ನೆಲೆ ಲಾಡಕಾರಂಜಾದಲ್ಲಿರುವ ಬ್ಯಾಂಕ್ ಅಧಿಕಾರಿ**

**ಶ್ರೀ ಮಹೇಂದ್ರರವನೆಯವರು ಇತ್ತೀಚೆಗೆ (ಕ್ರಿ.ಶ. ೨೦೦೮ರಲ್ಲಿ) ಬರೆದಿರುವ** ಲಾಡ **ಜೈನರನ್ನು ಕುರಿತ ಕೃತಿ ''ಮಹಾರಾಷ್ಟ್ರಾತಿಲ್ ದಿಗಂಬರ್ ಧಾಕಡ್ ಜೈನ್ ಸಮಾಜ್ – ಕಾಲ್ ಅಣಿ ಆಜ್''**. ಅಲ್ಲದೆ, ಗುಲ್ಬರ್ಗಾದ ಗೋಗಿಯ ಯುವಚೇತನ ರಘು ಬಿ. **ಸುಗಂಧಿಯವರು ರಚಿಸಿರುವ ''ಲಾಡರು ಮತ್ತು ಲಾಡರ ವಿಚಾರಗಳು''** ಎಂಬ ಬಿಡಿ ಲೇಖನಗಳ ಪುಸ್ತಕ. ಇದರಲ್ಲಿ ಸುಂಗಧಿಲಾಡರನ್ನು ಕುರಿತ ವಿಸ್ತ್ರತ ಮಾಹಿತಿಯನ್ನು ರಘುರವರು ನೀಡಿದ್ದಾರೆ. ಇದು ಒಂದು ಶ್ಲಾಘನೀಯ ಪ್ರಯತ್ನ.

'ಲಾಡ ಜನಾಂಗದ ನೆಲೆ ಹಾಗೂ ಸಂಸ್ಕೃತಿ' ಎಂಬ ಈ ಪುಸ್ತಕದಲ್ಲಿ ಅನೇಕ ಲಾಡ ಪಂಗಡಗಳ ನೆಲೆ–ಬೆಲೆಯನ್ನು ಆಧಾರಸಹಿತ ವಿವರಿಸಲಾಗಿದೆ. ಲಾಡರು ಲಾಡ ದೇಶದಿಂದ ವಲಸೆ ಬಂದ ಹಿನ್ನೆಲೆ, ಐತಿಹಾಸಿಕ ಮಾರ್ಗ ಕ್ರಮಿಸಿದ ಭೂಪಟಗಳು, ಲಾಡರು ಕ್ರಮೇಣ ನೆಲೆಸಿದ ವವಿಧ ಪ್ರದೇಶಗಳ ಬಗ್ಗೆ ಸ್ಥೂಲವಾದ ವಿವರಗಳು, ಪ್ರಾರಂಭದಿಂದಲೂ ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡಿರುವ ಲಾಡರ ವೃತ್ತಿ ಜೀವನ, ಧಾರ್ಮಿಕ, ಸಾಂಪ್ರದಾಯಿಕ ಆಚರಣೆಗಳು ಹಲವು ಹತ್ತು ಇಂದಿಗೂ ಬಿಟ್ಟುಕೊಡದ ತಮ್ಮದೇ ಆದ ಪಾರಂಪಾರಿಕ ವೈಶಿಷ್ಟ್ಯಗಳು, ದಂತಕಥೆಗಳು ವಿವಿಧ ಸಾಮಾಜಿಕ ಸ್ತರಗಳಲ್ಲಿ ಅಭಿವೃದ್ಧಿ ಕಂಡಿರುವ ಲಾಡರ ಸಾಧನೆಗಳು ಇತ್ಯಾದಿ ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ಮೂಲತಃ ಶ್ರಮಜೀವಿಗಳು, ನಾಡಿಗಾಗಿ ಜೀವದ ಹಂಗು ತೊರೆದು ಸೆಣಸಿದ ವೀರಯೋಧ ಲಾಡರಾಹುತರು; ಅಲ್ಲದೆ ಕಷ್ಟಸಹಿಷ್ಣುಗಳಾಗಿ ಇಂದಿಗೂ ಶ್ರಮಿಕ ಜೀವನ ನಡೆಸುತ್ತಿರುವ ಲಾಡ ಪಂಗಡಗಳ ಬಗ್ಗೆ ಸಾಕಷ್ಟು ವಿವರಗಳನ್ನು ಸಂಗ್ರಹಿಸಲಾಗಿದೆ. ಮೂಲ ಗುಜರಾತಿನಿಂದ ತಮ್ಮ ಪರಂಪರೆಯನ್ನು ಉಳಿಸಿಕೊಂಡು, ಮಹಾರಾಷ್ಟ್ರದಲ್ಲಿ ನೆಲೆಸಿ ಅಲ್ಲಿನ ಅನೇಕ ಅಂಶಗಳನ್ನು ಮೈಗೂಡಿಸಿಕೊಂಡು ಕಡೆಗೆ ಕರ್ನಾಟಕದಲ್ಲಿ ಬಂದು ನೆಲೆಸಿ ಇಲ್ಲಿನ ಅನೇಕ ಪದ್ಧತಿಗಳನ್ನು ಸಂಸ್ಕೃತಿಯನ್ನು ತಮ್ಮದಾಗಿಸಿಕೊಂಡಿರುವ ವಿವರಗಳು ಇದರಲ್ಲಿ ಚರ್ಚಿತವಾಗಿದೆ.

ಲಾಡರು ಮೂಲತಃ ಆರ್ಯಜನಾಂಗಿಯರು. ಆರ್ಯರ ದೈಹಿಕ ಲಕ್ಷಣಗಳನ್ನು ಇವರು ಮೈಗೂಡಿಸಿಕೊಂಡಿದ್ದಾರೆ. ಸಾಧಾರಣವಾಗಿ ಐದರಿಂದ ಐದೂವರೆ ಅಡಿ ಎತ್ತರದ ಸುಂದರ ಕಾಯದ ದೃಢಕಾಯರಾಗಿರುವ, ಪ್ರಕಾಶಮಾನವಾದ ಕಣ್ಣುಗಳುಳ್ಳ, ಉದ್ದಮೂಗಿನ, ಅಗಲವಾದ ಹಣೆಯುಳ್ಳ, ಗುಂಡಗಿನ ಮುಖಲಕ್ಷಣದ ವಿಶಾಲವಾದ ಎದೆಯ, ದಟ್ಟ ತಲೆಗೂದಲಿನ, ಬೆಳ್ಳಗೆ ಹಾಗೂ ಕೆಂಪಗಿನವರಲ್ಲದೆ, ಕೆಲವೊಂದು ಕಪ್ಪುವರ್ಣೀಯರೂ ಇದ್ದಾರೆ. ಆದರೆ ಈ ವ್ಯತ್ಯಾಸಗಳು ಗೌಣ.

**''ಗ್ಲೋರಿ ದಟ್‌ವಾಸ್ ಗುರ್ಜರ ದೇಶ''** ಎಂಬ ಕೆ.ಎಂ. ಮುನ್ಷಿಯವರ ಕೃತಿ (ಭಾರತೀಯ ವಿದ್ಯಾಭವನದ ಪ್ರಕಟಣೆ)ಯ ಪುಟ ೧೩೭ರಲ್ಲಿ ವಿವರಿಸಿರುವಂತೆ – "Lata-its women were noted for their beauty and elegance of speech" ಎಂದಿರುವಂತೆ **''ಲಾಟಪ್ರದೇಶದ ಸ್ತ್ರೀಯರು ಹೆಚ್ಚು ಲಾವಣ್ಯವತಿಯರೂ ಹಾಗೂ ಸುಮನೋಹರ ಮಧುರಭಾಷಿಣೆಯರೂ ಆಗಿದ್ದರು.''** ಎಂದು ಲಾಟದ ಸ್ತ್ರೀಯರ ಸೌಂದರ್ಯದ ಹಾಗೂ ಅವರ ಬುದ್ಧಿಮತ್ತೆಯ ವರ್ಣನೆಯನ್ನು ಮಾಡಲಾಗಿದೆ.

ಈ ಕೃತಿಯಲ್ಲಿ ಲಾಡ ಜನಾಂಗದ ಅನೇಕ ಪಂಗಡಗಳ ವಿಶಿಷ್ಟ ಆಚರಣೆಗಳು, ಅದಕ್ಕೆ ಸಂಬಂಧಿಸಿದ ಚಿತ್ರಗಳು, ಭೂಪಟ, ಕೆಲವಾರು ಐತಿಹ್ಯಗಳು, ಲಾಡರಾಹುತರಲ್ಲಿ ಪ್ರಚಲಿತದಲ್ಲಿರುವ ಗಾದೆ ಮಾತುಗಳು, ಒಗಟುಗಳು, ಸಂಪ್ರದಾಯದ ಮಾತುಗಳು, ಪಾರಿಭಾಷಿಕ ಶಬ್ದಗಳು ಮತ್ತು ಪದ ಸಂಪತ್ತು ಇವನ್ನೆಲ್ಲಾ ಸೇರಿಸಿರುವುದರಿಂದ ಈ ಪುಸ್ತಕದ ಉಪಯುಕ್ತತೆ ಹೆಚ್ಚಿ – **'ಲಾಡ ಜನಾಂಗದ ನೆಲೆ ಹಾಗೂ ಸಂಸ್ಕೃತಿ' ಲಾಡ ಪಂಗಡಗಳ ಸಾಂಸ್ಕೃತಿಕ ಕೈಪಿಡಿಯಾಗಿದೆ ಎನ್ನಬಹುದು.**

ಈ ಕೃತಿಗೆ ಅಗತ್ಯವಾದ ಮಾಹಿತಿಗಳ ಸಂಗ್ರಹಣೆಯಲ್ಲಿ ಮತ್ತು ಪ್ರಕಟಣೆಯ ಕಾರ್ಯದಲ್ಲಿ ಹಲವು ಹತ್ತು ಮಹನೀಯರು ಸಹಕರಿಸಿರುವುದರಿಂದ ಅವರಿಗೆಲ್ಲ ಕೃತಜ್ಞತೆ ಸಲ್ಲಿಸುವುದು ನನ್ನ ಮುಖ್ಯ ಕರ್ತವ್ಯವಾಗಿದೆ.

**ಲಾಡ ಜನಾಂಗಕ್ಕೆ ಕಿಂಚಿತ್ತಾದರೂ ಸೇವೆಸಲ್ಲಿಸಲು ಸ್ಫೂರ್ತಿಯಾದವರು ನನ್ನ ಪೂಜ್ಯ ತಂದೆ ಶ್ರೀ ಭೀಮರಾವ್ ದಿವಾಕರ್ ಹಾಗೂ ಮಾತೃಶ್ರೀ ನಾಗರತ್ನಮ್ಮನವರು.**

ಪ್ರಪ್ರಥಮವಾಗಿ ಈ ಪುಸ್ತಕದ ಪ್ರಕಟಣೆಗೆ ಪ್ರೇರಕಶಕ್ತಿ ಕನ್ನಡ ಪುಸ್ತಕ **ಪ್ರಾಧಿಕಾರದ ಅಧ್ಯಕ್ಷರಾಗಿರುವ ಡಾ|| ಸಿದ್ಧಲಿಂಗಯ್ಯನವರು.** ನನ್ನಂತಹ ಒಬ್ಬ ಉದಯೋನ್ಮುಖ ಸಂಶೋಧಕನನ್ನು ಪ್ರೀತಿ ವಿಶ್ವಾಸದಿಂದ ಆದರಿಸಿ, ಉತ್ತೇಜನ ನೀಡಿದ ಕಾರಣದಿಂದಲೇ ಈ ಕೃತಿಯನ್ನು ತಾವೆಲ್ಲಾ ಓದುವಂತಾಗಿದೆ. ಅವರ ಸಹಕಾರ ಅನುಪಮ. ಅಂತೆಯೇ, ಅದೇ **ಪ್ರಾಧಿಕಾರದ ಆಡಳಿತಾಧಿಕಾರಿಯಾಗಿರುವ ಶ್ರೀ ಅಶೋಕ್ ಚಲವಾದಿಯವರು** ಈ ಕೆಲಸದ ಹಿಂದಿರುವ ಪ್ರೇರಕ ಶಕ್ತಿ. ಅವರಿಗೆ ನಾನು ಅಭಾರಿಯಾಗಿದ್ದೇನೆ.

ಇಂದಿನ ದಿನಗಳಲ್ಲಿ ಪ್ರಕಟಣೆಯ ಕಾರ್ಯ ಬಹಳ ಕಷ್ಟದ ಕೆಲಸ. ಅಂತಹದರಲ್ಲಿ **ಇತಿಹಾಸತಜ್ಞ ಡಾ| ಸೂರ್ಯನಾಥ ಯು. ಕಾಮತ್‌ರವರು ಹೆಚ್ಚಿನ ಜವಾಬ್ದಾರಿಹೊತ್ತು, ಹಸ್ತಪ್ರತಿಯನ್ನು ಬಹುತಾಳ್ಮೆಯಿಂದ ಓದಿ, ತಿದ್ದಿ ಸೂಕ್ತ ಸಲಹೆ ಸೂಚನೆಗಳನ್ನಿತ್ತು,** ಈ ಕೃತಿಯ ಪ್ರಕಟಣೆಗೆ ಸಕಲ ನೆರವನ್ನೂ ನೀಡಿದ್ದಾರೆ. ಆ ಪೂಜ್ಯರನ್ನು ಈ ಸಂದರ್ಭದಲ್ಲಿ ನೆನೆಯುವುದು ನನ್ನ ಕರ್ತವ್ಯವಾಗಿದೆ. ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**ವಿಷಯ ಸಂಗ್ರಹಣಾಕಾರ್ಯದಲ್ಲಿ ಅತಿ ಹೆಚ್ಚಿನ ನೆರವು ನೀಡಿ ತಮ್ಮ ಅಮೂಲ್ಯ ಸಲಹೆಗಳನ್ನು ನೀಡಿದ ದಿವಂಗತ ಕೆ.ಸಿ. ಯಲ್ಲಪ್ಪ ನವರು ಪ್ರೇರಕ ಶಕ್ತಿಯಾಗಿದ್ದರು.** ಈ ಸಂದರ್ಭದಲ್ಲಿ ಅವರನ್ನು ನೆನೆಯುವುದು ಔಚಿತ್ಯಪೂರ್ಣ. ಮಹಾರಾಷ್ಟ್ರದ ಧೂಳೆಯ ಡಾ|| ಮು.ಬ. ಷಾಹ್‌ರವರ ಸಹಕಾರ ಸ್ಮರಣೀಯ. ಅಂತೆಯೇ ಔರಂಗಾಬಾದ್‌ನ **ಕನ್ನಡ್** ಪಟ್ಟಣದ ಪ್ರಾಧ್ಯಾಪಕ ಭಾಷಾತಜ್ಞ ಡಾ|| ರಮೇಶ್‌ಸೂರ್ಯವಂಶಿ ಮತ್ತು ಅವರ ಸಹೋದ್ಯೋಗಿ ವಂಜಾರಾ ಲಾಡ್ ಡಾ| ಶಿವಾಜಿ ಹುಸೇರವರ ನೆರವು ಎಂದೂ ಮರೆಯಲಾಗದ್ದು. ಇದೇ ರೀತಿ ಹುಬ್ಬಳ್ಳಿಯ ಶ್ರೀ ಈರಪ್ಪ ಸುಗಂಧಿ, ರೈಲ್ವೆ ಅಧಿಕಾರಿ ವೈ. ಮೋಹನ್ ಲಾಡ್, ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದ ಡಾ| ಶಂಕರ್‌ನಾರಾಯಣ ಹೊಳಿಹೊಸೂರ್, ಪ್ರಾಧ್ಯಾಪಕ ಎಂ.ಎಲ್. ಎಲಿಗಾರ್, ನೆಹರೂ ಮಾರ್ಕೆಟ್‌ನ ದಿ| ರಾಮಣ್ಣ ಕೃಷ್ಣಪ್ಪ ಸಹೋದರರ ಪೈಕಿ ಶ್ರೀ ರವೀಂದ್ರ

ಎಲಿಗಾರ್ ಹಾಗೂ ಶಿರಾದ ಹಿರಿಯರಾದ **ಶ್ರೀ ಎಸ್. ಗುಂಡಯ್ಯ ಲಾಡ್ ಮತ್ತು ಬೆಂಗಳೂರಿನ ಚಂದ್ರಧರ್‌ಲಾಡ್ ಇವರಿಗೆ ನಾನು ಅಭಾರಿಯಾಗಿದ್ದೇನೆ.**

ಈ ಸಂದರ್ಭದಲ್ಲಿ ಲಾಡ ಜನಾಂಗಕ್ಕೆ ಸರಿಯಾದ ಮಾರ್ಗದರ್ಶನ ನೀಡಲು ಮುಂದಾಗಿ **"Voice of Lads"** ಎಂಬ ಪತ್ರಿಕೆಯನ್ನು ದಿಟ್ಟತನದಿಂದ ಹೊರಡಿಸಿ ಲಾಡ ಜನಾಂಗದ ಬಗ್ಗೆ ಅನೇಕ ಅಂಶಗಳನ್ನು ಪ್ರಕಟಿಸಿದ **ಶ್ರೀ ಮಂಜುನಾಥ ಸುಗಂಧಿ ಲಾಡ** ಅವರಿಗೆ ನಾನು ಅಭಾರಿ.

ಇದಲ್ಲದೆ ಪುಸ್ತಕದ ಹಸ್ತಪ್ರತಿ ನೋಡಿ ಸಲಹೆ ಸಹಕಾರ ನೀಡಲು ಒಪ್ಪಿದ ಹಿರಿಯ ಸಂಶೋಧಕರಾದ ಡಾ| ಎಂ. ಚಿದಾನಂದ ಮೂರ್ತಿಯವರು, ಪ್ರಾಧ್ಯಾಪಕ ಎಸ್.ಜಿ. ಸಿದ್ಧರಾಮಯ್ಯನವರು, ಡಾ| ಬರಗೂರು ರಾಮಚಂದ್ರಪ್ಪನವರಿಗೆಲ್ಲಾ ನಾನು ಋಣಿಯಾಗಿದ್ದೇನೆ.

ನನ್ನ ಬರವಣಿಗೆಯ ಕೆಲಸದಲ್ಲಿ ಸದಾ ಸಹಕರಿಸುತ್ತಾ, ನನ್ನ ಬೇಕು, ಬೇಡಗಳನ್ನು ಗಮನಿಸಿಕೊಂಡು ನಾನು ಮಾಡಿದ ಕೆಲಸವನ್ನು ಟೀಕಿಸುತ್ತಲೇ ಪ್ರೀತಿತೋರಿ ಉತ್ತೇಜಿಸಿದ ನನ್ನ ಶ್ರೀಮತಿ ದಾಕ್ಷಾಯಣಿಗೂ, ರಕ್ಷಾಪುಟವನ್ನು ಅಂದವಾಗಿ ರಚಿಸಿಕೊಟ್ಟ ಶ್ರೀ ಎಂ. ಜೆ. ರಾಘವೇಂದ್ರನಿಗೂ, ಡಿ.ಟಿ.ಪಿ. ಮುದ್ರಣಕಾರ್ಯದಲ್ಲಿ ತೊಡಗಿಸಿಕೊಂಡು ಶ್ರದ್ಧೆಯಿಂದ ಕೆಲಸಮಾಡಿಕೊಟ್ಟ ಶ್ರೀಯುತ ರಮೇಶ್, ಶ್ರೀ ಪುಟ್ಟರಾಜು, ಶಾಂತಮ್ಮ ಹಾಗೂ ಎಂ.ಜೆ. ಕುಸುಮಲತಾ ಹಾಗೂ ಶ್ರೀಯುತ ದೇವರಾಜುರವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತದೆ.

**ಈ ಕೃತಿಯನ್ನು ಹೊರತರಲು ಕಾರಣಕರ್ತರಾದ ಲಾಡಬಂಧುಗಳಿಗೂ, ಉತ್ತೇಜನ ನೀಡಿದ ಲಾಡ ಸಮಾಜ ಸಂಘ ಸಂಸ್ಥೆಗಳಿಗೂ ಮತ್ತು ವ್ಯಕ್ತಿಗತವಾಗಿ ಸಹಕರಿಸಿದ ಎಲ್ಲ ಮಹನೀಯ, ಮಹಿಳೆಯರಿಗೂ ಲೇಖಕ ಋಣಿಯಾಗಿದ್ದಾನೆ.**

ಕೊನೆಯದಾಗಿ, ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿ, ಸಕಾಲಕ್ಕೆ ತಮ್ಮ ಕೈಯಲ್ಲಿಡಲು ಸಾಧ್ಯವಾಗುವಂತೆ ಶ್ರಮಿಸಿದ **ಕನ್ನಡ ಪುಸ್ತಕ ಪ್ರಾಧಿಕಾರದ ಸಿಬ್ಬಂದಿವರ್ಗದವರಿಗೂ, ಭಾಗ್ಯಂ ಮುದ್ರಣಾಲಯದ ಶ್ರೀಯುತ ಮೂರ್ತಿ ಹಾಗೂ ಸಿಬ್ಬಂದಿವರ್ಗದವರಿಗೂ ನನ್ನ ಧನ್ಯವಾದಗಳು.**

೨೭ ಮಾರ್ಚ್ ೨೦೦೯ — **ಜಯಪ್ರಕಾಶ್ ಎನ್.ಡಿ. ಲಾಡ್**

ಬೆಂಗಳೂರು – ೬೬

# ಪರಿವಿಡಿ

# ಲಾಡ ಜನಾಂಗದ ನೆಲೆ ಹಾಗೂ ಸಂಸ್ಕೃತಿ

## ಪ್ರಸ್ತಾವನೆ

ಈಗ ನಾನು ತಮಗೆ ಹೇಳ ಹೊರಟಿರುವುದು ಒಂದು ಜನಾಂಗದ ಏಳುಬೀಳಿನ ಐತಿಹಾಸಿಕ ದುರಂತ. ಇಂದಿನ ಗುಜರಾತ್ ರಾಜ್ಯದ ದಕ್ಷಿಣ ಭಾಗವಾಗಿ ವಿಜೃಂಭಿಸಿದ **'ಲಾಠ' ರಾಜ್ಯವೆಂಬ ಪ್ರದೇಶದಲ್ಲಿ ಮಹಾಭಾರತದ ಕಾಲದಿಂದಲೂ ಖ್ಯಾತಿ ಪಡೆದಿದ್ದ 'ಲಾಠ ದೇಶ'ದ ಜನ – ಜನಸಮುದಾಯವನ್ನು 'ಲಾಡ' ರೆಂದು ಕರೆಯಲಾಗುತ್ತಿತ್ತು. ಈ** ಲಾಡ ಜನಾಂಗವು. ಅನೇಕ ರಾಜಕೀಯ ವಿಪ್ಲವಗಳಿಂದ ಅಸ್ಥಿರತೆ ಹೊಂದಿ, ಬರಗಾಲದ ಭೀಕರ ಪ್ರಹಾರವನ್ನು ತಡೆಯಲಾರದೆ, ಅಲೆಮಾರಿಗಳಾಗಿ ವಸ್ತುಗಳನ್ನು ಹೊತ್ತುಮಾರುವ ಕಾಯಕದ ಪುಡಿ ವ್ಯಾಪಾರಿಗಳಾಗಿ, ಸಂಘಟಿತವಾಗಿದ್ದ ಜನಾಂಗ ಛಿದ್ರ ಛಿದ್ರವಾಗಿ ದೇಶದ ಎಲ್ಲೆಡೆ ಅನೇಕ ಸಣ್ಣಸಣ್ಣ ಗುಂಪುಗಳಾಗಿ ಜೀವನ ಸವೆಸುತ್ತಿದ್ದಾರೆ. ಇಂದಿಗೂ ಶೇಕಡಾ ೮೦ ರಷ್ಟು ಜನ ತಮ್ಮ ಪರಂಪರಾನುಗತ ಕುಲಕಸುಬಾದ ವೀಳ್ಯದೆಲೆ, ಅಡಿಕೆ, ಹೊಗೆಸೊಪ್ಪು, ಅರಿಸಿನ–ಕುಂಕುಮ, ಸುಗಂಧ ದ್ರವ್ಯಗಳು, ಕಾಫಿ–ಟೀಗಳನ್ನು ಮಾರುತ್ತಾ ಚಿಕ್ಕ ಪುಟ್ಟ ವ್ಯಾಪಾರಿಗಳಾಗಿ ಜೀವನ ಸಾಗಿಸುತ್ತಿದ್ದಾರೆ. ಕರ್ನಾಟಕದಲ್ಲಿ ಇವರ ಸಂಖ್ಯೆ ಕೇವಲ ೧೦ ಸಾವಿರದಿಂದ ೧೫ ಸಾವಿರಕ್ಕೆ ಮಿಕ್ಕಿಲ್ಲದಂತೆ ನೆಲೆಸಿದ್ದಾರೆ. ಪ್ರಮುಖವಾಗಿ ತುಮಕೂರು, ಮೈಸೂರು, ಬೆಂಗಳೂರು, ಚಿತ್ರದುರ್ಗ, ಹುಬ್ಬಳ್ಳಿ–ಧಾರವಾಡ, ಬೆಳಗಾಂ, ಗುಲ್ಬರ್ಗಾ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಇವರು ತಮ್ಮ ವ್ಯಾಪಾರ ವೃತ್ತಿಯಿಂದ ಜೀವಿಸುತ್ತಿದ್ದಾರೆ. ಶ್ರಮಜೀವಿಗಳಾದ ಲಾಡರು ಇಂದಿಗೂ ಕಡುಬಡವರೇ. ಶೈಕ್ಷಣಿಕವಾಗಿ ಹಿಂದುಳಿದ ಇವರ ಸ್ತ್ರೀಯರು ಹೆಚ್ಚಾಗಿ ಅನಕ್ಷರಸ್ಥರೇ. ಇವರಲ್ಲಿ ಅಕ್ಷರಸ್ಥರ ಸಂಖ್ಯೆ ಶೇ.೨೨–೨೫ ಮೀರಿಲ್ಲ. ಪುರುಷರಲ್ಲಿ ಕೇವಲ ಇಬ್ಬರು ಕೇಂದ್ರ ಸರ್ಕಾರಿ ನೌಕರರಿದ್ದಾರೆ.

ಹೆಚ್ಚಾಗಿ **ಶಕ್ತಿ ದೇವತೆಗಳನ್ನು ಪೂಜಿಸುವ ಇವರ ಆರಾಧ್ಯ ದೇವತೆಗಳೆಂದರೆ ಕುಲದೇವತೆ ಅಂಬಾ ಭವಾನಿ, ರೇಣುಕಾದೇವಿ, ಸವದತ್ತಿಯ ಎಲ್ಲಮ್ಮ ತಾಯಿ, ತುಮಕೂರು ಜಿಲ್ಲೆ ಕೋಡಿಹಳ್ಳಿಯ ಕೋಡೀಹಳ್ಳಿಯಮ್ಮ, ಮೈಲಾರ ಲಿಂಗೇಶ್ವರ, ಖರಸುಂಡಿ ಸಿದ್ದೇಶ್ವರ, ಭೈರವ, ಇತ್ಯಾದಿಗಳಲ್ಲದೆ, ಆಂಜನೇಯ, ಲಕ್ಷ್ಮೀನರಸಿಂಹ, ಶ್ರೀನಿವಾಸ, ದತ್ತಾತ್ರೇಯ ಇತರ ಮನೆದೇವರುಗಳನ್ನು ಪೂಜಿಸುತ್ತಾರೆ.** ಈ ಕೃತಿಯಲ್ಲಿ ಲಾಡರ ಉಗಮ, ರಾಜಕೀಯ ಏಳು–ಬೀಳುಗಳು, ವ್ಯಾಪಾರ ವಾಣಿಜ್ಯಗಳಲ್ಲಿ ಉತ್ಕರ್ಷ, ನಂತರದ ಅವನತಿ ಹಾಗೂ ವಲಸೆ ಇವುಗಳನ್ನು ಕೂಲಂಕುಷವಾಗಿ ಚರ್ಚಿಸಲಾಗಿದೆ.

**ಶತ ಶತಮಾನಗಳಿಂದಲೂ ಲಾಡ ಜನಾಂಗದವರು ಯೋಧರಾಗಿ, ವಣಿಕರಾಗಿ ರಾಷ್ಟ್ರಕ್ಕೆ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ.** ಜಿ.ಎ. ಗ್ರಿಯರ್‌ಸನ್ ಎಂಬ ವಿದ್ವಾಂಸ ಹಾಗೂ ಇತಿಹಾಸಕಾರ ಲಾಡ ಜನಾಂಗದ ಬಗ್ಗೆ ಮಾಹಿತಿ ಸಂಗ್ರಹಿಸಿ ತನ್ನ **'ಲಿಂಗ್ವಿಸ್ಟಿಕ್ ಸರ್ವೆ ಆಫ್**

ಇಂಡಿಯಾ' (ಭಾಗ–XIರಲ್ಲಿ) ಲಾಡರು ಅಲೆಮಾರಿ ಜನಾಂಗ (ಜಿಪ್ಸಿ) ವೆಂದೂ, ವೀಳ್ಯದೆಲೆ, ಅಡಿಕೆ, ಹೊಗೆ ಸೊಪ್ಪು, ಭಂಗಿ ಮುಂತಾದುವನ್ನು ಹೊತ್ತುಮಾರುವವರೆಂದೂ ತಿಳಿಸಿದ್ದಾನೆ. ಅಷ್ಟೇ ಅಲ್ಲದೆ ಲಾಡರು ಮಾತನಾಡುತ್ತಿದ್ದ ಭಾಷೆ 'ಲಾಡಿ'ಯ ಒಂದು ನಮೂನೆಯನ್ನು ಕಥೆಯ ರೂಪದಲ್ಲಿ ಕೊಟ್ಟಿದ್ದಾನೆ. ಇದೇ ರೀತಿಯಲ್ಲಿ ರೆವರೆಂಡ್ ಜಿ. ಮೆಕಾಲಿಸ್ಟರ್ ಎಂಬ ವಿದ್ವಾಂಸ ಕ್ರಿ.ಶ. ೧೯೦೮ ರಲ್ಲೇ 'ಲಾಡಿ' ಅಥವಾ ಚೌರಾಸಿ ಭಾಷೆಯ ಒಂದು ನಮೂನೆಯನ್ನು ಸಂಗ್ರಹಿಸಿ ಅದರ ವ್ಯಾಕರಣದ ರೀತಿ ನೀತಿಗಳನ್ನು ಸ್ಪಷ್ಟವಾಗಿ ವಿವರಿಸಿದ್ದಾನೆ. ಲಾಡಿ ಭಾಷೆಯು ಒಂದು ಮಿಶ್ರ ಭಾಷೆಯೆಂದೂ, ಅದನ್ನಾಡುವ ಲಾಡರು ಅಲೆಮಾರಿಗಳೆಂದೂ ತಿಳಿಸಿದ್ದಾನೆ. **ಇದೇ ಅಭಿಪ್ರಾಯವನ್ನು ಫ್ರಾನ್ಸಿಸ್ ಬುಕನನ್, ಎಡ್ಗರ್ ಥರ್‌ಸ್ಟನ್ ಹಾಗೂ ಎಲ್.ಕೆ. ಅನಂತಕೃಷ್ಣ ಐಯ್ಯರ್ ವ್ಯಕ್ತಪಡಿಸುತ್ತಾರೆ.**

ಭಾರತದಲ್ಲಿ ಸುಮಾರು ಎಂಟು ನೂರು ಭಾಷೆಗಳನ್ನು ಸ್ಥೂಲವಾಗಿ ಗುರ್ತಿಸಲಾಗಿದೆ. ಅವುಗಳಲ್ಲಿ ಒಂದು ಅಂದಾಜಿನ ಪ್ರಕಾರ ಮುಕ್ಕಾಲು ಭಾಗ ಭಾಷೆಗಳಿಗೆ ಲಿಪಿಯಿಲ್ಲ. ಕೆಲವೊಂದು ಭಾಷೆಗಳು ಅವನತಿಯ ಹಾದಿ ಹಿಡಿದಿವೆ. ಸಣ್ಣ ಸಂಖ್ಯೆಯಲ್ಲಿ ಮಾತನಾಡುವ ಭಾಷೆಗಳನೇಕ ತಮ್ಮ ಅಸ್ತಿತ್ವಕ್ಕಾಗಿ ಅನೇಕ ಸಮಸ್ಯೆ ಹಾಗೂ ಸವಾಲುಗಳನ್ನೆದುರಿಸುತ್ತಿವೆ. ಒಂದು ಭಾಷೆಯ ಅವನತಿಗೆ ಕಾರಣವಾಗಬಲ್ಲ ಅನೇಕ ಗಂಡಾಂತರಗಳಲ್ಲಿ ಮುಖ್ಯವಾದ ಕೆಲವು – **(i) ನಗರೀಕರಣದ ಪ್ರಭಾವ, (ii) ಪಾಶ್ಚ್ಯಾತ್ಯೀಕರಣ, (iii) ಸಂವಹನೆಯ ಜಾಗತೀಕರಣ ಮತ್ತು (iv) ಜನಸಂಖ್ಯೆಯ ಚಲನೆ.** ಲಾಡರು ಮಾತನಾಡುವ ಚೌರಾಸಿ ಅಥವಾ ಲಾಡಿ – ಈ ನಾಲ್ಕೂ ಗಂಡಾಂತರಗಳನ್ನು ಎದುರಿಸುತ್ತಿದೆ ಎನ್ನಬಹುದು.

ಸಣ್ಣ ಸಂಖ್ಯೆಯಲ್ಲಿ ಮಾತನಾಡುವ ಭಾಷೆಯ ಅನೇಕ ಜಾತಿ, ಪಂಗಡಗಳು ಸ್ವಲ್ಪ ಸ್ವಲ್ಪವೇ ತಮ್ಮ ಭಾಷೆಗೆ ತಿಲಾಂಜಲಿಯಿತ್ತು ತಮ್ಮ ಪ್ರದೇಶದ ಪ್ರಬಲ ಭಾಷೆಗಳ ತೆಕ್ಕೆಗೆ ಬೀಳುತ್ತಿವೆ. ಈ ಕ್ರಿಯೆಯು ಅನೇಕ ತೊಂದರೆಗಳಿಗೆ ಕಾರಣವಾಗಬಲ್ಲದು. ಒಂದು ಭಾಷೆಯು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ವರ್ಗಾಯಿತವಾದಾಗ ಅದು ತನ್ನಲ್ಲಿನ ಸಂಚಯಿತ ತಿಳುವಳಿಕೆಯನ್ನು ಆ ಪೀಳಿಗೆಗೆ ವರ್ಗಾಯಿಸುತ್ತದೆ ಎಂಬುದನ್ನು ಮರೆಯಬಾರದು. ಪರಿಗಣಿತವಾಗಲೀ ಬಿಡಲಿ ಜ್ಞಾನದ ನಷ್ಟ ಸಂಭವಿಸಿದರೆ ಅದರೊಂದಿಗೆ ಮಾನವ ಜನಾಂಗವೂ ಬಡವಾಗುವುದರಲ್ಲಿ ಸಂದೇಹವಿಲ್ಲ. ಅದರೊಟ್ಟಿಗೆ ಆ ಭಾಷೆ ಮಾತನಾಡುವವರ ಹಮ್ಮು–ಬಿಮ್ಮು ಹಾಗೂ ಅದರದೇ ಛಾಪುಳ್ಳ ಅಸ್ತಿತ್ವವೂ ಕಣ್ಮರೆಯಾಗುತ್ತದೆ. ಹಾಗಾಗಿ ಭಾಷಾ ಸಂವಹನೆ ಕುಂಠಿತವಾದಾಗ ಅದರೊಟ್ಟಿಗೆ ಸಂಚಯಿತ ಜ್ಞಾನವೂ ನಷ್ಟವಾಗುತ್ತದೆ. ಒಂದು ಸಮಾಜಕ್ಕೆ ಅಂತಹ ಒಂದು ಭಾಷೆಯ ಬೆಲೆಯ ಅರಿವಾದಾಗ ಅದರ ಸಂರಕ್ಷಣೆ, ದಾಖಲಿಸುವಿಕೆ ಹಾಗೂ ಅದರ ಪುನರುಜ್ಜೀವನಗೊಳಿಸುವಿಕೆ ಅತ್ಯಗತ್ಯವೆನಿಸುತ್ತದೆ. **ಚೌರಾಸಿ ಭಾಷೆಯು ಅಂತಹ ಒಂದು ಸಣ್ಣ ಜನಸಮೂಹವಾದ 'ಲಾಡ' ಎಂಬ ಜನಾಂಗದ ಮನೆಮಾತು. ಇದಕ್ಕೆ ಲಿಪಿಯಿಲ್ಲ.**

ಜನಾಂಗದಿಂದ ಜನಾಂಗಕ್ಕೆ ಮೌಖಿಕವಾಗಿ ವರ್ಗಾಯಿತವಾಗುತ್ತಿದೆ. ಆದರೆ, ಇತ್ತೀಚೆಗೆ ಇತರ ಸಣ್ಣ ಸಮೂಹಗಳ ಭಾಷೆಗಳಂತೆ ಇದೂ ಸಹ ಉಪೇಕ್ಷೆಗೊಳಗಾಗಿ ಅವನತಿಯತ್ತ ಸಾಗುತ್ತಿದೆ. ಅದರ ಅಸ್ತಿತ್ವವನ್ನು ದಾಖಲಿಸಿ, ಸಂರಕ್ಷಿಸಿ ಉಳಿಸುವುದು ಆ ಭಾಷೆಯನ್ನಾಡುವವರೆಲ್ಲರ ಆದ್ಯ ಕರ್ತವ್ಯವಾಗಿದೆ.

ಚೌರಾಸಿ ಭಾಷೆಗೆ ಲಿಪಿಯಿಲ್ಲ, ಅದು ಒಂದು ಸಂಕೀರ್ಣ ಭಾಷೆ. ಅದು ಈಗ ಕೇವಲ ಕ್ಷತ್ರಿಯ ಲಾಡರ ಮನೆಮಾತಾಗಿ ಉಳಿದುಕೊಂಡಿದೆ. ಇದಕ್ಕೆ ಲಿಪಿ ಇಲ್ಲದ್ದರಿಂದ ಇದರ ಸಂರಕ್ಷಣೆ ಕಷ್ಟವೆನಿಸಿದೆ. 'ಲಾಡ' ಎಂಬುದು ಒಂದು ಜಾತಿ ಸೂಚಕ ಪದವೆಂದು ಬಹಳಷ್ಟು ಜನರ ತಪ್ಪು ತಿಳುವಳಿಕೆ. 'ಲಾಡ' ಎಂಬ ಪದವು 'ಲಾಠ' ಎಂಬುದರಿಂದ ಬಂದಿದೆ. ಲಾಠ ದೇಶ ಎಂಬುದು ದಕ್ಷಿಣ ಗುಜರಾತ್ ಭಾಗಕ್ಕಿದ್ದ ಒಂದು ಪ್ರದೇಶದ ಹೆಸರು. 'ಲಾಠ' ದೇಶದಿಂದ ಬಂದವರು 'ಲಾಡ' ರೆಂದು ಹೆಸರು ಪಡೆದಿದ್ದಾರೆ. ಲಾಠ ದೇಶದಲ್ಲಿ ಚತುರ್ವರ್ಣದ ಎಲ್ಲರೂ ಇದ್ದುದ್ದರಿಂದ ಅವರೆಲ್ಲ ಲಾಡರೇ ಆಗಿದ್ದಾರೆ. ಲಾಠ ದೇಶದಿಂದ ಲಾಡರು ಕರ್ನಾಟಕಕ್ಕೆ ಹೇಗೆ ವಲಸೆ ಬಂದರೆಂಬುದು ಸಂಶೋಧನೆಯ ವಿಷಯವಾಗಿದೆ. ಲಾಡ ಜನಾಂಗದ ಬಗ್ಗೆ ಬರವಣಿಗೆ, ಶಾಸನಗಳು ಅಥವಾ ಸಾಹಿತ್ಯ ದೊರೆಯುವುದು ಕಷ್ಟಸಾಧ್ಯ.

ಲಾಠ ದೇಶಕ್ಕೆ ೧೪ನೇ ಶತಮಾನ ಒಂದು ಐತಿಹಾಸಿಕ ಕಾಲ. ಅನೇಕ ರಾಜಕೀಯ ವಿಪ್ಲವಗಳನ್ನು ಕಂಡು ಈ ರಾಜ್ಯ (ದಕ್ಷಿಣ ಗುಜರಾತ್) ಅನೇಕ ಧಾಳಿಗಳಿಗೂ ತುತ್ತಾದುದ್ದನ್ನು ಇತಿಹಾಸ ನೆನಪಿಸುತ್ತದೆ. ಒಂದು ಭಾಷೆ ಹಾಗೂ ಅದನ್ನು ಮಾತನಾಡುವ ಅತಿ ಸಣ್ಣ ಗುಂಪಿನ ಜನಾಂಗದ ಸಂಸ್ಕೃತಿ, ಅದರ ಅನೇಕ ಮಜಲುಗಳನ್ನು ಸಂಶೋಧಿಸಿ ಪುಸ್ತಕ ರೂಪಕ್ಕೆ ತರುವುದು ಒಬ್ಬ ಲೇಖಕನಿಗೆ ಸವಾಲೇ ಸರಿ. ಲಾಡ ಸಮಾಜವು ತನಗೆ ವಿಶಿಷ್ಟವಾದ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿರುವುದು ಕೌತುಕಮಯವಾದ ವಿಚಾರ. ಸಂಸ್ಕೃತಿಯೆನ್ನುವುದು ವ್ಯಕ್ತಿಗಿಂತ ಸಮಾಜದ ಭಾಗವಾಗಿದೆ. ವ್ಯಕ್ತಿಯು ಈ ಸಮಾಜದ ಸಂಸ್ಕೃತಿಯ ಒಂದು ಘಟಕವಾಗಿ ಒಡನಾಟ ಮತ್ತು ಹೋರಾಟಗಳಲ್ಲಿ ಮಗ್ನವಾಗುತ್ತಾನೆ. ಹೀಗೆ ಮನುಷ್ಯ, ಸಮಾಜ ಮತ್ತು ಸಂಸ್ಕೃತಿಗಳು ಸಾವಯವ ಸಂಬಂಧವನ್ನು ಪಡೆದಿವೆ. ಮನುಷ್ಯ ಸಮಾಜ ಇರುವೆಡೆಯಲ್ಲೆಲ್ಲಾ ಸಂಸ್ಕೃತಿ ಇದ್ದೇ ಇರುತ್ತದೆ. ಜನರ ಜೀವನ ವಿಧಾನವೇ ಸಂಸ್ಕೃತಿಯೆಂದು ಬಲ್ಲವರು ಹೇಳಿದ್ದಾರೆ.

**ಲಾಡರು ತಮ್ಮದೇ ಆದ ಕಸುಬು, ಭಾಷೆ ಮತ್ತು ಆಚರಣೆಗಳನ್ನು ಹೊಂದಿ ಸುಮಾರು ೧೪ನೇ ಶತಮಾನದಲ್ಲಿ ದಕ್ಷಿಣ ಗುಜರಾತಿನಿಂದ ಸಾಮಾಜಿಕ ಸ್ಥಿತ್ಯಂತರ ಹೊಂದಿ ಮಹಾರಾಷ್ಟ್ರದ ಸಾಂಸ್ಕೃತಿಕ ನೆಲೆಯಲ್ಲಿ ಸಾಗಿ ಕಡೆಗೆ ದಕ್ಷಿಣ ಭಾರತದ ಕರ್ನಾಟಕ ರಾಜ್ಯದಲ್ಲಿ ತಮ್ಮ ಶಾಶ್ವತ ನೆಲೆ ಕಂಡುಕೊಂಡದ್ದು** ಅವರ ವಲಸೆಯಿಂದ ಆರಂಭವಾಗಿ ಸುಮಾರು ಆರು ಶತಮಾನಗಳ ಕಾಲ ತಮ್ಮ ಪಾರಂಪರಿಕ ಬದುಕು ಮತ್ತು ಭಾಷೆಯನ್ನು ಮೂಲ ಸ್ವರೂಪದಲ್ಲಿ ಜತನ ಮಾಡಿರುವುದು ಈ ಲಾಡ ಸಂಸ್ಕೃತಿಯ

ವಿಶೇಷವೆನ್ನಬಹುದು. ಹೀಗೆ ಸಾಗಿ ಬಂದ ಈ ಜನಾಂಗದ ಏಳುಬೀಳುಗಳನ್ನು ದಾಖಲೆ ಮಾಡಿಕೊಳ್ಳಬೇಕಾಗಿ ಬಂದದ್ದು ಈ ಲೇಖಕನ ಸೌಭಾಗ್ಯವೇ ಸರಿ. ಈ ಕೃತಿಯಲ್ಲಿ ಲಾಡ ಜನಾಂಗದ ವಲಸೆಯ ಕಾರಣಗಳು ಮತ್ತು ವಲಸೆಯ ನಂತರದ ನೆಲೆಗಳ ಹಾಗೂ ಅವರ ಭಾಷೆಯ ಕುರಿತ ವಿವರಗಳಿವೆ.

ಲಾಡ ಜನಾಂಗವು ತನ್ನ ಪ್ರಾಚೀನ ಕಾಲದ ಜನಜೀವನ ಸ್ಥಿತಿ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಏಳುಬೀಳುಗಳು, ಅವರ ಆರ್ಥಿಕತೆ, ಉಡಿಗೆ-ತೊಡಿಗೆ, ಆಹಾರ ಪದ್ಧತಿ, ದೈವ, ಧರ್ಮ, ಹಬ್ಬಗಳು, ವಿವಾಹ ಸಂಭ್ರಮ, ಆಚರಣೆಗಳು, ಹುಟ್ಟು, ಸಾವು, ಭಾಷೆಯ ಶ್ರೀಮಂತಿಕೆ, ಸಾಹಿತ್ಯ ಇವುಗಳ ವಿವರವಾದ ಪ್ರಸ್ತಾಪವಿದೆ. ಈ ಪ್ರಮಾಣದ ಅಧ್ಯಯನ ನಡೆಸಲು ಜನಾಂಗದ ಕಾಳಜಿಯಿರುವ ಅನೇಕರು, ಜನಾಂಗದಲ್ಲೇ ಅತಿ ಹೆಚ್ಚು ಬೌದ್ಧಿಕ ಹಾಗೂ ವೈಚಾರಿಕ ಅಂಶಗಳನ್ನು ಮೈಗೂಡಿಸಿಕೊಂಡಿದ್ದ ಲೇಟ್ **ಎಸ್.ಭೀಮರಾವ್** ದಿವಾಕರ, **ಲೇಟ್ ಶಿಲೇಂದ್ರನಾಥ್ ರಾಹುತ್** ರವರ ಮಾರ್ಗದರ್ಶನ ನೆನಪಿಸಿಕೊಳ್ಳಬೇಕಾದ್ದು ಔಚಿತ್ಯಪೂರ್ಣ. **ಶ್ರೀಯುತ ಎಂ.ಪಾಪಣ್ಣನವರು ಸಮಾಜದ ಪ್ರಪ್ರಥಮ ಸರ್ಕಾರಿ ನೌಕರರಾಗಿ, ಶಿಕ್ಷಕರಾಗಿ, ರಂಗಕಲಾವಿದರಾಗಿ, ಗಮಕಿಗಳಾಗಿ ಮತ್ತು ಕವಿಗಳಾಗಿ ಸಮಾಜಕ್ಕೆ ಹೆಚ್ಚಿನ ಸೇವೆ ಸಲ್ಲಿಸಿದ್ದಾರೆ.**

# ಭಾರತದಲ್ಲಿ ಲಾಡ ಜನಾಂಗ

## (ಭಾಷೆ – ಸಂಸ್ಕೃತಿ – ಪಂಗಡಗಳು)

ನಮ್ಮ ಭಾರತ ದೇಶ ಯುಗ ಯುಗಗಳಿಂದಲೂ ಅನೇಕ ಮಹಾನ್ ಸ್ತ್ರೀ ಪುರುಷರಿಗೆ ಜನ್ಮ ಕೊಟ್ಟ ಪುಣ್ಯಭೂಮಿ. ಇಲ್ಲಿ ಧಾರ್ಮಿಕ ಜಾಗೃತಿಯನ್ನುಂಟು ಮಾಡಿದ ಭಕ್ತ ಸಾಧು ಸಂತರು ಜನ್ಮ ಪಡೆದಿದ್ದಾರೆ. ಹಾಗೆಯೇ ಸ್ವದೇಶ ರಕ್ಷಣೆ ಮತ್ತು ಸನಾತನ ಧರ್ಮ ರಕ್ಷಣೆಗಾಗಿ ರಣ ಕಹಳೆಯನ್ನು ಮೊಳಗಿಸಿ ವಿಜಯಶಾಲಿಗಳಾದ ವೀರ ಪುರುಷರೂ ಜನ್ಮ ತಾಳಿದ್ದಾರೆ.

ಹಿಂದೂ ಧರ್ಮದ ಎಲ್ಲಾ ಜಾತಿ ಪಂಗಡಗಳು, ಉಪ ಪಂಗಡಗಳು ಪರಸ್ಪರ ಸಹಕಾರ, ಶಾಂತಿ, ಸಹಬಾಳ್ವೆಗಳಲ್ಲಿ ನಂಬಿಕೆಯಿಟ್ಟಿರುವವರು. ಪ್ರತಿಯೊಂದು ಪಂಗಡವೂ ತನ್ನ ತನ್ನ ಸಂಪ್ರದಾಯ, ಆಚಾರ–ವಿಚಾರಗಳನ್ನು ಪಾಲಿಸಿಕೊಂಡು ಕಲಾನಂತರದ ತಮ್ಮ ನಂಬಿಕೆಗಳ ಬಲದಿಂದ ಬದುಕುತ್ತಿದ್ದಾರೆ. ಸಂತೃಪ್ತಿಯೊಂದೇ ಎಲ್ಲ ಪಂಗಡಗಳ ಧ್ಯೇಯವಾಗಿದೆ. ಶತಶತಮಾನಗಳಿಂದಲೂ ಲಾಡ ಜನಾಂಗದವರು ಯೋಧರಾಗಿ, ವಣಿಕರಾಗಿ ರಾಷ್ಟ್ರಕ್ಕೆ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಲಾಡರು 'ಲಾಠ' ರಾಜ್ಯಕ್ಕೆ ಸೇರಿದವರು. ಲಾಠ ರಾಜ್ಯವೆಂಬುದು 'ದಕ್ಷಿಣ ಗುಜರಾತ್'ಗಿದ್ದ ಪ್ರಾಚೀನ ಹೆಸರು. ಈ ಕುರಿತ ಉಲ್ಲೇಖಗಳನ್ನು ಪ್ರಾಚೀನ ಗ್ರಂಥಗಳಲ್ಲಿ ನಮೂದಿಸಲಾಗಿದೆ.

### ಲಾಟ ದೇಶ – ಭೌಗೋಳಿಕ ವಿವರಗಳು :

'ಲಾಠ' ರಾಜ್ಯವು ಭಾರತದ ಪಶ್ಚಿಮ ಪ್ರದೇಶದ ಗುಜರಾತ್ ದಕ್ಷಿಣ ಭಾಗಗಳನ್ನೊಳಗೊಂಡಿತ್ತೆಂದು ತಿಳಿದುಬರುತ್ತದೆ. ಇತಿಹಾಸಕಾರರಾದ ಸುಂದರ್ ಲಾಲ್ ಜೈನ್ ರವರು ಮುದ್ರಿಸಿರುವ 'ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತದ ಅಭ್ಯಾಸ' ವೆಂಬ ಕೃತಿಯಲ್ಲಿ ತಿಳಿಸಿರುವಂತೆ ''ಪ್ರಾಚೀನ ಲಾಠ ದೇಶವು ಕೆಳಗಿನ ಮಹಿ ಹಾಗೂ ತಾಪಿ ನದಿಗಳ ಮಧ್ಯದ ಪ್ರದೇಶವಾಗಿತ್ತು'' ಅರಬ್ ಪ್ರವಾಸಿ ಇಬ್ನ್/ಸಯದ್ ತನ್ನ ಭಾರತ ಸಂಂದರ್ಶನದಲ್ಲಿ ''ಲಾಠ ಸಾಮ್ರಾಜ್ಯದ ತೀರ ಪ್ರದೇಶವು ಥಾಣೆಯನ್ನು ಒಳಗೊಂಡಿತ್ತು'' ಎಂಬುದಾಗಿ ಅಭಿಪ್ರಾಯ ಪಡುತ್ತಾನೆ. ಕೆ.ಎಂ.ಮುನ್ಷಿಯವರು ***''ಗುಜರಾತ್ ಹಾಗೂ ಅದರ ಸಾಹಿತ್ಯ''*** ಎಂಬ ಕೃತಿಯಲ್ಲಿ ತಿಳಿಸಿರುವಂತೆ, ಮಹಿಯ ದಕ್ಷಿಣಕ್ಕೆ, ಕೆಲವು ಸಂದರ್ಭಗಳಲ್ಲಿ ನರ್ಮದೆಯ ದಕ್ಷಿಣ ಭಾಗ, ಪೂರ್ಣಾ ಅಥವಾ ದಮನ್‌ನವರೆಗೆ ವಿಸ್ತರಿಸಿದ್ದ ಪ್ರದೇಶವೇ 'ಲಾಠ' ಎನ್ನಲಾಗಿದೆ. ಇದನ್ನು ಉತ್ತರ ಕೊಂಕಣ ಪ್ರದೇಶವೆಂದೂ ಕರೆಯಲಾಗಿದೆ.

ಮಹಾಭಾರತದ ಅನುಶಾಸನ ಪರ್ವದ ಮೂವತ್ತೈದನೆಯ ಅಧ್ಯಾಯದ ಹದಿನೆಂಟನೇ ಶ್ಲೋಕದಲ್ಲಿ 'ಲಾಠ'ದ ಉಲ್ಲೇಖವಿರುವುದನ್ನು ಕಾಣಬಹುದು :–

**''ಮೇಖಲಾ ದ್ರಾವಿಡಾ ಲಾಟಾ ಪೌಂಡ್ರಾ ಕಾಣ್ವಶಿರಾಸ್ತಥಾ ।**
**ಶೌಂಡಿಕಾ ದರದಾ ದಾರ್ವಾಶಿಜೌರಾಃ ಶಬೂರಬರ್ಬರಾಃ ॥ ೧೮॥**

ಮೇಖಲದ ಪ್ರದೇಶಗಳು ವಿಂಧ್ಯ–ಸಾತ್ಪುರಗಳನ್ನು ಬೆಸೆಯುವ ಕೊಂಡಿಯಾಗಿ ಮಧ್ಯಪ್ರದೇಶದ ಕೈರಾಘರ್‌ನಿಂದ ರೇವಾ ಪ್ರದೇಶಗಳವರೆಗೆ ವಿಸ್ತರಿಸಿವೆ; ದ್ರಾವಿಡವು ಈಗಿನ ಚೆನ್ನೈನಿಂದ ಕನ್ಯಾಕುಮಾರಿವರೆಗೆ; ಪೌಂಡ್ರವು ಬಂಗಾಳದಲ್ಲಿ ಆಗ್ನೇಯ ಭಾಗವನ್ನು ಬಿಟ್ಟು ಜೊತೆಗೆ ಬಿಹಾರ ಮತ್ತು ಒರಿಸ್ಸಾಗಳನ್ನೊಳಗೊಂಡದ್ದು; ದರದವು ಉತ್ತರದ ಕಾಶ್ಮೀರವನ್ನು ಒಳಗೊಂಡದ್ದು; ಬರ್ಬರವು ಒಂದು ಪ್ರಾಚೀನ ಪ್ರದೇಶವಾಗಿತ್ತು. ಲಾಟ ದೇಶವು ದಕ್ಷಿಣ ಗುಜರಾತ್‌ನ ಪ್ರದೇಶಕ್ಕಿದ್ದ ಇನ್ನೊಂದು ಹೆಸರು.



ಸ್ಕಂದ ಪುರಾಣದ ಮಹೇಶ್ವರ ಖಂಡದ ಮೊದಲ ಭಾಗದ ಕೌಮಾರಿಕಾ ಖಂಡದ ಮೂರನೇ ಭಾಗದಲ್ಲಿ ''ಏಕಾವಿಂಶತಿ ಸಾಹಸ್ರೌದ್ ಲಾಡದೇಶಃ ಪ್ರಕೀರ್ತಿತ್'' ಅಂದರೆ, ಇಪ್ಪತ್ತೊಂದು ಸಾವಿರ ಗ್ರಾಮಗಳನ್ನೊಳಗೊಂಡ ಲಾಟದೇಶವು ಪ್ರಖ್ಯಾತಿಯಾಗಿದ್ದಿತು ಎಂದು ವರ್ಣಿಸಲಾಗಿದೆ. ಅದನ್ನೇ ಲೇಖಕ ಉಮಾಶಂಕರ ಜೋಷಿಯವರು ತಮ್ಮ ''ಪುರಾಣೋಮಾ ಗುಜರಾತ್'' ಎಂಬ ಗ್ರಂಥದಲ್ಲಿ ***''ಲಾಡ ದೇಶ ಜೆಮಾ ೨೧,೦೦೦ ಗ್ರಾಮ ಹತಾ, ತೇಜ್ ಲಾಟ, ಜುಯೋಲಾಟ''***, ಎಂದು ಹೇಳಿದ್ದಾರೆ. **'ಲಾಡ'** ಎಂಬುದೇ **'ಲಾಟ'**ವಾಗಿದೆ. **ಲಾಟ ರಾಜ್ಯದ ಬಗ್ಗೆ ಮತ್ತೊಂದು ಮುಖ್ಯ ಆಧಾರ ಗ್ರಂಥವೆಂದರೆ, ಸೂತ್ರ ರೂಪದಲ್ಲಿರುವ 'ಲ್ಯಾಟ್ಯಾಯನ' ಎಂಬ ಪ್ರಾಚೀನ ಗ್ರಂಥ.** ಇದರಲ್ಲಿ ಲಾಟ ದೇಶದ ಭೌಗೋಳಿಕ ಅಂಶಗಳಷ್ಟೇ ಅಲ್ಲದೆ ಲಾಟಬ್ರಾಹ್ಮಣರ ಇತಿಹಾಸವೂ ಸೇರಿದೆ.

ಬಾಲರಾಮಾಯಣದ ಹತ್ತನೇ ಅಧ್ಯಾಯದ ನಲವತ್ತೆಂಟು – ನಲವತ್ತೊಂಭತ್ತನೇ ಸಾಲುಗಳಲ್ಲಿ ***''ಲಾಟವು ಭಾರತಕ್ಕೆ ಕಿರೀಟಪ್ರಾಯ''*** ವೆಂದು ಹೇಳಿದೆ. ಇದನ್ನೇ ರಾಜಾಭೋಜನ ಆಸ್ಥಾನದಲ್ಲಿದ್ದ ಕವಿ ರಾಜಶೇಖರನು ''ಲಾಟವು (ದಕ್ಷಿಣ ಗುಜರಾತ್) ಪೃಥ್ವಿಯ ಕಿರೀಟಕ್ಕೆ ಹೆಮ್ಮೆಯ ಗರಿಯೆನಿಸಿತ್ತು'' ಎಂಬುದಾಗಿ ವರ್ಣಿಸಿದ್ದಾನೆ. ''ಲಾಟ ರಾಜ್ಯದ ಪ್ರದೇಶವು ಕ್ಯಾಂಬೆಕೊಲ್ಲಿಯಿಂದ ನರ್ಮದೆಯ ತಟದವರೆಗೆ ವಿಶಾಲವಾಗಿ ವಿಸ್ತರಿಸಿತ್ತು, ಲಾಟ ದೇಶದ ರಾಜಧಾನಿ ನಂದಿಪುರಿಯಾಗಿತ್ತು'' ಇದನ್ನು 'ಗುರ್ಜರ ದೇಶದ ವೈಭವ' ಎಂಬ ಕೃತಿಯಲ್ಲಿ ಕೆ.ಎಮ್.ಮುನ್ಷಿಯವರು ಉಲ್ಲೇಖಿಸಿದ್ದಾರೆ. ***''ಲಾಟ ರಾಜ್ಯವು ಆಳ್ವಿಕೆಯ ಸಂದರ್ಭದ ಸಮಕಾಲೀನ ಸಾಮ್ರಾಜ್ಯವು ಗುಪ್ತರದು. ಅದರೊಟ್ಟಿಗೆ ವಾಕಾಟಕರು ಪ್ರಬಲರಾಗಿದ್ದ ಕಾಲ, ಹರಿಸೇನ ವಾಕಾಟಕನು ಕುಂತಳ, ಅವಂತಿ, ಲಾಟ ಮತ್ತು ಆಂಧ್ರ ರಾಜ್ಯಗಳ ಮೇಲೆ ಅನೇಕ ಆಕ್ರಮಗಳನ್ನು ನಡೆಸಿದನು.''*** ಎಂದು ಇತಿಹಾಸಕಾರ ಆರ್.ಎಸ್. ತ್ರಿಪಾಠಿಯವರು ತಮ್ಮ ಕೃತಿ ''ಪ್ರಾಚೀನ ಭಾರತದ ಇತಿಹಾಸ'' ದಲ್ಲಿ ಉಲ್ಲೇಖಿಸಿದ್ದಾರೆ. ವಿದ್ಯಾಧರ್ಮಹಜನ್ ಎಂಬ ಪ್ರಸಿದ್ಧ ಇತಿಹಾಸಕಾರರು ಅಭಿಪ್ರಾಯಪಡುವಂತೆ ***''ಪ್ರವರ ಸೇನ ವಾಕಾಟಕನು ನರ್ಮದೆಯ ಉತ್ತರದವರೆಗೂ ಧಾಳಿ ನಡೆಸಿದನು''*** ಎಂಬ ತ್ರಿಪಾಠಿಯವರ ಅಭಿಪ್ರಾಯವನ್ನು ಸಮರ್ಥಿಸುತ್ತಾರೆ.

ಲಾಟ ದೇಶದ ಬಗ್ಗೆ ಕೆಲವೊಂದು ವಿಭಿನ್ನ ಅಭಿಪ್ರಾಯಗಳೂ ವ್ಯಕ್ತವಾಗಿವೆ. ಅವುಗಳಲ್ಲಿ ಮುಖ್ಯವಾಗಿ ಜೈನ ಗ್ರಂಥಗಳಿಂದ ಉಲ್ಲೇಖಿಸಲ್ಪಟ್ಟವು :

'ರಾಢ' ಎನ್ನುವುದು ತಾಮಲಕ್, ಮಿಡ್ನಾಪುರ, ಹೂಗ್ಲಿ ಹಾಗೂ ಬರ್ದ್ವಾನ್ ಜಿಲ್ಲೆಗಳನ್ನೊಳಪಟ್ಟಂತೆ ಗಂಗಾನದಿಯ ಪಶ್ಚಿಮದ ಬಂಗಾಲದ ಒಂದು ಭಾಗವಾಗಿದೆ. 'ರಾಢ' ಲಾಡವಾಗಿದೆ. ಬೌದ್ಧರು ಇದನ್ನು 'ಲಾಲ' ಎಂದೂ, ಜೈನರು 'ಲಾಡ' ಎಂದೂ ಕರೆಯಲ್ಪಡುವುದಾಗಿದೆ. ಜೈನರ ಅಭಿಮತದಂತೆ 'ಬ್ರಜಭೂಮಿ' ಮತ್ತು 'ಶುಂಭಭೂಮಿ' ಲಾಡದ ಎರಡು ಭಾಗಗಳು. ಅಲ್ಲಿ ಮಹಾವೀರರು ಅಥವಾ ವರ್ಧಮಾನರು ಸುಮಾರು ಇಪ್ಪನ್ನಾಲ್ಕು ವರ್ಷಗಳಿಗೂ ಹೆಚ್ಚುಕಾಲ 'ಜಿನತ್ವ' ಪಡೆಯುವ ಮುನ್ನ ಸಂಚರಿಸಿದರು'.

ಹೀಗೆ ಲಾಡ ಪ್ರದೇಶವನ್ನು ಬಂಗಾಳದ ಭಾಗಗಳೆಂದು ಪಶ್ಚಿಮದ ಗುಜರಾತ್ ಮೂಲಕ್ಕೆ ತದ್ವಿರುದ್ಧ ಭಾವನೆಯನ್ನು ವ್ಯಕ್ತಪಡಿಸುತ್ತಾರೆ, ಶ್ರೀ ನಂದುಲಾಲ್ ಡೇ ಅವರು "ದಿ **ಜಿಯೋಗ್ರಾಫಿಕಲ್ ಡಿಕ್ಷನರಿ ಆಫ್ ಏನ್‌ಷಿಯಂಟ್ ಎಂಡ್ ಮಿಡೀವಲ್ ಇಂಡಿಯಾ**" ಎಂಬ ತಮ್ಮ ಇತಿಹಾಸದ ಪುಸ್ತಕದಲ್ಲಿ ಹೀಗೆಂದು ತಿಳಿಸಿದ್ದಾರೆ.

ಶ್ರೀ ಕೈಲಾಸ ಚಂದ್ರ ಜೈನ್ ರವರ "**ಮಹಾವೀರ ಮತ್ತು ಆತನ ಕಾಲ**" ಎಂಬ ಕೃತಿಯಲ್ಲಿ ಅವರು ವ್ಯಕ್ತಪಡಿಸಿರುವಂತೆ – "***ಮಹಾವೀರ ಮತ್ತು ಘೋಷಾಲರು ಲಾಡ ದೇಶಕ್ಕೆ ಪರ್ಯಟನ ಗೈದು ಅಲ್ಲಿ ಮಹಾವೀರರು ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಯಿತು. 'ಲಾಢ' ಅಥವಾ 'ರಾಢ' ಎಂಬುದು ಆಧುನಿಕ ಹೂಗ್ಲಿ, ಹೌರಾ, ಬಂಕಾಪುರ ಮತ್ತು ಮಿಡ್ನಾಪುರ ಜಿಲ್ಲೆಗಳ ಪೂರ್ವ ಭಾಗಗಳನ್ನು ಒಳಗೊಂಡಿತ್ತು.***" ಜೈನ ಗ್ರಂಥಗಳು ತಮ್ಮ ಅಹಿಂಸಾ ಮಾರ್ಗವನ್ನು ಎತ್ತಿಹಿಡಿಯಲು ಉತ್ಪ್ರೇಕ್ಷೆಗೊಳಿಸಿ, "***ಮಹಾವೀರರು ಮತ್ತು ಅವರ ಅನುಯಾಯಿಗಳ ಮೇಲೆ ಲಾಡರು ನಾಯಿಗಳನ್ನು ಅಟ್ಟಿ, ಕೋಲುಗಳಿಂದ ಥಳಿಸಿ, ಕಾಲಿನಿಂದ ಒದ್ದು ಇಟ್ಟಿಗೆ, ಮಡಕೆ ಚೂರುಗಳಿಂದ ಹೊಡೆದು ಅಪಮಾನಗೊಳಿಸಿ ನೋಯಿಸಿದರು***" ಎಂದು ಈ ಜೈನ ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

ಆದರೆ, ಲಾಡರ ಇನ್ನೊಂದು ಪಂಗಡವಾದ ಲಾಡ್‌ವಣಿಕ ಸಮಾಜವು ಈ ಕೆಳಕಂಡಂತೆ, ಲಾಟದ ವರ್ಣನೆ ನೀಡುತ್ತದೆ.

"ಮೊಘಲರು ಆಳುತ್ತಿದ್ದ ಇಂದಿನ ಮಧ್ಯಪ್ರದೇಶದ ಬಹರಾನ್‌ಪುರ ನಗರದ ಬಳಿ 'ಲಾಟ ಪ್ರದೇಶ' ಎಂಬ ಸಂಸ್ಥಾನವಿತ್ತು, ಶ್ರೀ ಕೃಷ್ಣನನ್ನು ಆರಾಧಿಸುವ ವೈಷ್ಣವ ಜನಾಂಗದವರನ್ನು 'ಲಾಟ'ರೆಂದು ಕರೆಯಲಾಗುತ್ತಿತ್ತು. ಈ ಲಾಟರು ವ್ಯಾಪಾರ ಹಾಗೂ ವಾಣಿಜ್ಯದಲ್ಲಿ ನಿಷ್ಣಾತರಾಗಿದ್ದು ಅಪಾರ ಸಂಪತ್ತನ್ನು ಗಳಿಸಿ ಆ ಪ್ರದೇಶದ ಆರ್ಥಿಕ ವ್ಯವಸ್ಥೆಯ ಮೇಲೆ ಪ್ರಬಲವಾದ ಹತೋಟಿ ಹೊಂದಿದ್ದರು. ಲಾಟರ ಪ್ರಾಬಲ್ಯವು ಇತರರಿಗೆ ಸಹಿಸಲಾಗದೆ ಅಲ್ಲಿನ 'ಸುಬಾ', ಲಾಟ ಜನಾಂಗವನ್ನು ಮಧ್ಯಪ್ರದೇಶದಿಂದ ಉಚ್ಚಾಟಿಸಿತು. ಹೀಗೆ ಹೊರದೂಡಲ್ಪಟ್ಟ ಲಾಟರು ನರ್ಮದಾ ನದಿಯ ಬಳಿಯ ರೇವಾ ಪಟ್ಟಣದ ಬಳಿ ಈಗ ಪೇಟ್ ಲಾಡ್ ಎಂದು ಕರೆಯಲ್ಪಡುವ ಗುಜರಾತ್‌ನಲ್ಲಿ ನೆಲೆಸಿದರು. ಅವರಲ್ಲಿ ಕೆಲವು ಲಾಟರ ಗುಂಪು ಇನ್ನೂ ಉತ್ತಮ ಅವಕಾಶಗಳಿಗಾಗಿ ದಾಬೋಯ್, ಸೂರತ್ ಹಾಗೂ ಖಂಬಾಟಗಳಲ್ಲಿ ನೆಲೆಸಿದರು. ಇಲ್ಲಿ ನೆಲೆಸಿದ ಸಮಯದಲ್ಲೇ ಅವರು 'ಲಾಟ'ರ ಬದಲಾಗಿ 'ಲಾಡ' ಎಂದು ಕರೆಸಿಕೊಳ್ಳತೊಡಗಿದರು. ಹೀಗೆ ಗುಜರಾತಿನ ಭಾಗಗಳಲ್ಲಿ ನೆಲೆಸಿರುವ ಈ ವೈಷ್ಣವ ಲಾಡರ ಸಂಖ್ಯೆ ಹತ್ತಿರ ಹತ್ತಿರ ೬–೭ ಲಕ್ಷ ಮೀರುತ್ತದೆ.

ಆದರೆ, ಲಾಡ ಕಾರಂಜಾದಲ್ಲಿರುವ ಒಂದು ಪಂಗಡದ ಜೈನ ಲಾಡರು. ತಾವು ರಾಜಾಸ್ಥಾನದಿಂದ ವಲಸೆ ಬಂದವರೆಂದು ಹೇಳುತ್ತಾರೆ. ಕ್ರಿ.ಶ. ೧೨–೧೩ ನೇ ಶತಮಾನದ ಕಾಲದಲ್ಲಿ ರಾಜಾಸ್ತಾನದ ಬುಂದಿ ಜಿಲ್ಲೆಯನ್ನೊಳಗೊಂಡ 'ಲಾಡಪುರ ಸಂಸ್ಥಾನ'ವಿತ್ತೆಂದು ಹೇಳಲಾಗಿದೆ. ಆ ಲಾಡಪುರ ಸಂಸ್ಥಾನವನ್ನು ಆಳುತ್ತಿದ್ದ ದೊರೆಗಳಲ್ಲಿ ರಾಜಾ ಧರಣೀಧರನು

ಪ್ರಮುಖನು. ೩ ನೇ ಶತಮಾನದ ಕಾಲದ ಸಮಯದಲ್ಲಿ ಹಲವೊಂದು ರಾಜಕೀಯ ವಿಪ್ಲವಗಳಿಂದ ಲಾಡರು ಅಲ್ಲಿಂದ ವಲಸೆ ಬಂದು ಬುಂದೇಲಖಂಡ–ಮಾಳವ ಮತ್ತು ವಿದರ್ಭಗಳ ಮೂಲಕ ಕರಂಜಾಲಾಡದ ಮಹಾರಾಷ್ಟ್ರದಲ್ಲಿ ನೆಲೆಸಿದರೆಂದು ತಿಳಿದುಬರುತ್ತದೆ.

ಹೀಗೆ ಲಾಡರ ಉಗಮಸ್ಥಾನದ ಬಗ್ಗೆ ವಿವಿಧ ಅಭಿಪ್ರಾಯಗಳು ವ್ಯಕ್ತವಾಗಿವೆ. ಆದರೆ, ಈ ಅಭಿಪ್ರಾಯಗಳನ್ನು ಕೂಲಂಕುಶವಾಗಿ ವಿಶ್ಲೇಷಿಸಿದರೆ ತಿಳಿದುಬರುವ ಒಂದು ಖಚಿತ ಅನಿಸಿಕೆಯೆಂದರೆ, ಪ್ರಾಚೀನ ಭಾರತದಲ್ಲಿ ಲಾಠ ದೇಶದ ಖ್ಯಾತಿ ಎಲ್ಲೆಡೆ ಹರಡಿತ್ತು.

ಇದಲ್ಲದೆ ಲಾಡರಲ್ಲಿ ಸಿಂಧಿ ಲೋಹಾನಾ ಲಾಡರೆಂಬ ಪಂಗಡವಿಧೆ. ಈ ಜನಾಂಗವು ಮೂಲತಃ ಈಗಿನ ಪಾಕಿಸ್ತಾನದ ಲಾಡಖಾನಾ ಪ್ರದೇಶಕ್ಕೆ ಸೇರಿದವರು. ಅಲ್ಲಿ ಅವರು ತಮ್ಮ ಪ್ರಾಬಲ್ಯವನ್ನು ಮೆರೆದರು. ಭಾರತ ವಿಭಜನೆ ಹೊಂದಿದ ಸಮಯದಲ್ಲಿ ಈ ಸಿಂಧಿ ಲೋಹಾಣಾ ಲಾಡರು ಭಾರತಕ್ಕೆ ವಲಸೆ ಬಂದು ಗುಜರಾತಿನ ಭಾಗಗಳಲ್ಲಿ ನೆಲೆಸಿದರು. ಇವರೂ ಸಹ ವ್ಯಾಪಾರವನ್ನು ತಮ್ಮ ಮೂಲ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಭಾರತದ ಹಲವೆಡೆ ಚದುರಿ ಹೋಗಿದ್ದ ಇವರ ಅನೈಕ್ಯತೆ ಕಂಡು ಲೀಲಾಸಾ ಮಹಾರಾಜರು ಇವರನ್ನೆಲ್ಲಾ ಒಂದುಗೂಡಿಸಿ ಇವರನ್ನು ಸಾಂಘಿಕ ಜೀವನಕ್ಕೆ ಒಳಪಡಿಸಿದರು. ಲೀಲಾಸಾ ಮಹಾರಾಜರ ಶಿಷ್ಯರೇ ಈಗಿನ ಪ್ರಸಿದ್ಧ ಆಸಾರಾಮ್ ಬಾಪು.

ಲಾಟರು ಗುಜರಾತಿನ ಮೂಲದವರೆಂಬುದಕ್ಕೆ ಉಡುಗೆ–ತೊಡುಗೆ, ಆಹಾರದ ಅಭ್ಯಾಸಗಳು, ಭಾಷೆ–ಚೌರಾಸಿ, ವಿವಾಹ ಸಂಪ್ರದಾಯಗಳು ಆಧಾರವಾಗುತ್ತವೆ. ಅಲ್ಲದೆ, ರಾಷ್ಟ್ರಕೂಟರು ಆಕ್ರಮಿಸಿದ ಲಾಟ ಪ್ರದೇಶ ಮೊದಲು ಗುಜರಾತ್‌ನ ಭಾಗದ್ದು. ನಂತರದ ಕಲ್ಯಾಣಿ ಚಾಲುಕ್ಯರೂ ಸಹ ಈ ಪ್ರದೇಶಗಳನ್ನೇ ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ಬೃಗಕಚ್ಛ ಹಾಗೂ ಸೂರತ್‌ಗಳು ಅತಿ ಪ್ರಾಚೀನ ವ್ಯಾಪಾರಿ ಸಂಪರ್ಕ ಕೇಂದ್ರಗಳಾಗಿದ್ದವು. ಅವು ಲಾಟ ರಾಜ್ಯದ ತೀವ್ರ ಆರ್ಥಿಕ ಚಟುವಟಿಕೆಯ ವಾಣಿಜ್ಯ ಕೇಂದ್ರಗಳೆಂದು 'ಲಾಟ್ಯಾಯನ' ಎಂಬ ಸೂತ್ರಬದ್ಧ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ. ರಾಜಕೀಯವಾಗಿ ಪ್ರಾಬಲ್ಯ ಹೊಂದಿ ವಿಶಾಲ ಸಾಮ್ರಾಜ್ಯದ ತಳಹದಿ ಹಾಕಲು ರಾಷ್ಟ್ರಕೂಟರು, ನಂತರ ಚಾಲುಕ್ಯರು ತಮ್ಮ ಆಡಳಿತ ಕಾಲದ ಉಚ್ರಾಯ ಸ್ಥಿತಿಯಲ್ಲಿ ತೀವ್ರವಾಗಿ ಶ್ರಮಿಸಿ ದಂಡಯಾತ್ರೆಗಳನ್ನು ಪ್ರಾರಂಭಿಸಿದರು. ಈ ದೊರೆಗಳು ಆದರಲ್ಲೂ ಮುಖ್ಯವಾಗಿ ರಾಷ್ಟ್ರಕೂಟರ ದಂತಿದುರ್ಗನು ಕ್ರಿ.ಶ. ೭೫೨–೭೫೩ ರಲ್ಲಿ ಭಡೋಚದ ಗುರ್ಜರರನ್ನೂ, ಗುಜರಾತ್ ಶಾಖೆಯ ಚಾಲುಕ್ಯರನ್ನೂ ಸದೆಬಡಿದು. ನಂತರ ಖಾನ್‌ದೇಶ, ನಾಸಿಕ್, ಪುಣೆ, ಸತಾರಾ ಮತ್ತು ಕೊಲ್ಹಾಪುರ ಜಿಲ್ಲೆಗಳನ್ನು ಆಕ್ರಮಿಸಿ ಸಿಂಧ್, ಮಾಳ್ವವನ್ನು ವಶಪಡಿಸಿಕೊಂಡು ಬಿರಾರ್, ಛತ್ತೀಸ್‌ಘಡಗಳನ್ನು ಆಕ್ರಮಿಸಿದನೆಂದು ಸಾಮನಘಡ ತಾಮ್ರಶಾಸನಗಳಿಂದ ಗೊತ್ತಾಗುತ್ತದೆ. ಒಂದನೇ ಕೃಷ್ಣನ ಕಾಲದಲ್ಲಿ ಮಧ್ಯಪ್ರದೇಶದ ಅನೇಕ ಭಾಗಗಳು ರಾಷ್ಟ್ರಕೂಟರ ಹತೋಟಿಗೊಳಪಟ್ಟವೆಂದು ಭಾಂಡುಪ್‌ನಿಂದ ಹೊರಡಿಸಿರುವ ಶಾಸನಗಳಿಂದ ತಿಳಿದುಬರುತ್ತದೆ. ನಂತರ ಮುಮ್ಮಡಿ ಗೋವಿಂದನು

ಗುಜರಾತನ್ನು ತನ್ನ ವಶದಲ್ಲಿರಿಸಿಕೊಂಡು ಅದಕ್ಕೆ ತನ್ನ ತಮ್ಮ ಇಂದ್ರನನ್ನು ರಾಜ್ಯಪಾಲನನ್ನಾಗಿ ನೇಮಿಸಿದನು. ಮೂರನೇ ಇಂದ್ರನ ಸೈನ್ಯವು ಭೂಪಾಲ್ – ಝಾನ್ಸಿ – ಕಾಲ್ಪಿಗಳ ಮಾರ್ಗವಾಗಿ ಯಮುನಾ ನದಿಯನ್ನು ದಾಟಿ, ಕನೋಜ್‌ನ ಮೇಲೆ ಧಾಳಿ ಮಾಡಿ ವಶಪಡಿಸಿಕೊಂಡಿತು (ಕ್ರಿ.ಶ. ೯೧೫). ಹೀಗೆ ವಿಸ್ತಾರಗೊಂಡ ಚಾಲುಕ್ಯ, ರಾಷ್ಟ್ರಕೂಟರ ಸಾಮ್ರಾಜ್ಯಗಳು ಲಾಟ ರಾಜ್ಯದ ಜೊತೆಗೆ ಮಧ್ಯಪ್ರದೇಶ ಹಾಗೂ ಬಂಗಾಳದ ವರೆಗೆ ಹಬ್ಬಿದ್ದವು. ರಾಷ್ಟ್ರಕೂಟರ ಸಾಮ್ರಾಜ್ಯಗಳು ಲಾಟ ರಾಜ್ಯದ ಜೊತೆಗೆ ಮಧ್ಯಪ್ರದೇಶ ಹಾಗೂ ಬಂಗಾಳದವರೆಗೆ ಹಬ್ಬಿದ್ದವು. ರಾಷ್ಟ್ರಕೂಟರಿಗೆ ಇದ್ದ 'ಲಟ್ಟಲೂರ ಪುರಾದೀಶ್ವರ' ಎಂಬ ಬಿರುದಿನಿಂದ ಇಂದಿನ ಮಹಾರಾಷ್ಟ್ರದ ಲಾಟಲೂರು–ಲಾಟೂರು ಆಗಿತ್ತೆಂದು ಹಾಗಾಗಿ ರಾಷ್ಟ್ರಕೂಟರ ಕಡೆಯ ದೊರೆಗಳಾದ ಮೂರನೇ ಗೋವಿಂದನು ರಾಜಧಾನಿಯನ್ನು ಅಚಲಪುರ, ಎಲ್ಲೋರ ಮತ್ತು ಮಯೂರಬಂಜ್ಗಳಿಂದ ಮಾನ್ಯಖೇಟಕ್ಕೆ ವರ್ಗಾಯಿಸಿದ್ದನ್ನು ನೋಡಿದಾಗ ಅವರು ಹಲವಾರು ಪ್ರಾಂತಗಳ ಅನೇಕ ರಾಜಧಾನಿಗಳನ್ನು ಹೊಂದಿದ್ದನ್ನು ಕಾಣಬಹುದು. ಈ ರಾಜರುಗಳಿಗೆ ಯುದ್ಧಕ್ಕಾಗಿ ಕುದುರೆಗಳನ್ನು, ಸಾಮಾನು ಸರಂಜಾಮುಗಳನ್ನೂ ಒದಗಿಸುತ್ತಿದ್ದ ಲಾಟ ವ್ಯಾಪಾರಿಗಳು ಸಹಜವಾಗಿ ಅವರ ಸಾಮ್ರಾಜ್ಯದ ಉಪಪ್ರಾಂತ್ಯಗಳಲ್ಲೂ ಹರಡಿದ್ದು ಸ್ವಾಭಾವಿಕವಾಗಿದೆ. ಹಾಗಾಗಿ ಲಾಟರಿದ್ದ ಕಡೆಗಳಲ್ಲೆಲ್ಲಾ ಲಾಟರ ಹೆಸರಿನ ಪ್ರದೇಶಗಳು ಇದ್ದುವೆಂದು ಊಹಿಸಬಹುದು. **ಇಂದಿಗೂ ಗುಜರಾತ್, ಮಹಾರಾಷ್ಟ್ರಗಳಲ್ಲಿ ಲಾಡರ ಹೆಸರಿನ ಲಾಡಗಂಜ್, ಲಾಡೇಗಾಂವ್, ಲಾಡ್ ಕಾರಂಜಾ, ಲಾಟಲೂರ ಅಥವಾ ಲಾಟೂರ್, ಬೀಡ್‌ನ ಘೆವ್ರಾಯ್‌ನ ಲಾಡ್‌ಗಲ್ಲಿ, ಹೈದರಾಬಾದ್‌ನ ಲಾಡ್ ಬಜಾರ್, ಕರ್ನಾಟಕದ ಸಿರಾದಲ್ಲಿನ ಲಾಡಪುರಹಟ್ಟಿ, ಗುಜರಾತ್‌ನ ಪೇಟ್‌ಲಾಡ್ ಮುಂತಾದವು ಗಮನಸೆಳೆಯುತ್ತವೆ.**

ಒಟ್ಟಾರೆ ಹೇಳಬಹುದೆಂದರೆ ಲಾಟರ ಉಗಮಸ್ಥಾನ ಯಾವ ಅನುಮಾನವೂ ಇಲ್ಲದೆ ಗುಜರಾತ್ ಆಗಿದ್ದಿತು. ಅಂದಿನ ಕಾಲದಲ್ಲಿ 'ಗುಜರಾತ್' ಹೆಸರಿನ ರಾಜ್ಯ ಅಸ್ತಿತ್ವದಲ್ಲಿರಲಿಲ್ಲ ಹಾಗಾಗಿ ಮಹಾರಾಷ್ಟ್ರದ ಹೆಚ್ಚಿನ ಹತೋಟಿಗೆ ಮತ್ತು ರಾಜಪೂತರ ರಾಜಸ್ಥಾನದ ರಾಜಕೀಯ ಪ್ರಾಬಲ್ಯಕ್ಕೆ ಗುಜರಾತ್ ಪ್ರದೇಶ ಒಳಗಾಗಿತ್ತು. ದಕ್ಷಿಣ ಗುಜರಾತ್‌ನ ಪ್ರಾಚೀನ ಹೆಸರೇ 'ಲಾಟ'. ಅಲ್ಲಿಂದ ಕ್ರಮೇಣ ಅನೇಕ ರಾಜಕೀಯ ವಿಪ್ಲವಗಳಿಂದ ಲಾಟರು ಭಾರತದ ಇತರ ಭಾಗಗಳಿಗೆ ವಿಸ್ತರಿಸಿ ನೆಲೆಗೊಂಡರು.

### 'ಲಾಟ' – 'ಲಾಡ' ಪದಗಳ ವಿಶ್ಲೇಷಣೆ :

ಪಂಡಿತ ಉಮಾಶಂಕರ ಜೋಷಿಯವರು ಬರೆದಿರುವ ಕೃತಿ 'ಪುರಾಣೋಮಾ ಗುಜರಾತ್' ಎಂಬ ಕೃತಿಯ ಪುಟ ೧೫೮–೧೭೬ ರ ವರೆಗಿನಲ್ಲಿ ಚರ್ಚಿಸಿರುವಂತೆ "**ಲಾಟ ಶಬ್ದವು ಪ್ರಾಚೀನ ಸಮಯದಲ್ಲಿ ಅಪರಿಚಿತವಾಗಿರಲಿಲ್ಲ. ಇತಿಹಾಸಪೂರ್ವ ಕಾಲದಲ್ಲಿ ರಚಿತವಾದ ಲಾಟ್ಯಾಯನ ಎಂಬ ಸೂತ್ರ ಗ್ರಂಥದಲ್ಲಿ ಲಾಟ ಶಬ್ದವು ಬಳಸಲ್ಪಟ್ಟಿದೆ.**" ತೀರ

ಪ್ರದೇಶಗಳಲ್ಲಿ ಸಮುದ್ರದ 'ಅಲೆ'ಗಳಿಗೆ ಹೆಚ್ಚು ಮಹತ್ವವಿದೆ. ದಕ್ಷಿಣ ಗುಜರಾತ್ ಅಥವಾ ಲಾಟ ರಾಜ್ಯದ ಅತಿ ಮುಖ್ಯ ಬಂದರು ಭರೂಚ್‌ನಿಂದ ಸುಮಾರು ಇಪ್ಪತ್ತುಮೈಲಿ ದೂರದ ವರೆಗಿನ ಝೂನೊರ್ ತನಕ ಅಲೆಗಳು ಉಬ್ಬರ ಏರಿಳಿತಗಳಿಗನುಗುಣವಾಗಿ ೧೨ ಅಡಿಯಿಂದ ೨೫ ಅಡಿಗಳವರೆಗೆ ಎತ್ತರಕ್ಕೆ ಏರುತ್ತವೆ. ಗುಜರಾತಿ ಭಾಷೆಯಲ್ಲಿ 'ಅಲೆ' ಎಂಬ ಪದಕ್ಕೆ 'ಲಾಟೊ' ಎಂದೂ, ಮರಾಠಿಯಲ್ಲಿ 'ಲಾಟಾ' (waves) ಎಂದೂ, ಕೊಂಕಣಿಯಲ್ಲಿ 'ಲಾರಾ' ಎಂದು ಕರೆಯಲಾಗುತ್ತದೆ. ಹೀಗೆ, ಹೆಚ್ಚು ಅಲೆಗಳುಳ್ಳ ಪ್ರದೇಶ' ಲಾಟಾ ಆಗಿದ್ದು ಆ ವ್ಯಾಪ್ತಿಯ ನಾಡು 'ಲಾಡದೇಶ' ವಾಗಿದೆ.

**'ಭಾರತೀಯ ಸಂಸ್ಕೃತಿ ಕೋಶ'** ಹಾಗೂ ಪ್ರಾಕೃತ ಭಾಷೆಯ ವ್ಯಾಕರಣ (ವರರುಚಿ ಆಧಾರಿತ ಡಿ.ಸಿ. ಸರ್ಕಾರ್ ರವರ) ಕೃತಿಯಲ್ಲಿ 'ಲಾಟ' ಶಬ್ದರಿಂದ 'ಲಾಡ' ಎಂಬ ಪದ ಉಂಟಾಗಿದೆ ಎಂದು ವಿವರಿಸಿದ್ದಾರೆ. ('ಲಾಡ ಹಾ ಶಬ್ದ್ ಲಾಟ ಪಾಸೂನ್ ಬನಲಾ ಅಹೇ') 'ಲಾಟ' ಎಂಬ ಪದದಲ್ಲಿ 'ಟ' ಕಾರವು ಪಾಣಿನಿಯ 'ಝಲಾಜಫೋರ್ನತೇ' ಸೂತ್ರದ ಪ್ರಕಾರ 'ಡ' ಕಾರ ಪ್ರಾಪ್ತವಾಗಿ 'ಲಾಡ' ಆಗಿದೆ. ಹೀಗೆ 'ಲಾಡ' ಶಬ್ದವು ಪ್ರಚಾರಕ್ಕೆ ಬಂದಿದೆ.

ವಿದೇಶಿ ಪ್ರವಾಸಿಗಳಾದ ಟಾಲೆಮಿಯು ಲಾಟ ಪ್ರದೇಶವನ್ನು 'ಲಾಡಿಕೆ' ಅಥವಾ 'ಲಾಟಿಕಾ' ಎಂಡು ಕರೆದಿದ್ದಾನೆ. ಅರಬ್ ಪ್ರವಾಸಿ ಎಬ್ನಸಯದ್ ಇದನ್ನು 'ಲಾರ್' ಎಂದು ಕರೆದಿದ್ದಾನೆ.

ಪಂಡಿತ ಉಮಾಶಂಕರ ಜೋಷಿಯವರು ತಮ್ಮ ಕೃತಿ 'ಪುರಾಣೋಮಾ ಗುಜರಾತ್'ನಲ್ಲಿ ಕೆಳಕಂಡಂತೆ ಅಭಿಪ್ರಾಯಪಡುತ್ತಾರೆ. ಶ್ರೀ ರತ್ನಮಣಿರಾವ್ ರವರು ವ್ಯಕ್ತಪಡಿಸಿರುವಂತೆ – 'ಲಾತ' ಎಂಬ ಹೆಸರಿನ ದೇವಿಯನ್ನು ಪಶ್ಚಿಮ ಏಷ್ಯಾದ ಇರಾಣದ ಭಾಗದಲ್ಲಿ ಮೂರ್ತಿಪೂಜಕರು ಪೂಜಿಸುತ್ತಿದ್ದು, ಇಸ್ಲಾಂ ಧರ್ಮದ ಉದಯದ ನಂತರ ಮೂರ್ತಿ ಪೂಜೆಯು ಅಲ್ಲಿ ವಿರೋಧಿಸಲ್ಪಟ್ಟು, ದೇವಿಯ ವಿಗ್ರಹವನ್ನು ಭಾರತಕ್ಕೆ ತರಲಾಗಿ ಗುಜರಾತಿನ ಸೋಮನಾಥದಲ್ಲಿ ಸ್ಥಾಪಿಸಲಾಯಿತು. ಆದರೆ, ಘಜ್ನಿ ಮಹಮೂದನ ದಾಳಿಯ ಸಮಯದಲ್ಲಿ ಅದು ನಾಶಗೊಂಡಿತೆಂದು ತಿಳಿದುಬರುತ್ತದೆ. 'ನಲಂದಾ ಅಘತನ ಕೋಶ' ದಲ್ಲಿ ವಿವರಿಸಿರುವಂತೆ 'ಲಾಟ' ಎಂಬ ಪದಕ್ಕೆ ಹಿಂದಿಯಲ್ಲಿ **''ಉದ್ದವಾದ ಮತ್ತು ದಪ್ಪನಾದ ಕಂಬ''** ಎಂತಲೂ **''ಹಾಗೆ ಕೆತ್ತಲಾದ ಒಂದು ಸ್ತಂಭ''** ವೆಂತಲೂ ತಿಳಿದುಬರುತ್ತದೆ. ಸಂಸ್ಕೃತದಲ್ಲಿ 'ಲಾಟ' ಎಂಬುದಕ್ಕೆ ಒಂದು ಪ್ರಾಚೀನ ದೇಶ''ವೆಂದೂ ವಿವರಿಸಿದ್ದಾರೆ. 'ಪುರಾಣೋಮಾ ಗುಜರಾತ್' ಪುಸ್ತಕದಲ್ಲಿ ರತ್ನಮಣಿರಾವ್ ರವರು ಅಭಿಪ್ರಾಯಪಡುವಂತೆ – ''ಶಿವನ ಲಿಂಗರೂಪದ ಪೂಜೆ ನರ್ಮದೆಯ ಪ್ರದೇಶದಲ್ಲಿ ಹಾಗೂ ಕ್ಯಾಂಬೆ ಕೊಲ್ಲಿಯವರೆಗೂ ವಿಸ್ತರಿಸಿತ್ತು. ಈ ಭಾಗಗಳಲ್ಲಿ ಲಿಂಗಪೂಜೆ ವ್ಯಾಪಕವಾಗಿತ್ತು. ಪಶುಪತಿ ಶಿವನ ಪಂಥದ ಉದಯ ಲಾಟ ಪ್ರದೇಶದಲ್ಲಾಯಿತು. ವಿದೇಶಗಳಿಂದ ವ್ಯಾಪಾರಕ್ಕಾಗಿ ಹಾಗೂ ಪ್ರವಾಸಿಗಳಾಗಿ ಬರುತ್ತಿದ್ದ ವಿದೇಶಿಯರು

'ಲಿಂಗ'ವನ್ನು 'ಸ್ತಂಭ'ವೆಂದು ಭಾವಿಸಿದ್ದರು. ವಿದೇಶಿಯರ ಭಾಷೆಯಲ್ಲಿ ಸ್ತಂಭಕ್ಕೆ 'ಲಾಟ' ಎಂದು ಕರೆಯಲಾಗುತ್ತಿತ್ತು. ಹೀಗೆ ಕ್ಯಾಂಬೆ ಕೊಲ್ಲಿಯಿಂದ ನರ್ಮದೆಯ ತಟದವರೆಗಿನ ಪ್ರದೇಶವನ್ನು 'ಲಾಟ' ಎಂದು ಕರೆಯಲಾಯಿತು.

**ಲಾಟ ದೇಶದ ಐತಿಹಾಸಿಕ ವಿವರಣೆ :**

ಶಾತವಾಹನರು ಅಥವಾ ಆಂಧ್ರರು ಗುಜರಾತ್‌ನ ಮೇಲಿನ ಹಿಡಿತ ಸಾಧಿಸಿದ್ದರು. ಆದರೆ, `ಅದು ಹೆಚ್ಚು ಕಾಲ ಉಳಿಯಲಿಲ್ಲ. ಏಕೆಂದರೆ ಕ್ರಿಶ. ೧೫೦ ರಲ್ಲಿ ಬೇರೊಂದು ರಾಜಮನೆತನ ಲಾಟವನ್ನು ಆಳುತ್ತಿತ್ತು. **ಹಾಗಾಗಿ ಭಡೋಜ್ ಜಿಲ್ಲೆಯ ಸತ್ರಪರ ಹತೋಟಿಯಲ್ಲಿದ್ದಿತೆಂದು ಊಹಿಸಲಾಗಿದೆ. ಜೈನ ಸಂಪ್ರದಾಯದಲ್ಲಿ ಉಲ್ಲೇಖಿಸಿರುವಂತೆ ಅಧಿಕಾರಕ್ಕಾಗಿ ಶಾತವಾಹನರ ಹಾಗೂ ಸತ್ರಪರ ನಡುವೆ ನಡೆದ ಹೋರಾಟಗಳಲ್ಲಿ ಶಾತವಾಹನರು ಕ್ಷತ್ರಪರನ್ನು ಸೋಲಿಸಿದರು. ಹಾಗಾಗಿ ಕ್ರಿ.ಶ. ೧೫೫ರಲ್ಲಿ ಶಾತವಾಹನರು ಸತ್ರಪರನ್ನು ಹೊರಗಟ್ಟಿದರು.** ಭರೂಚನ ೧೯೬೧ರ ಗೆಝೆಟಿಯರ್‌ನಲ್ಲಿ ಉಲ್ಲೇಖಿಸಿರುವಂತೆ ''**ಕ್ರಿ.ಶ. ೧೭೪–೨೦೩ ರ ನಡುವೆ ಶಾತವಾಹನರ ಅತಿ ಪ್ರಬಲ ದೊರೆ ಯಜ್ಞಶ್ರೀ ಸಾತಕರ್ಣಿಯು ಭರೂಚನ್ನು ಮರಳಿ ವಶಪಡಿಸಿಕೊಂಡ**'' ನೆಂದು ತಿಳಿಸಿದೆ. ಸತ್ರಪರು ಅಥವಾ ಕ್ಷತ್ರಪರು ಲಾಟ ದೇಶದ ಮೇಲೆ ಹೆಚ್ಚಿನ ಹತೋಟಿ ಹೊಂದಿದ್ದರು. ಅವರ ಆಳ್ವಿಕೆಯ ಕಾಲದಲ್ಲಿ ಬ್ರಾಹ್ಮಣರಿಗೆ ಅನೇಕ ದಾನ ದತ್ತಿಗಳನ್ನು ನೀಡಿದರು. ಕ್ಷತ್ರಪರಿಗೂ ಶಾತವಾಹನರಿಗೂ ಲಾಟರ ಮೇಲಿನ ಹಿಡಿತ ಪಡೆಯಲು ಅನೇಕ ಬಾರಿ ಹೋರಾಟಗಳು ನಡೆದವು. ಕ್ಷತ್ರಪರ ಪ್ರಸಿದ್ಧ ದೊರೆಗಳಾದ ಭೂಮುಲ ಮತ್ತು ನ್ಹಾಪಣ ಇಬ್ಬರೂ ಮಹತ್ವಾಕಾಂಕ್ಷಿಗಳು. ನ್ಹಾಪಣನ ಅಳಿಯ ಉಷಾವದತ್ತ, ಲಾಟದ ಪ್ರಸಿದ್ಧ ಬಂದರು ಬೃಗಜಟ್ಟದಲ್ಲಿ ಬ್ರಾಹ್ಮಣರಿಗೆ ಅಪಾರ ದಾನ ಧರ್ಮಗಳನ್ನು ಮಾಡಿದನೆಂಬ ಉಲ್ಲೇಖವಿದೆ. ಕ್ಷತ್ರಪರ ಬಲಾಢ್ಯ ದೊರೆ ರುದ್ರದಮನ್ ನವರೆಗೆ (ಕಾಲ ಕ್ರಿ.ಶ. ೧೩೦ ರಿಂದ ಸುಮಾರು ಕ್ರಿ.ಶ. ೧೫೦) ಸತ್ರಪರು ಪ್ರಬಲರಾಗಿದ್ದರು.

ಇತಿಹಾಸಕಾರ ಆರ್.ಎಸ್. ತ್ರಿಪಾಠಿಯವರು ತಮ್ಮ ''***ಪ್ರಾಚೀನ ಭಾರತದ ಇತಿಹಾಸ***'' ದಲ್ಲಿ ವಿವರಿಸಿರುವಂತೆ – ''ವಾಣಿಜ್ಯವು ಉನ್ನತ ಸ್ಥಿತಿಯಲ್ಲಿತ್ತು, ವಸ್ತುಗಳು ಹಾಗೂ ಸರಂಜಾಮುವನ್ನು ತುಂಬಿಕೊಂಡು ಹಡಗುಗಳು ಭರೂಚ, ಸೋಪಾರ ಮತ್ತು ಕಲ್ಯಾಣದ ಬಂದುರಗಳನ್ನು ತಲಪುತ್ತಿದ್ದವು. ತಗರ ಮತ್ತು ಪೈಠಣ ಒಳನಾಡು ಜಲಮಾರ್ಗಗಳ ಕೇಂದ್ರಗಳಾಗಿದ್ದವು. ಸಂಪರ್ಕ ಸಾಧನಗಳು ಉತ್ತಮವಾಗಿದ್ದವು. ಪ್ರಜೆಗಳು ದಖ್ಖನ್ನಿನ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ನಿರ್ಭೀತಿಯಿಂದ ಪ್ರಯಾಣಿಸಬಹುದಾಗಿತ್ತು, ಮುಂದೆ ತ್ರಿಪಾಠಿಯವರು ವಿವರಿಸುತ್ತಾ ''***ವಾಕಾಟಕರು ಗುಪ್ತರ ಸಮಕಾಲೀನರು. ಹರಿಸೇನ ವಾಕಾಟಕನು ಕುಂತಳ, ಅವಂತಿ, ಲಾಟ ಮತ್ತು ಆಂಧ್ರಗಳ ಮೇಲೆ ಅವ್ಯಾಹತವಾದ ಧಾಳಿಗಳನ್ನು ನಡೆಸಿದನು***'' ಎಂದು ಹೇಳಿದ್ದಾರೆ. ಮುಂದುವರೆಯುತ್ತಾ, ತ್ರಿಪಾಠಿಯವರು ಹೇಳುವಂತೆ, ''**ರಾಷ್ಟ್ರಕೂಟ ದೊರೆ ಲಾಟ**

(ದಕ್ಷಿಣ ಗುಜರಾತ್)ವನ್ನು ಮಣಿಸಿದನು. ಕರ್ಕನು ಲಾಟದ ಅಧಿಪತಿಯಾದರು. ಬಾದಾಮಿ ಚಾಲುಕ್ಯರ ದಾಳಿಗಳಲ್ಲಿ ಲಾಟವು ಅವರ ಸಾಮ್ರಾಜ್ಯದ ಒಂದು ಭಾಗವಾಯಿತು. ಚಾಲುಕ್ಯರ ದೊರೆ ತೈಲಪನು ಲಾಟವನ್ನು ಆಕ್ರಮಿಸಿ ಅದಕ್ಕೆ ಬಾರಪ್ಪನನ್ನು ರಾಜ್ಯಪಾಲನನ್ನಾಗಿ ನೇಮಿಸಿದನು.''

ಭರೂಚನ ೧೯೬೧ರ ಜಿಲ್ಲಾ ಗೆಝೆಟಿಯರ್‌ನಲ್ಲಿ ನಮೂದಿಸಿರುವಂತೆ – ''**ಪಾರಮಾರರ ದೊರೆ ಸುಭತವರ್ಮನು ಮತ್ತು ಕ್ರಿ.ಶ. ೧೨೩೩ ರಲ್ಲಿ ಅವನ ಉತ್ತರಾಧಿಕಾರಿಯಾಗಿ ಬಂದ ಅರ್ಜುನವರ್ಮನು ಭರೂಚ್‌ನಿಂದ ಒಂದು ದತ್ತಿ ಶಾಸನವನ್ನು ಹೊರಡಿಸಿದನು. ಆದರೂ ಸಹ ಪಾರಮಾರರು ಲಾಟರ ಮೇಲೆ ಸಂಪೂರ್ಣ ಹತೋಟಿ ಹೊಂದಲಾಗಲಿಲ್ಲ. ಏಕೆಂದರೆ, ಲಾಟದ ವಾಣಿಜ್ಯ ಬಂದರುಗಳು ಸಮೃದ್ಧಿಯಾಗಿಯೂ ಅದರ ಮೆಕ್ಕಲು ಮಣ್ಣಿನ ಫಲವಂತಿಕೆಯೂ ಕಾರಣ. ದೇವಗಿರಿಯ ಯಾದವರೂ ಅವುಗಳ ಮೇಲೆ ಕಣ್ಣಿಟ್ಟಿದ್ದರು. ಆದ ಕಾರಣ, ಅದು ಸಿಂಘಣನಿಂದ ಪದೇ ಪದೇ ಆಕ್ರಮಣಕ್ಕೊಳಗಾಗುತ್ತಿತ್ತು.**'' (ಪುಟ ೬೨)

''**ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತ**'' ಪುಸ್ತಕದಲ್ಲಿ ಇತಿಹಾಸಕಾರ ಡಿ.ಸಿ.ಸರ್ಕಾರ್ ವಿವರಿಸಿರುವಂತೆ ಸೌದತ್ತಿಯ ರಟ್ಟರಂತೆ ರಾಷ್ಟ್ರಕೂಟ ಸಾರ್ವಭೌಮರು 'ಲಟ್ಟಲೂರ ಪುರವರಾಧೀಶ್ವರ' ರೆಂಬ ಬಿರುದಾಂಕಿತರಾಗಿದ್ದರು. ಹೀಗೆ ಲಟ್ಟಲೂರು, ಈಗಿನ ಲಾಟರೂ ರಾಷ್ಟ್ರಕೂಟರ ಮೂಲ ಸ್ಥಾನವಾಗಿತ್ತೆಂದು ಅಭಿಪ್ರಾಯಪಡುತ್ತಾರೆ. ಲಾಟೂರು ಈಗಿನ ಮಹಾರಾಷ್ಟ್ರದ ಓಸ್ಮಾಮಾಬಾದ್ ಜಿಲ್ಲೆಯಲ್ಲಿದೆ.

## ಲಾಟ ರಾಜ್ಯದಲ್ಲಿ ರಾಷ್ಟ್ರಕೂಟರ ಆಳ್ವಿಕೆ :

ಲಾಟ ರಾಜ್ಯವು ಅಥವಾ ದಕ್ಷಿಣ ಗುಜರಾತ್ ಭಾಗವು ಕ್ರಿ.ಶ. ೮೦೦ ರಲ್ಲಿ ಚಾಳುಕ್ಯರ ಆಳ್ವಿಕೆಯಿಂದ ರಾಷ್ಟ್ರಕೂಟರ ಹತೋಟಿಗೆ ಒಳಗಾಯಿತು. ರಾಷ್ಟ್ರಕೂಟರ ಸಾಮ್ರಾಟ ಮುಮ್ಮಡಿ ಗೋವಿಂದನು ಅದನ್ನು ಆಕ್ರಮಿಸಿದನು. ನಂತರ ತನ್ನ ಸಹೋದರನಾಗಿದ್ದ ಇಂದ್ರನನ್ನು ಲಾಟ ರಾಜ್ಯದ ಮೇಲ್ವಿಚಾರಣೆಗೆ ನೇಮಿಸಿದನು. ಅಲ್ಲದೆ ತನ್ನ ಸಹೋದರನ ಸಹಾಯದಿಂದ ಅವನು ಇಮ್ಮಡಿ ನಾಗಭಟನನ್ನು ಸೋಲಿಸಿದನು. ಇಂದಿನ ಆಧುನಿಕ ಭಡೋಚ ಜಿಲ್ಲೆಯ ಶ್ರೀಭಾವನ ಎಂಬಲ್ಲಿ ದೊರೆ ಕೃಷ್ಣ ತಂಗಿದ್ದನು. ಅವನಿಗೆ ಅಮೋಘವರ್ಷನೆಂಬ ಮಗನು ಜನಿಸಿದ್ದು ಈ ನಗರದಲ್ಲೇ ಎನ್ನಲಾಗಿದೆ.

ಕ್ರಿ.ಶ. ೮೧೨ ರ ಹೊತ್ತಿಗೆ ಗುಜರಾತಿನ ಆಳ್ವಿಕೆಯು ಕರ್ಕ ಸುವರ್ಣವರ್ಷನ ಹತೋಟಿಗೊಳಗಾಯಿತು. ಅವನು ಸಾಮ್ರಾಟ ಅಮೋಘವರ್ಷನಿಗೆ ಆಡಳಿತದಲ್ಲಿ ನೆರವಾದನು. ಕ್ರಿ.ಶ. ೮೩೦ ಒಂದನೇ ಧ್ರುವನು ಗುಜರಾತಿನ ಆಳ್ವಿಕೆ ವಹಿಸಿಕೊಂಡನು. ಆದರೆ, ವಲ್ಲಭನೆಂಬ ಅರಸನ ವಿರುದ್ಧ ರಾಷ್ಟ್ರಕೂಟರು ಮೂರು ತಲೆಮಾರಿನವರೆಗೆ ಹೋರಾಟ ನಡೆಸಬೇಕಾಯಿತು. ಸಾಮ್ರಾಟ ಧ್ರುವನು ಹೋರಾಡುತ್ತಾ ಮಡಿದನು.

ಧ್ರುವನ ಮಗ ಅಕಾಲವರ್ಷನು ವಲ್ಲಭನೊಡನೆ ಹೋರಾಡಬೇಕಾಯಿತು. ನಂತರ ಇಮ್ಮಡಿ ಧ್ರುವನು ಹೋರಾಟ ಮುಂದುವರೆಸಿದನು. ಕಡೆಗೆ ದಂತಿವರ್ಮ ಕ್ರಿ.ಶ. ೮೬೭ ರಲ್ಲಿ ಸ್ಥಳೀಯ ರಾಜ್ಯಪಾಲನಾದನು. ಎ.ಎಸ್. ನಂಜುಂಡಸ್ವಾಮಿ ಎಂಬ ಇತಿಹಾಸಕಾರರು ಅಭಿಪ್ರಾಯಪಡುವಮತೆ "ಇಮ್ಮಡಿ ಕೃಷ್ಣನು ಗುರ್ಜರರಲ್ಲಿ ಭೀತಿಯನ್ನುಂಟು ಮಾಡಿದನೆಂದೂ, ಲಾಟ ರಾಜ್ಯದ ಗರ್ವಭಂಗ ಮಾಡಿದನೆಂದೂ..... ಗೌಡ ಅರಸರಲ್ಲಿ ದೈನ್ಯವನ್ನುಂಟು ಮಾಡಿದನೆಂದೂ ರಾಷ್ಟ್ರಕೂಟರ ದಾಖಲೆಗಳಲ್ಲಿ ವರ್ಣಿಸಲಾಗಿದೆ" ಎಂದಿದ್ದಾರೆ.

ದಂತಿವರ್ಮನ ಮಗ ಕೃಷ್ಣರಾಜ ಅಕಾಲವರ್ಷನು ಕ್ರಿ.ಶ. ೮೮೮ ವೇಳೆಗೆ ಗುಜರಾತ್ ಶಾಖೆಯ ಅರಸನಾದನು. ಮಳಖೇಡದ ರಾಷ್ಟ್ರಕೂಟರಿಗೂ ಗುರ್ಜರ ಪ್ರತೀಹಾರರಿಗೂ ಜರುಗಿದ ಸಮರದಲ್ಲಿ ಕೃಷ್ಣರಾಜನು ಭಾಗವಹಿಸಿದ್ದನು. ಇದರೊಟ್ಟಿಗೆ ರಾಷ್ಟ್ರಕೂಟರ ಗುಜರಾತ್ ಆಳ್ವಿಕೆ ಕೊನೆಗೊಂಡಿತು.

ಇತಿಹಾಸಕಾರ ವಿ.ಡಿ. ಮಹಾಜನ್ ರವರು ತಮ್ಮ **"ಪ್ರಾಚೀನ ಬಾರತ"** ವೆಂಬ ಕೃತಿಯಲ್ಲಿ ಉಲ್ಲೇಖಿಸಿರುವಂತೆ – ಮುಮ್ಮಡಿ ತೈಲಪನು ಸಿಂಹಾಸನಕ್ಕೆ ಬಂದನು. ಅವನು ಕ್ರಿ.ಶ. ೧೧೫೧ ರಿಂದ ೧೧೬೩ ರ ವರೆಗೆ ರಾಜ್ಯವಾಳಿದನು. ಅವನ ಸೇನಾಪತಿ ಬಿಜ್ಜಳನು ಒಂದು ಪಿತೂರಿಯ ಮೂಲಕ ದಂಗೆಯೆದ್ದು, ಸಿಂಹಾಸನವನ್ನು ಆಕ್ರಮಿಸಿ ತಾನೇ ದೊರೆಯಾದನು. (೧೯೭೪ ಪುಟ ೫೮೯)

ಕಲ್ಯಾಣಿ ಚಾಲುಕ್ಯರ ಅವನತಿಯನಂತರ ಗುಜರಾತ್‌ನ ರಾಜಕೀಯ ಸ್ಥಿತಿಗತಿಗಳು ಅಲ್ಲೋಲ ಕಲ್ಲೋಲವಾಗ ತೊಡಗಿದವು. ದೆಹಲಿಯ ಸುಲ್ತಾನರಲ್ಲಿ ಖಿಲ್ಜಿಗಳು ದಖ್ಖನ್ನಿನ ಮೇಲೆ ಧಾಳಿಗಳನ್ನು ತೀವ್ರಗೊಳಿಸಿದರು. ದೇವಗಿರಿಯ ಯಾದವರು ಗುಜರಾತ್‌ನ ಮೇಲೆ ಹತೋಟಿ ಹೊಂದಲು ಹೆಣಗುತ್ತಿದ್ದರು. ವಿದೇಶೀಯರ ಆಕ್ರಮಣಗಳು ಹೆಚ್ಚಾಗತೊಡಗಿದವು. ಗುಜರಾತ್‌ನ ಆರ್ಥಿಕ ಹಾಗೂ ವಾಣಿಜ್ಯ-ವ್ಯವಹಾರಗಳು ಅಧಃಪತನ ಕಾಣತೊಡಗಿದವು. ಈ ನಡುವೆ ಕ್ಷಾಮಗಳಿಗೆ ರಾಜ್ಯ ತುತ್ತಾಗತೊಡಗಿತು. ೧೪ನೇ ಶತಮಾನದ ಹೊತ್ತಿಗೆ ಲಾಟರು ತಮ್ಮ ವ್ಯಾಪಾರ ವ್ಯವಹಾರಗಳನ್ನು ಮಹಾರಾಷ್ಟ್ರ, ಕರ್ನಾಟಕಗಳಲ್ಲಿ ಬಲಪಡಿಸಿಕೊಂಡು ವಲಸೆ ಹೋಗಲಾರಂಭಿಸಿದರು. ಸೂರತ್‌ನಂತಹ ಅತಿ ಚುರುಕಿನ ವಾಣಿಜ್ಯ ಕೇಂದ್ರ ಮರಾಠರ ಮತ್ತು ಮೊಘಲರ ನಡುವಿನ ಶೀತಲ ಸಮರದ ಕೇಂದ್ರ ಬಿಂದುವಾಗಿ ಲಾಟ ರಾಜ್ಯ ಸಂಪೂರ್ಣವಾಗಿ ಛಿದ್ರಗೊಳ್ಳಲು ಕಾರಣವಾಯಿತು. ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆ ಈ ರಾಜಕೀಯ ವಿಪ್ಲವಕ್ಕೆ ಸಂಪೂರ್ಣ ಸಹಕಾರಿಯಾಯಿತು.

## ಲಾಟ ದೇಶದ ಸಾಮಾಜಿಕ ಜೀವನ :

ಲಾಟ ರಾಜ್ಯವು ಕ್ಷತ್ರಿಯರಿಂದ ಆಳಲ್ಪಡುತ್ತಿತ್ತು. ಲಾಟದ ದೊರೆ ಸೋಮ ವಂಶದ ಕ್ಷತ್ರಿಯ ರಾಜ. ಅವನ ತಕ್ಕಗಾದಿ ಕಾಠೇವಾಡ. ಕಚ್ಛ, ಸಿಂಧ ಈ ಪ್ರದೇಶಗಳು ಲಾಟದ

ಭಾಗಗಳಾಗಿದ್ದವು. ರಾಜರು ಬಹು ಪರಾಕ್ರಮಿಗಳಾಗಿದ್ದರು. ಕ್ಷಾತ್ರ ಧರ್ಮ ಪಾಲಿಸುತ್ತಿದ್ದರು. ದೊರೆಯ ನಿಶಾನೆ ಬಿಳಿ ನಿಷಾನೆಯಾಗಿತ್ತು, ಬಿಳಿ ಛತ್ರ, ಚಾಮರಗಳನ್ನು ಹೊಂದಿರುತ್ತಿದ್ದನು. ಅವನು ಸದಾ ಬಿಳಿ ಕುದುರೆಯನ್ನೇರಿ ಪ್ರಯಾಣಿಸುತ್ತಿದ್ದನು. ಅವನ ಗುರುಗೋತ್ರ ವಶಿಷ್ಠ, ತ್ರಿಪ್ರವರ, ಯಜುರ್ವೇದ ಮಧ್ಯಾನ್ನಿನಿಶಾಖೆ ಪಾರಸ್ಕ ಸೂತ್ರ, ಲಾಟ ಸಾಮ್ರಾಜ್ಯದ ಕುಲದೈವ ಭವಾನಿ ಮಾತೆ. ಅಗೋಚರ ಮುದ್ರಾ ಮತ್ತು ಯಾವಾಗಲೂ ವಿಜಯ ಶಾಸ್ತ್ರಕ್ಕೆ ತಲವಾರ, ಲಗ್ನ ಕಾರ್ಯಕ್ಕೆ ದೇವಕ ವಸುಂಧಿಬಳ್ಳಿ, ಸೋಮವಂಶ ಕ್ಷತ್ರಿಯ ರಾಜನದು ಲಾಡ–ಕುಳಿ– 'ಲಾಡ' ಎನ್ನುವುದು ಒಂದೇ ಕುಳಿ. ಇವರು ಲಾಟ ದೇಶದಲ್ಲಿದ್ದದ್ದರಿಂದ ಇವರ ಕುಳಿ 'ಲಾಡ' ಎಂದೇ ಪ್ರಸಿದ್ಧಿಯಾಗಿದೆ. ನಂದಿಪುರ ಲಾಟರ ರಾಜಧಾನಿಯಾಗಿತ್ತು.

ಅನೇಕ ಶಾಸನಗಳ, ಗ್ರಂಥಗಳ ಆಧಾರದಿಂದ ಹಾಗೂ ಇಂದು ಭಾರತಾದ್ಯಂತ ಪಸರಿಸಿರುವ ಲಾಡ ಜನಾಂಗವನ್ನು ಅವಲೋಕಿಸಿದಾಗ ಲಾಡರು ಸಂಸ್ಕೃತಿ, ಸ್ನೇಹ, ಆದರ್ಶ, ದೇಶ ಪ್ರೇಮ, ರಸಿಕತೆಗಳಿಗೆ ಆದರ್ಶವಾಗಿದ್ದರು. ಲಾಟದ ಪ್ರಜೆಗಳು ಸತ್ಯಸಂಧರೂ, ರಾಜನಿಷ್ಠೆಯುಳ್ಳವರು, ಆತ್ಮಗೌರವ ಹೊಂದಿದವರೂ, ಸಹಸಶೀಲರೂ ಆಗಿದ್ದರು. ಕ್ಷಾತ್ರತೇಜಸ್ಸಿಗೆ ಹೆಸರಾಗಿದ್ದರು. ನಾಡಿನ ರಕ್ಷಣೆಗೂ, ಆಸ್ತಿ–ಪಾಸ್ತಿಗಳ ರಕ್ಷಣೆಗೂ, ಮಹಿಳೆಯರ ಶೀಲರಕ್ಷಣೆಗಾಗಿಯೂ ಹೋರಾಡಿ ಮಡಿಯಲೂ ಹಿಂಜರಿಯುತ್ತಿರಲಿಲ್ಲವೆಂದು ದಾಖಲೆಗಳು ಹೇಳುತ್ತವೆ.

ಲಾಟರಲ್ಲಿ ಚತುರ್ವರ್ಣ ಪದ್ಧತಿ ಇತ್ತು, ಕ್ರಮೇಣ ವೃತ್ತಿಗಳನ್ನಾಧರಿಸಿದ ಜಾತಿ ಪದ್ಧತಿ ಹುಟ್ಟಿಕೊಂಡಿತು. ಲಾಟ ರಾಜ್ಯದಲ್ಲಿ ಹಿಂದೂಗಳಲ್ಲಿ ವೈಷ್ಣವರು, ಶೈವರು, ಜೈನರು, ಬೌದ್ಧರು, ಮುಸ್ಲಿಮರು, ಅಸ್ಪೃಶ್ಯರೂ ಇದ್ದರು. ಅಸ್ಪೃಶ್ಯರಿಗೆ ಅರಮನೆಯ ಒಳಗೆ ಪ್ರವೇಶವಿರಲಿಲ್ಲ. ಬ್ರಾಹ್ಮಣರು ಅರಸರನ್ನು ತುಂಬಾ ಗೌರವಿಸುತ್ತಿದ್ದರು. ಆದರೆ, ಸಾಮಾನ್ಯ ಕ್ಷತ್ರಿಯನೊಬ್ಬನು ಸಾಮಾನ್ಯ ಬ್ರಾಹ್ಮಣನಿಗಿಂತಲೂ ಹೆಚ್ಚಿನ ಅಂತಸ್ತನ್ನು ಹೊಂದಲು ಸಾಧ್ಯವಿರಲಿಲ್ಲ. ಬ್ರಾಹ್ಮಣರು ಸಂಪೂರ್ಣ ಸಸ್ಯಾಹಾರಿಗಳಾಗಿದ್ದರೆಂದು ಸಮಕಾಲೀನ ಮುಸ್ಲಿಂ ಪ್ರವಾಸಿಗಳು ತಿಳಿಸಿದ್ದಾರೆ. ಬ್ರಾಹ್ಮಣರು ವೈದಿಕ ವೃತ್ತಿಯನ್ನಲ್ಲದೆ ಇತರ ಅನೇಕ ವೃತ್ತಿಗಳನ್ನು ಕೈಗೊಳ್ಳುವುದು ಪ್ರಾರಂಭವಾಗಿದ್ದಿತು. ರಾಷ್ಟ್ರಕೂಟರ ಅರಸರ ಮಂತ್ರಿಗಳಾಗಿ, ಅಧಿಕಾರಿಗಳಾಗಿ, ಅಲ್ಲದೆ ಚಾಲುಕ್ಯರ ಆಳ್ವಿಕೆಯಲ್ಲಿ ತರಬೇತು ಪಡೆದಿದ್ದ ಪಂಡಿತರಿಗೆ ರಾಜಾಶ್ರಯವೂ ರಾಜಸನ್ಮಾನವೂ ದೊರೆಯುತ್ತಿತ್ತು, ಸೈನ್ಯದಲ್ಲೂ ಸಹ ದಂಡನಾಯಕರಾಗಿ ತಮ್ಮ ಅರಸನಿಗಾಗಿ ಹೋರಾಡುತ್ತಿದ್ದರು. ವ್ಯಾಪಾರ, ವ್ಯವಸಾಯ, ಲೇವಾದೇವಿ ಮುಂತಾದ ವೃತ್ತಿಗಳನ್ನು ಕೈಗೊಳ್ಳಲು ಆಗಿನ ಕಾಲದ ಬ್ರಾಹ್ಮಣರಿಗೆ ಸ್ಮೃತಿ ಮತ್ತು ಧರ್ಮಶಾಸ್ತ್ರಗಳು ಯಾವ ನಿಷೇಧವನ್ನೂ ವಿಧಿಸಿರಲಿಲ್ಲ. ಬ್ರಾಹ್ಮಣರಲ್ಲಿ ವಿಶೇಷವಾಗಿ ಲಾಟ ದೇಶದ ಗ್ರಾಮ ಸಲಹಾ ಸಭೆಯ ಸದಸ್ಯರಿಗೆ 'ಮಹಾಜನ' ಎಂಬ ಹೆಸರಿತ್ತು. ಮಹಾಜನರು ಧರ್ಮದರ್ಶಿಗಳಾಗಿ ಇದ್ದುದಲ್ಲದೆ ಲೇವಾದೇವಿಕಾರರೂ ಆಗಿದ್ದರು. 'ಮಹಾಜನರು' ಶಾಲೆಗಳನ್ನೂ, ಕೆರೆಗಳನ್ನು ನೋಡಿಕೊಳ್ಳುತ್ತಿದ್ದುದಲ್ಲದೆ

ಸಾರ್ವಜನಿಕ ಕಾರ್ಯಗಳಿಗಾಗಿಯೂ ಕೇಂದ್ರ ಸರ್ಕಾರಕ್ಕೆ ಪಾವತಿ ಮಾಡಬೇಕಾದ ಬಾಕಿ ಮೊಬಲಿಗಾಗಿಯೂ ನಿಧಿಯನ್ನು ಚಂದಾ ಮೂಲಕ ಕೂಡಿಸುತ್ತಿದ್ದರು. ಮುಖ್ಯವಾದ ಸಂದರ್ಭಗಳಲ್ಲಿ 'ಮಹಾಜನರು' ಸಮಾವೇಶಗೊಂಡು 'ಗ್ರಾಮಪತಿ'ಗೆ ಮಾರ್ಗದರ್ಶನ ನೀಡುವಂಥ ಸಲಹೆಗಳನ್ನು ಕೊಡುತ್ತಿದ್ದರು. ಇಂದಿಗೂ ಮಹಾರಾಷ್ಟ್ರದಲ್ಲಿ 'ಮಹಾಜನ' ಲಾಡರೆಂಬ ಬ್ರಾಹ್ಮಣರ ಪಂಗಡ ಪ್ರಖ್ಯಾತಿಯಾಗಿದೆ. ಪ್ರಮೋದ್ ಮಹಾಜನ್ ಕೇಂದ್ರ ಮಂತ್ರಿಗಳಾಗಿದ್ದವರೂ ಸಹ ಈ ಪಂಗಡದವರೇ ಆಗಿದ್ದಾರೆ. ಸಾಮಾನ್ಯವಾಗಿ ಬ್ರಾಹ್ಮಣರಿಗೆ ಮರಣದಂಡನೆ ವಿಧಿಸುತ್ತಿರಲಿಲ್ಲ, ದ್ವಿಜರಾದ ಅವರನ್ನು ಕಾಪಾಡುವುದು ಕ್ಷತ್ರಿಯ ಧರ್ಮವೆಂದು ತಿಳಿಯಲಾಗಿತ್ತು. ನಾಶಿಕದ ಪಂಡರ್ ಲೇನ್‌ನಲ್ಲಿನ ಶಿಲಾ ಶಾಸನದಲ್ಲಿರುವ ಅಂಶವನ್ನು ಇತಿಹಾಸಕಾರ ಭಂಡಾರ್‌ಕರ್ ಹೀಗೆ ವಿವರಿಸಿದ್ದಾರೆ : ''ಗೌರಮೀ ಪುತ್ರ ಸಾತಕರ್ಣಿಯ ಕಾಲದಲ್ಲಿ ಸತ್ರಪರು ಲಾಟ ರಾಜ್ಯಕ್ಕಾಗಿ ಹೋರಾಟಕ್ಕಿಳಿದರು. ಕಡೆಗೆ ಲಾಟದ ಪುರೋಹಿತ ಹಾಗೂ ಶ್ರೀಮಂತ ಬ್ರಾಹ್ಮಣರನ್ನು ಸೆರೆ ಹಿಡಿದು ಒತ್ತೆಯಾಳುಗಳಾಗಿ ಇಟ್ಟುಕೊಂಡರು. ಇದನ್ನು ತಿಳಿದ ಶಾತವಾಹನರು ಸಾತಕಣಿಯ ನಾಯಕತ್ವದಲ್ಲಿ ಉಪಾಯವಾಗಿ ಬ್ರಾಹ್ಮಣ ಒತ್ತೆಯಾಳುಗಳನ್ನು ಬಿಡಿಸಿಕೊಂಡು ಅವರನ್ನು ತನ್ನ ರಾಜಧಾನಿ ಪೈಠಣಕ್ಕೆ ತಂದು ಆಶ್ರಯ ನೀಡಿದನು.'' ಹೀಗೆ ಲಾಟದ ಬ್ರಾಹ್ಮಣರ ವಲಸೆ ಮಹಾರಾಷ್ಟ್ರಕ್ಕೆ ಬರುವಂತಾಯಿತು.

ಇದೇ ರೀತಿಯಲ್ಲಿ ಚಾಲುಕ್ಯ ಹಾಗೂ ರಾಷ್ಟ್ರಕೂಟ ದೊರೆಗಳ ಗುಜರಾತ್‌ನ ಆಳ್ವಿಕೆಯ ಕಾಲದಲ್ಲಿ ಜೈನಧರ್ಮ ವ್ಯಾಪಕವಾಗಿ ಲಾಟದಲ್ಲೂ ಹರಡಿತು. ಲಾಡ ದೇಶದ ಅನೇಕ ಪಂಗಡಗಳು ಜೈನಧರ್ಮವನ್ನು ಸ್ವೀಕರಿಸಿ, ಆ ದೊರೆಗಳ ಅನೇಕ ರಾಜಧಾನಿಗಳಾಗಿದ್ದ ಸಂಸ್ಥಾನಗಳಾದ ಅಚಲಪುರ, ಅಮರಾವತಿ, ಪೈಠಣ ಹಾಗೂ ಕಾರಂಜಾಗಳಾಗಿ ವಲಸೆ ಹೋಗಿ ಅಲ್ಲಿ ನೆಲೆಸಿದರು. ಈ ಜೈನ ಶ್ರಾವಕ ಜಿನ ಲಾಡರು ಈಗಲೂ ಆ ಪ್ರದೇಶಗಳಲ್ಲಿ ಬಸದಿಗಳನ್ನು ನಿರ್ಮಿಸಿಕೊಂಡು ಮತ್ತೊಂದು ಪಂಗಡ ರಾಜಾಸ್ತಾನದ ಕೋಟಾ ಮತ್ತು ಇತರ ಪ್ರದೇಶಗಳಲ್ಲಿ ನೆಲೆಸಿವೆ.

ಕ್ಷತ್ರಿಯರಲ್ಲಿ ವಸ್ತುಶಃ ರಾಜರಾಗಿದ್ದವರು ಅವರ ಬಂಧುಗಳೂ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದರು. ರಾಜವಂಶಕ್ಕೆ ಸೇರಿದವರು 'ಸತ್ ಕ್ಷತ್ರಿಯ' ರೆಂದು ಕರೆಯಲ್ಪಡುತ್ತಿದ್ದರು. ಅವರಿಗೆ ಮರಣದಂಡನೆಯಿಂದ ವಿನಾಯಿತಿ ಇತ್ತು. ಕ್ಷತ್ರಿಯರು ರಾಜನಿಗೆ ಸಮೀಪದವರಾಗಿರುತ್ತಿದ್ದರು. ಕುದುರೆ ಹಾಗೂ ಕಾಲಾಳುಗಳನ್ನು ತರಬೇತುಗೊಳಿಸಿ ರಾಜ್ಯಕ್ಕೆ ಕಾಥೇವಾಡ, ಅರೇಬಿಯಾಗಳಿಂದ ಜಾತ್ಯಾಶ್ವಗಳನ್ನು ಸರಬರಾಜು ಮಾಡುತ್ತಿದ್ದ ಹಾಗೂ ವ್ಯಾಪಾರದಲ್ಲೂ ತೊಡಗಿದ್ದ ಕ್ಷತ್ರಿಯರನ್ನು 'ರಾಹುತ'ರೆಂದು ಕರೆಯಲಾಗುತ್ತಿತ್ತು. ರಾಹುತರಿಗೆ ಲಾಟ ರಾಜ್ಯದಲ್ಲಿ ಹೆಚ್ಚಿನ ಮನ್ನಣೆಯಿತ್ತು. ನಿಖರವಾದ ಸಮಯವನ್ನು ಸಾರಲು ಜಲಯಂತ್ರದ ಘಳಿಗೆ ಬಟ್ಟಲು ಅಥವಾ 'ಘಟಿಕಾ' ಯಂತ್ರವನ್ನು ಬಳಸಲಾಗುತ್ತಿತ್ತು. ಸೂರ್ಯೋದಯದ ಸಮಯಕ್ಕೆ ಸರಿಯಾಗಿ ಘಳಿಗೆ ಬಟ್ಟಲನ್ನು ನೀರಿನ ಪಾತ್ರೆಯಲ್ಲಿ ತೇಲಲು ಬಿಡಲಾಗುತ್ತಿತ್ತು. ಅದು

ಮೂರು ಬಾರಿ ಮುಳುಗಿದಾಗ ಸುಮಾರು ಒಂದು ಘಂಟೆಯೆಂದು ನಿರ್ಧರಿಸಿ ಸಮಯದ ಗಂಟೆ (ಜಾಗಟೆ) ಬಾರಿಸಲಾಗುತ್ತಿತ್ತು. ಅದಕ್ಕಾಗಿ 'ಪ್ರಹರಿ' ಯೊಬ್ಬನನ್ನು ನೇಮಕ ಮಾಡಲಾಗುತ್ತಿತ್ತು. ಇದರ ನಿರ್ವಹಣೆ ಮಾಡುತ್ತಿದ್ದವನನ್ನು 'ಘಡಿಯಾಲ' ಲಾಡನೆಂದು ಕರೆಯಲಾಗುತ್ತಿತ್ತು. ಇವರ ವಂಶಜರು ಈಗಲೂ ಸೊಲ್ಲಾಪುರ, ಉಸ್ಮಾನಾಬಾದ್, ಬೀಡ್‌ಗಳಲ್ಲಿ ವಾಸಿಸುತ್ತಿದ್ದಾರೆ. ರಾಜತಾಂತ್ರಿಕರು ನೆರೆಯ ಮಾಂಡಲೀಕರು ಹೊರಟಾಗ ಅವರಿಗೆ ಗಜಾಶ್ವ, ಛತ್ರಗಳನ್ನು ನೀಡುವುದರ ಜೊತೆಗೆ 'ಘಟಿಕಾ' ಯಂತ್ರವನ್ನು ನೀಡುವುದು ಗೌರವ ಸೂಚಕವೆಂದು ಭಾವಿಸಲಾಗುತ್ತಿತ್ತು. ಘಟಿಕಾದ ಬಳಕೆ ವೇದಗಳ ಕಾಲದಿಂದಲೂ ಬಳಕೆಯಲ್ಲಿದೆ. ಇದರ ದೃಷ್ಟಾಂತವೊಂದನ್ನು ಇಲ್ಲಿ ನೆನಪಿಸುವುದು ಅನುಚಿತವಲ್ಲ.



ಘಟಿಕಾಯಂತ್ರ

ಅಪ್ರತಿಮ ಖಗೋಳಶಾಸ್ತ್ರಜ್ಞ ಹಾಗೂ ಗಣಿತಜ್ಞ ಭಾಸ್ಕರಚಾರ್ಯನಿಗೆ ಅಪೂರ್ವ ಸುಂದರಿಯಾದ ಲೀಲಾವತಿಯೆಂಬ ಮಗಳಿದ್ದಳು. ಲೀಲಾವತಿಯ ಜಾತಕ ಗಮನಿಸಿದ ಭಾಸ್ಕರಾಚಾರ್ಯ ಅವಳಿಗ ಅತಿ ಚಿಕ್ಕ ವಯಸ್ಸಿಗೇ ವೈಧವ್ಯ ಪ್ರಾಪ್ತವಾಗುವುದೆಂದು ಖಚಿತಪಡಿಸಿಕೊಂಡನು. ಆದ್ದರಿಂದ, ಅವಳ ವಿವಾಹಕ್ಕೆ ಆತನೇ ಅತಿಪ್ರಶಸ್ತವಾದ ಘಳಿಗೆಯನ್ನು ಗೊತ್ತುಪಡಿಸಿ ಲಗ್ನ ನಿಷ್ಕರ್ಶೆ ಮಾಡಿದನು. ವಿವಾಹದ ನಂತರ ನಿಷೇಕ ಪ್ರಸ್ತದ ಕೋಣೆಯಲ್ಲಿ, ಹಣ್ಣೊಂದನ್ನು ಕೊಯ್ದಾಗ ಅದರಿಂದ ಎಗರಿದ ಮಿಡಿನಾಗರವೊಂದು ನೂತನ ವರನಿಗೆ ಕಚ್ಚಿ ಅದರಿಂದ ಅವನ ಸಾವಾಯಿತು. ಭಾಸ್ಕರಾಚಾರ್ಯನಿಗೆ ಇದು ಸೋಜಿಗವನ್ನೂ, ವ್ಯಸನವನ್ನೂ ಉಂಟುಮಾಡಿತ್ತು. ಇದು ಆಗಲು ಸಾಧ್ಯವಿಲ್ಲವೆಂದು ಬಗೆದ ಆಚಾರ್ಯ ಇದಕ್ಕಾಗಿ ಕಾರಣಗಳನ್ನು ಹುಡುಕತೊಡಗಿದ. ಕಡೆಗೆ ಮೂಲೆಯಲ್ಲಿ ಸ್ಥಾಪಿಸಿದ ಘಟಿಕಾ ಯಂತ್ರದ ಘಳಿಗೆ ಬಟ್ಟಲಿನಲ್ಲಿ, ಧಾರೆ ಸಮಯದಲ್ಲಿ ಜಗಳವಾಡುತ್ತಿದ್ದ

ಬಾಲಕಿಯರಿಬ್ಬರು ಕತ್ತಿನ ರಸಗುಂಡಿನ ಸರವೊಂದಕ್ಕೆ ಕಿತ್ತಾಟ ನಡೆಸಿದಾಗ ಜೋರಾಗಿ ಎಳೆದ ಕಾರಣದಿಂದ ಸಣ್ಣ ಮಣಿಯೊಂದು ಎಗರಿ ಬಟ್ಟಲಿನಲ್ಲಿ ಬಿದ್ದುದರಿಂದ ಲಗ್ನದ ಇಡೀ ನಿರ್ಧರಿತ ಸಮಯ ಏರುಪೇರಾಗಿತ್ತು. ವಿಧಿಯಾಟದ ಮುಂದೆ ಮಾನವನದೇನೂ ಸಾಗದೆಂದು ನಿರ್ಧರಿಸಿದ ಆಚಾರ್ಯ, ಲೀಲಾವತಿಯ ಚಿತ್ತವನ್ನು ಬೇರೆಡೆ ಸೆಳೆಯಲು ಆವಳಿಗೆ ಗಣಿತದಲ್ಲಿ ಆಸಕ್ತಿ ಹುಟ್ಟಿಸಿ, ಪರಿಣಾಮವಾಗಿ *''ಲೀಲಾವತೀ ಗಣಿತ''* ಭಾರತಕ್ಕೆ ಹೆಮ್ಮೆಯ ಕೊಡುಗೆಯಾಯಿತು. ಕರ್ನಾಟಕದಲ್ಲಿರುವ ಸೌಧಾಗರ್ ಕ್ಷತ್ರಿಯ ಲಾಡರು, ಮನೆನಾಡಿನ ಕೆಲವು ಬ್ರಾಹ್ಮಣ ಸಂಪ್ರದಾಯಸ್ಥ ಮನೆತನಗಳು ಮತ್ತು ಮಹಾರಾಷ್ಟ್ರ ಹಾಗೂ ಕೊಂಕಣಗಳಲ್ಲಿ ಇಂದಿಗೂ ಘಳಿಗೆಯಂತ್ರ ವಿವಾಹ ಸಂಪ್ರದಾಯದ ಒಂದು ಅವಿಭಾಜ್ಯ ಅಂಗವಾಗಿದೆ.

ಕ್ಷತ್ರಿಯರು ಸಾಮಾನ್ಯವಾಗಿ ಮಾಂಸಾಹಾರಿಗಳಾಗಿದ್ದುದರಿಂದ ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವೆ ಅಂತರ ಭೋಜನ ಅಸಂಭವವಾಗಿದ್ದಿತು. ಕ್ಷತ್ರಿಯರ ಸ್ಥಾನಮಾನ ರಾಜಕೀಯ ಶಕ್ತಿ ಮತ್ತು ಅಧಿಕಾರವನ್ನು ಅವಲಂಬಿಸಿತ್ತು. ಸೈನಿಕವರ್ಗ ಇದರಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿತ್ತು. ಕ್ಷತ್ರಿಯರು ಪುರೋಹಿತ ವರ್ಗದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿರುತ್ತಿದ್ದರು. ಏಕೆಂದರೆ, ಪುರೋಹಿತರು ಕ್ಷತ್ರಿಯರ ಅಧಿಕಾರವನ್ನು ಶಾಸನಬದ್ಧಗೊಳಿಸುತ್ತಿದ್ದರು. ಕ್ಷತ್ರಿಯ ಸ್ಥಾನಮಾನವನ್ನು ಪಡೆಯಲು ಶಾಸನಬದ್ಧಗೊಳ್ಳುವುದು ಅವಶ್ಯಕವಾಗಿತ್ತು.

ಹುಟ್ಟಿನಿಂದ ಕ್ಷತ್ರಿಯರಾಗಿಲ್ಲದ ಉನ್ನತ ವ್ಯಕ್ತಿಗಳನ್ನು ಅವರ ಪರಾಕ್ರಮ ಮತ್ತು ದಕ್ಷತೆಗಳನ್ನೇ ಆಧಾರವನ್ನಾಗಿಟ್ಟುಕೊಂಡು ಕ್ಷತ್ರಿಯವರ್ಗಕ್ಕೆ ಸೇರಿಸಲಾಗುತ್ತಿತ್ತು. ಕ್ಷತ್ರಿಯರು ತಮ್ಮನ್ನು ಪೌರಾಣಿಕ ಮೂಲಗಳಿಂದ ಗುರ್ತಿಸಿಕೊಳ್ಳಲು ತಾವು ಸೂರ್ಯವಂಶ ಮತ್ತು ಚಂದ್ರವಂಶಗಳಿಗೆ ಸೇರಿದವರೆಂದು ಹೇಳಿಕೊಳ್ಳುತ್ತಿದ್ದರು.

ವ್ಯಾಪಾರ, ವಾಣಿಜ್ಯ ಮತ್ತು ಕೃಷಿಯಲ್ಲಿ ತೊಡಗಿದ್ದ ವೈಶ್ಯವರ್ಗ ಸಾಮಾಜಿಕ ಶ್ರೇಣಿಯಲ್ಲಿ ಮೂರನೇ ಸ್ಥಾನವನ್ನು ಪಡೆದಿದ್ದರು. ಆದರೆ, ರಾಜ್ಯದ ಆರ್ಥಿಕತೆಯ ದೃಷ್ಟಿಯಿಂದ ಪ್ರಮುಖ ಸ್ಥಾನವನ್ನು ಹೊಂದಿದ್ದರು. ವ್ಯಾಪಾರ, ವಾಣಿಜ್ಯ ರಾಜ್ಯ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುತ್ತಿದ್ದುದು ಅರಸರ ಪ್ರೋತ್ಸಾಹ ಪಡೆಯಲು ಕಾರಣವಾಯಿತು. ಪುರೋಹಿತ ವರ್ಗ ಮತ್ತು ಸೈನಿಕವರ್ಗವನ್ನೂ ಬಿಟ್ಟರೆ ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದವರೆಂದರೆ ವ್ಯಾಪಾರಸ್ಥರು. ಶ್ರೀಮಂತ ವರ್ತಕರು ಆಡಳಿತದಲ್ಲಿ ಪಾಲ್ಗೊಳ್ಳುತ್ತಿದ್ದರು.

ವರ್ಣ ವ್ಯವಸ್ಥೆಯಲ್ಲಿ ಕೊನೆಯವರಾದ ಶೂದ್ರರು ತಮ್ಮಲ್ಲೆ ಹಲವಾರು ಜಾತಿ, ಉಪಜಾತಿಗಳಾಗಿ ವಿಭಜನೆಗೊಂಡಿದ್ದರು. ಶೂದ್ರರಲ್ಲಿ ಮುಖ್ಯವಾಗಿ ವೃತ್ತಿಯ ಆಧಾರದ ಮೇಲೆ ಪಂಗಡಗಳು – ಉಪ ಪಂಗಡಗಳು ರಚನೆಗೊಂಡರು. ಶೂದ್ರರು ಇತರ ಜಾತಿಗಳಿಗಾಗಿ ದುಡಿಯುವ ಒತ್ತಡಕ್ಕೊಳಗಾಗಿದ್ದರು. ಅವರಿಗೆ ವೇದಾಧ್ಯಯನದ

ಅವಕಾಶವಿರಲಿಲ್ಲ. ರಾಜ್ಯದ ಅರ್ಥ ವ್ಯವಸ್ಥೆಯಲ್ಲಿ ಕೃಷಿ ಮೊದಲ ಸ್ಥಾನವನ್ನು ಹೊಂದಿದ್ದರೂ ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಕೃಷಿಕರು ಕೆಳಸ್ಥಾನವನ್ನು ಹೊಂದಿದ್ದರು. ಕೃಷಿಕರು ಕೃಷಿ ಮಾತ್ರವಲ್ಲದೆ ಕರಕುಶಲ ವೃತ್ತಿ ಹಾಗೂ ಪಶುಸಂಗೋಪನೆಯಲ್ಲೂ ತೊಡಗುತ್ತಿದ್ದರು. ಶೂದ್ರರು ಕೃಷಿ, ಕೈಗಾರಿಕೆ, ವ್ಯಾಪಾರ ಹಾಗೂ ಇನ್ನಿತರ ವೃತ್ತಿಗಳಲ್ಲೂ ಪರಿಣತರಾಗಿರುತ್ತಿದ್ದರು. ಅಗಸರು (ಬಟ್ಟೆಗಳನ್ನು ಶುಚಿ ಮಾಡುವವರು), ನಾಯಿಂದರು (ಕ್ಷೌರದ ಕೆಲಸದವರು), ನೇಕಾರರು (ಬಟ್ಟೆ ನೇಯುವವರು), ಬಳೆಗಾರರು (ಬಳೆ ಮಾಡಿ ಮಾರುತ್ತಿದ್ದವರು), ಬೆಸ್ತರು (ಮೀನುಗಾರಿಕೆಯವರು), ತಂಬುಲಿಗರು (ವೀಳ್ಯದೆಲೆ ಮಾರಾಟ ಮಾಡುತ್ತಿದ್ದವರು), ಶಿಲ್ಪಿಗಳು ಈ ವರ್ಗದೊಳಗೆ ಸೇರುತ್ತಿದ್ದರು. ಇವರಲ್ಲದೆ ಬುಡಕಟ್ಟು ಜನರಾದ ಬೇಡರು, ಕುರುಬರು ಇರುತ್ತಿದ್ದರು. ಬೇಡರು ಮೂಲತಃ ಬೇಟೆ ವೃತ್ತಿಯಲ್ಲಿದ್ದು, ಯುದ್ಧಗಳಲ್ಲಿಯೂ ಪ್ರಮುಖ ಪಾತ್ರವಹಿಸುತ್ತಿದ್ದರು.

ಅಸ್ಪೃಶ್ಯರು ಮತ್ತೊಂದು ಜನಾಂಗ, ಅಸ್ಪೃಶ್ಯತೆ ಜಾರಿಯಲ್ಲಿತ್ತು. ಊರ ಕಸವನ್ನು ಗುಡಿಸುವುದು, ಸತ್ತ ದನ ಇತ್ಯಾದಿಗಳನ್ನು ಸಾಗಿಸುವುದು, ಸ್ಮಶಾನದಲ್ಲಿ ಗುಂಡಿ ತೋಡುವುದು, ಚಮ್ಮಾರಿಕೆ ಕೆಲಸ ಮಾಡುವುದು, ದಂಡನೆಗೆ ಒಳಗಾದವರನ್ನು ಗಲ್ಲಿಗೇರಿಸುವುದು ಮುಂತಾದವು ಮಾಡುತ್ತಿದ್ದ ಕೆಲಸಗಳಾಗಿದ್ದವು. ಜೀತದಾಳುಗಳು ಜೀತ ಮಾಡುವ ಪದ್ಧತಿಯೂ ಜಾರಿಯಲ್ಲಿತ್ತು.

ಅಂತರ್‌ಜಾತೀಯ ವಿವಾಹಗಳು ಅಪರೂಪವಾದರೂ, ಅಸಂಭವವೇನಾಗಿರಲಿಲ್ಲ. ಲಾಟರಾಜ್ಯದಲ್ಲಿ ಅವಿಭಕ್ತ ಕುಟುಂಬ ಪದ್ಧತಿಯೂ ಸಮಾಜದಲ್ಲಿ ಅಸ್ತಿತ್ವದಲ್ಲಿತ್ತು. ವಿಧವೆಗೆ ತನ್ನ ಗತಿಸಿದ ಪತಿಯ ಆಸ್ತಿಯ ಮೇಲೆ ಹಕ್ಕಿದ್ದಿತು. ಗಂಡು ಮಕ್ಕಳಿಲ್ಲದಿದ್ದಾಗ, ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕು ದೊರೆಯುತ್ತಿತ್ತು. ಸ್ತ್ರೀಧನದ ಹಕ್ಕನ್ನು ಮಾನ್ಯ ಮಾಡಲಾಗಿತ್ತು. ಋತುಮತಿಯಾಗುವುದಕ್ಕೆ ಮುಂಚೆಯೇ ಹೆಣ್ಣು ಮಕ್ಕಳಿಗೆ ವಿವಾಹ ಮಾಡುವ ಪದ್ಧತಿ ಜಾರಿಯಲ್ಲಿತ್ತು.

ಸ್ತ್ರೀಯರಲ್ಲಿ ಕೆಲವು ಪ್ರದೇಶಗಳಲ್ಲಿ ಘೋಷಾ ಪದ್ಧತಿ ಜಾರಿಯಲ್ಲಿತ್ತು. ಸತಿ ಸಹಗಮನ ಪದ್ಧತಿಯನ್ನು ಮಾನ್ಯ ಮಾಡಲಾಗಿತ್ತು. ವಿಧವಾ ವಿವಾಹಕ್ಕೆ ಪ್ರೋತ್ಸಾಹವಿರಲಿಲ್ಲ.

ಲಾಡ ರಾಜ್ಯದ ಜನರ ಉಡುಪು ವಿಶೇಷವಾಗಿತ್ತು. ಉದ್ದವಾದ ನಿಲುವಂಗಿ, ಕಚ್ಚೆ ಪಂಚೆ, ತಲೆಗೆ ಪೇಟ ವಿಶಿಷ್ಟವೆನಿಸಿತ್ತು. ಕಛ್ಛ, ಕಾಠೇವಾಡದಿಂದ, ಸೂತರ್‌ವರೆಗೆ ತಲೆಯ ರುಮಾಲಿನ ವಿನ್ಯಾಸ ಕೆಲವೆಡೆ ಬದಲಾಗುತ್ತಿತ್ತು. ಪುರುಷರು ತಲೆಗೆ ಧರಿಸುತ್ತಿದ್ದ ಮುಂಡಾಸು ವಿವಿಧ ರೀತಿಯ ನೆರಿಗೆಗಳಿಂದ ಕೂಡಿ ಆಕರ್ಷಣೀಯವಾಗಿದ್ದಿತು. ಇತ್ತೀಚಿನವರೆಗೂ ವಿವಾಹ, ಉತ್ಸವ ಸಂದರ್ಭಗಳಲ್ಲಿ ಈ ರೀತಿಯ ಮುಂಡಾಸು ಧರಿಸುವುದು ಪದ್ಧತಿಯಾಗಿತ್ತು. ಕಚ್ಚೆ ಹಾಕಿ ಧೋತ್ರವನ್ನು ಕಾಲು ಮಂಡಿಯವರೆಗೆ ಅಥವಾ ಪಾದದವರೆಗೆ ಬರುವಂತೆ ಬಿಡಲಾಗುತ್ತಿತ್ತು. ಕೂದಲನ್ನು ಬಾಚಿ ನೆತ್ತಿಯ ಮೇಲೆ ಗಂಟು ಬರುವಂತೆ ಮಾಡಿ ಅದನ್ನು ಸಣ್ಣ ಮಣಿಸರದಿಂದ ಕಟ್ಟಲಾಗುತ್ತಿತ್ತು. ಕಿವಿಗೆ ಹತ್ತಕಡಕ ಧರಿಸುವುದು ಸಾಮಾನ್ಯವಾಗಿತ್ತು. ಇಂದಿಗೂ ಲಾಡ ಸೌಧಾಗರ ಕ್ಷತ್ರಿಯರಲ್ಲಿನ

ವಿವಾಹಗಳಲ್ಲಿ ಈ ರೀತಿ ನಿಲುವಂಗಿ ಪೋಷಾಕು ಹಾಗೂ ಪೇಟಾ ಪ್ರಧಾನ ಉಡುಪೆನಿಸಿದೆ. ಸ್ತ್ರೀಯರಲ್ಲೂ ಸಹ ಉಡುಪು ವಿಶೇಷವೆನಿಸಿತ್ತು. ತಲೆಯ ಮೇಲೆ ಸೆರಗು ಹೊದ್ದು ಉಡುತ್ತಿದ್ದ, ಕಚ್ಚೆ ಸೀರೆ, ಕುಪ್ಪುಸ ತೊಡುವುದು ಸಾಮಾನ್ಯವೆನಿಸಿತ್ತು. ಸುಮಂಗಲಿಯರು ಹಣೆಗೆ ಸಿಂಧೂರ, ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳು ತಿಲಕ, ಬೊಟ್ಟು ಇಟ್ಟುಕೊಳ್ಳುತ್ತಿದ್ದರು. ವಿಧವೆಯರು ಹಣೆಗೆ ಕಪ್ಪು 'ಬುಕ್ಕ' ಎಂಬ ಪುಡಿ ಹಚ್ಚಿಕೊಳ್ಳುತ್ತಿದ್ದರು.

ಲಾಟ ರಾಜ್ಯದ ರಾಜಧಾನಿ ನಂದೀಪುರವಾಗಿತ್ತು. ರಾಜಧಾನಿಯು ನಯನ ಮನೋಹರವಾದ ಅರಮನೆಗಳಿದ್ದವು. ದೊರೆಗಳ ಮೆಚ್ಚಿನ ವಿನೋದ ನರ್ತನವಾಗಿತ್ತು. ಆಸ್ಥಾನದ ನರ್ತಕಿಯರು ಅರಸು ಮನೆತನದವರಿಗೆ ಮೋಡಿ ಮಾಡುವ ರೀತಿಯಲ್ಲಿ ಮೋಹಕ ನೃತ್ಯ ಮಾಡುತ್ತಿದ್ದರು. **'ಗುರ್ಜರ ದೇಶದ ಪ್ರಾಚೀನ ವೈಭವ'** ಎಂಬ ಕೆ.ಎಂ. ಮನ್ಷಿಯವರ ಪುಸ್ತಕದಲ್ಲಿ (ಪುಟ ೧೩೬) ''ಲಾಟ – ಅದರ ಸ್ತ್ರೀಯರು ಸೌಂದರ್ಯದ ಖನಿಯಾಗಿಯೂ ಅವರ ವಾಕ್ಚಾತುರ್ಯವೂ ಹೆಸರುವಾಸಿಯಾಗಿತ್ತು. ಸ್ತ್ರೀಯರಿಗೆ ಲಾಟದಲ್ಲಿ ಉನ್ನತ ಸ್ಥಾನಮಾನಗಳಿದ್ದವು. ಅರಸರಿಗೆ ಬೇಟೆ ಅತಿ ಮೆಚ್ಚಿನ ಹವ್ಯಾಸವಾಗಿತ್ತು. ಕುದುರೆ ಹಾಗೂ ಆನೆಯ ಮೇಲೆ ಕುಳಿತು ದೊಣ್ಣೆಗಳಿಂದ ಚೆಂಡಾಟವಾಡುವುದು ಅರಸರ ಮತ್ತೊಂದು ಮುಖ್ಯ ಕ್ರೀಡೆಯಾಗಿತ್ತು. ಪ್ರಾಣಿಗಳ ಕಾಳಗವೂ ಜನರಿಗೆ ಪರಿಚಿತವಾಗಿದ್ದವು'' ಎಂದಿದ್ದಾರೆ.

ಲಾಟರ ಕಾಲದಲ್ಲಿ ಜ್ಯೋತಿಷ್ಯ ಮತ್ತು ಖಗೋಳ ಶಾಸ್ತ್ರಗಳ ಬೆಳವಣಿಗೆಯೂ ಗಣನೀಯವಾಗಿದ್ದಿತು. ಅಂದಿನ ಸಮಾಜದಲ್ಲಿ ಕೆಲವು ಮೂಢನಂಬಿಕೆಗಳು ಅಸ್ತಿತ್ವದಲ್ಲಿದ್ದವು. ಲಾಟ ರಾಜ್ಯದ ಪ್ರದೇಶದಲ್ಲಿ ನಂದಿಪುರ ರಾಜವಂಶವು ಅತಿ ಪ್ರಸಿದ್ಧವಾಗಿತ್ತು. ಈ ರಾಜವಂಶದ ಸ್ಥಾಪಕ ದದ್ದ. ಈತನು ಅತಿಶಯ ಶೂರನೂ, ಪರಾಕ್ರಮಿಯೂ ಆಗಿದ್ದನು. ಭಡೋಚದ ಗುರ್ಜರರ ಶಾಸನಗಳಲ್ಲಿ ಉಲ್ಲೇಖಿಸಿರುವಂತೆ ಇಮ್ಮಡಿ ದದ್ದನು ವಲ್ಲಭಿಯ ಅರಸನನ್ನು ಕಾಪಾಡುವ ಮೂಲಕ ಕೀರ್ತಿ ಶಿಖರಕ್ಕೇರಿದನು. ಅಲ್ಲದೆ 'ಪ್ರಾಚೀನ ಭಾರತ' ಎಂಬ ಚರಿತ್ರೆಯ ಪುಸ್ತಕದ ಕರ್ತೃ ವಿ.ಡಿ. ಮಹಾಜನ್ ರವರು ತಿಳಿಸಿರುವಂತೆ. **''ಭರೋಚದ ಇಮ್ಮಡಿ ದದ್ದನು ವಲ್ಲಭಿಯ ದೊರೆಯ ಪರ ವಹಿಸಿಕೊಂಡು ಹರ್ಷ ಚಕ್ರವರ್ತಿಯ ದ್ವೇಷ ಕಟ್ಟಿಕೊಳ್ಳಬೇಕಾಯಿತು.''**

### ಲಾಟ ರಾಜ್ಯದಲ್ಲಿನ ಆರ್ಥಿಕ ಸ್ಥಿತಿಗತಿಗಳು :

ಲಾಟ ರಾಜ್ಯದ ಕಾಲವು ವ್ಯಾಪಾರದ ಪರ್ವಕಾಲ. ವಾಣಿಜ್ಯ ಮತ್ತು ವ್ಯಾಪಾರಗಳಿಗೆ ಲಾಟರು ಜಗತ್ಪ್ರಸಿದ್ಧರಾಗಿದ್ದರು. ಸೂರತ್‌ನ ಬಳಿ ಇರುವ ಚೋರಾಸಿ ಪ್ರದೇಶವು ಉತ್ತಮ ವ್ಯಾಪಾರ ಕೇಂದ್ರವಾಗಿತ್ತು. ಪಶ್ಚಿಮ ರಾಷ್ಟ್ರಗಳ ಸರಕು ತುಂಬಿದ ಹಡಗುಗಳು ಕೆಂಪು ಸಮುದ್ರದ ಮೂಲಕ ಹಾದು ಅರಬ್ಬಿ ಸಮುದ್ರ ತಲುಪುತ್ತಿದ್ದವು. ಅಲ್ಲಿನ ಬಂದರಿನ ಬಳಿ ಎಂಬತ್ತ ನಾಲ್ಕು (ಚೌರಾ=೪+ ಅಸ್ಸಿ ಎಂದರೆ ೮೦) ದೇಶಗಳೊಡನೆ ವ್ಯಾಪಾರ ಸಂಬಂಧಗಳಿದ್ದವು. ಹಾಗಾಗಿ ಅಲ್ಲಿನ ಅರಬ್ಬಿ ಸಮುದ್ರ ತೀರದಲ್ಲಿ ಎಂಭತ್ತನಾಲ್ಕು ಪಶ್ಚಿಮ

ದೇಶಗಳ ಬಾವುಟಗಳು ಹಾರಾಡುತ್ತಿದ್ದವು. ಸೂರತ್, ಸೋಪಾರಾ, ಕಲ್ಯಾಣ್ ಹಾಗೂ ಭರೂಚ್‌ಗಳು ಅಂದಿನ ಅತಿ ಪ್ರಸಿದ್ಧ ವ್ಯಾಪಾರೀ ಬಂದರುಗಳು. ಭಾರತದ ಅತಿ ಹೆಚ್ಚಿನ ವ್ಯಾಪಾರ ಈ ಬಂದರುಗಳಿಂದಲೇ ನಡೆಯುತ್ತಿತ್ತು. ಆದ್ದರಿಂದ, 'ಸೂರತ್'ನ್ನು '**ಭಾರತದ ವೆನಿಸ್**' ಎಂದು ಕರೆಯಲಾಗುತ್ತಿತ್ತು. ದಖ್ಖನ್ನಿನ ವ್ಯಾಪಾರಕ್ಕೆ ಇವಲ್ಲದೆ ಪೈಠಣ ಮತ್ತು ತಗರ ಒಳನಾಡು ನದಿ ಸಾರಿಗೆಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು.

ಲಾಟ ರಾಜ್ಯದ ಕಾಲದಲ್ಲಿ ಗೃಹ ಕೈಗಾರಿಕೆ, ವ್ಯವಸಾಯ, ಗಣಿಗಾರಿಕೆ ಇತರ ಅತಿ ಮುಖ್ಯ ಕಸಬುಗಳಾಗಿದ್ದವು. ವಸ್ತುಗಳ ವಿನಿಮಯ ಪದ್ಧತಿ ರೂಢಿಯಲ್ಲಿತ್ತು. ಆಗಿನ ಕಾಲದಲ್ಲೂ ಚಿನ್ನ, ಬೆಳ್ಳಿ ನಾಣ್ಯಗಳು ಬಳಕೆಯಲ್ಲಿದ್ದವು. ರಾಷ್ಟ್ರಕೂಟರಿಂದ ಬಳಕೆಗೆ ಬಂದ ದ್ರಮ್ಮ, ಸುವರ್ಣ, ಕಲಂಜ ಮುಖ್ಯ ನಾಣ್ಯಗಳಾಗಿದ್ದವು. ವ್ಯಾಪಾರ ಮತ್ತು ವಾಣಿಜ್ಯಗಳಿಗಾಗಿ ವೃತ್ತಿ ಸಂಘಗಳಿದ್ದವು. ತೆರಿಗೆಗಳ ಮೂಲಕವೂ ಅಪಾರ ಕರ ಸಂಗ್ರಹವಾಗುತ್ತಿತ್ತು.

ವ್ಯವಸಾಯದ ಬಗ್ಗೆ ಹೇಳುವುದಾದರೆ, ಲಾಟ ರಾಜ್ಯದಲ್ಲಿ ಹತ್ತಿಯನ್ನು ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಿದ್ದರು. ಶೇಂಗಾ ಮತ್ತೊಂದು ಪ್ರಮುಖ ಬೆಳೆಯಾಗಿತ್ತು. ಹೈನುಗಾರಿಕೆಗೆ ಹೆಚ್ಚಿನ ಪ್ರಾಶಸ್ತ್ಯವಿತ್ತು. ದಕ್ಷಿಣ ಗುಜರಾತ್, ಖಾನ್‌ದೇಶ ಮತ್ತು ಬೇರಾರ್‌ಗಳು ಹತ್ತಿ ಬೆಳೆಗೆ ಹೆಸರುವಾಸಿಯಾಗಿದ್ದವು. ಈಗಲೂ ಈ ಪ್ರದೇಶದ ಪ್ರಮುಖ ಬೆಳೆ ಹತ್ತಿ. ನೀಲಿಯನ್ನು ಹೇರಳವಾಗಿ ಬೆಳೆದು ರಫ್ತು ಮಾಡುತ್ತಿದ್ದರು. ಸುಗಂಧ ದ್ರವ್ಯಗಳೂ ಯಥೇಚ್ಛವಾಗಿ ರಫ್ತಾಗುತ್ತಿದ್ದವು. ಹತ್ತಿ ಕೈಗಾರಿಕೆಯ ನಂತರದ ಸ್ಥಾನ ಚರ್ಮ ಹದ ಮಾಡುವ ಕೈಗಾರಿಕೆಗೆ ನೀಡಲಾಗಿತ್ತು. ಚಾಪೆ ಕೈಗಾರಿಕೆ ಮತ್ತೊಂದು ಪ್ರಮುಖವಾದ ಉತ್ಪಾದನೆಯಾಗಿತ್ತು.

ಬಡೋಚ್ ಅತಿ ಹೆಚ್ಚು ಆದಾಯ ತರುವ ಬಂದರಾಗಿತ್ತು. ಕುದುರೆಗಳು, ಖರ್ಜೂರ, ತವರ, ಸೀಸ, ಗಾಜು, ಮದ್ಯ, ಚಿನ್ನ, ಬೆಳ್ಳಿ ಮುಂತಾದವುಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು.

ಎತ್ತಿನ ಗಾಡಿ ಹಾಗೂ ಕುದುರೆಯ ಸಾರೋಟು ಪ್ರಯಾಣದ ಹಾಗೂ ಸಾಗಾಟದ ಪ್ರಧಾನ ಸಾಧನವಾಗಿದ್ದವು. ಸೈನ್ಯದ ಚಾಲನೆಗಾಗಿ ರಸ್ತೆಗಳನ್ನು ಸುಸ್ಥಿತಿಯಲ್ಲಿಡಲಾಗಿತ್ತು.

ಭೂಕಂದಾಯದ ನಂತರ ರಾಜ್ಯದಲ್ಲಿ ಬೊಕ್ಕಸಕ್ಕೆ ಆದಾಯ ಬರುತ್ತಿದ್ದ ಮತ್ತೆರಡು ಮೂಲಗಳೆಂದರೆ, ಗೃಹ ಕೈಗಾರಿಕೆಗಳು ಮತ್ತು ಕೈಕಸಬುಗಳ ಮೇಲೆ ಹಾಕುತ್ತಿದ್ದ ತೆರಿಗೆ ಹಾಗೂ ವ್ಯಾಪಾರದ ಮೇಲೆ ಹಾಕುತ್ತಿದ್ದ ತೆರಿಗೆ ಹಾಗೂ ಆಮದು ರಫ್ತು ಸುಂಕ. ಗುಜರಾತಿನ ಭೌಗೋಳಿಕ ಲಕ್ಷಣಗಳನ್ನು ಗಮನಿಸಿದರೆ ಲಾಟ ಸಾಮ್ರಾಜ್ಯವು ಕೃಷಿಯ ಜೊತೆಗೆ ಕೈಗಾರಿಕೆ ಹಾಗೂ ವ್ಯಾಪಾರವನ್ನು ಎಷ್ಟರಮಟ್ಟಿಗೆ ಅವಲಂಬಿತವಾಗಿತ್ತೆಂಬುದು ತಿಳಿದುಬರುತ್ತದೆ. ಯಾವುದೇ ಕೈಗಾರಿಕೆಯ ಬೆಳವಣಿಗೆಯಾಗಬೇಕಾದರೆ ಪ್ರಮುಖವಾಗಿ ಕಚ್ಚಾ ವಸ್ತುಗಳು ಅತ್ಯವಶ್ಯ. ಈ ದೃಷ್ಟಿಯಲ್ಲಿ ಲಾಟ ದೇಶದಲ್ಲಿ ಕೈಗಾರಿಕೆಗಳು ಬೆಳೆಯಲು ಸಹಾಯಕವಾಗುವ

ಹೆಚ್ಚು ಕಡಿಮೆ ಎಲ್ಲಾ ಉತ್ಪನ್ನಗಳೂ ದೊರೆಯುತ್ತಿದ್ದವು. ಮುಖ್ಯವಾಗಿ ಹತ್ತಿ, ಎಣ್ಣೆ ಬೀಜಗಳು, ರೇಶ್ಮೆ ಮತ್ತು ಇತರ ದಾರಗಳು ಬಟ್ಟೆ ತಯಾರಿಸುವ ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳಾಗಿದ್ದವು. ಕುದುರೆ ಸಾಕುವ ಉತ್ತಮ ಕೇಂದ್ರಗಳು ಮಧ್ಯ ಮತ್ತು ಪಶ್ಚಿಮ ಏಷ್ಯಾಗಳಲ್ಲಿದ್ದವು. ತದನಂತರ ಗುಜರಾತಿನ ಕಾಟೇವಾಡ ಭಾರತದಲ್ಲಿ ಕುದುರೆ ಸಾಕುವ ಮಹತ್ವದ ಕೇಂದ್ರವಾಗಿತ್ತು, ಕಛ್ ಮತ್ತು ಕಾಠೇವಾಡಗಳು ಕುದುರೆಗಳ ಪೋಷಣೆ, ಪಾಲನೆಗೆ ಹೆಸರುವಾಸಿಯಾಗಿದ್ದವು. ಲಾಡ ರಾಹುತರು ಈ ಅಶ್ವ ತಳಿ ಅಭಿವೃದ್ಧಿ ಕೆಲಸದಲ್ಲಿ ತೊಡಗಿರುತ್ತಿದ್ದರು. ಭಾರತದ ಅನೇಕ ರಾಜ ಮಹಾರಾಜರ ಯುದ್ಧಗಳ ಅಗತ್ಯಗಳಿಗೆ ಅಶ್ವಗಳನ್ನು ತರಬೇತಿಗೊಳಿಸಿ ಪೂರೈಸುವುದು, ರಾಹುತರ ಕಾಯಕವಾಗಿತ್ತು. ಯುದ್ಧವಿಲ್ಲದ ಶಾಂತಿ ಸಮಯದಲ್ಲಿ ವಸ್ತು ಸರಂಜಾಮುಗಳನ್ನು ವ್ಯಾಪಾರಕ್ಕಾಗಿ ಕುದುರೆಗಳ ಮೇಲೆ ಸಾಗಿಸುತ್ತಿದ್ದ ಈ ರಾಹುತರು ಹಾಗಾಗಿ ಸೈನಿಕ ಮತ್ತು ವ್ಯಾಪಾರಿ ವೃತ್ತಿಗಳೆರಡರಲ್ಲೂ ತೊಡಗಿರುತ್ತಿದ್ದುದರಿಂದ ಸೌಧಾಗರ್ ಕ್ಷತ್ರಿಯ ರಾಹುತರೆಂದು ಲಾಡರಲ್ಲಿ ಪ್ರಸಿದ್ಧಿಯಾಗಿದ್ದಾರೆ. ಅಲ್ಲದೆ, ದಕ್ಷಿಣ ಭಾರತದ ಹವಾಗುಣವು ಕುದುರೆಗಳನ್ನು ಸಾಕಲು ಉತ್ತಮವಾಗಿರಲಿಲ್ಲ. ಕುದುರೆಗಳ ಉಪಯೋಗ ಸೈನ್ಯದಲ್ಲಿ ಅತಿ ಹೆಚ್ಚಾಗಿತ್ತು.

ಲಾಡ ರಾಹುತರಿಗೆ ತಮ್ಮ ಕುದುರೆಗಳೆಂದರೆ ಜೀವ, ಅಚ್ಚುಮೆಚ್ಚು. ಒಳ್ಳೆಯ ಜಾತ್ಯಾಶ್ವದ ತಳಿಗಾಗಿಯೇ ಅನೇಕ ಯುದ್ಧಗಳಾಗಿವೆ. ದೆಹಲಿ ಸುಲ್ತಾನನೊಬ್ಬ ಪ್ರಯಾಣಿಸುತ್ತಾ, ತನ್ನ ಪ್ರಯಾಣದ ಮಧ್ಯದಲ್ಲಿ ಗುಜರಾತಿನ ಲಾಟದ ಮಧ್ಯೆ ಹಾದು ಹೋಗುವಾಗ ಲಾಟ ಸೇನಾನಿ ರಾಹುತನೊಬ್ಬನ ಕುದುರೆಯನ್ನು ನೋಡಿ ಮೆಚ್ಚಿ ಆ ಕುದುರೆಯನ್ನು ತನಗೆ ನೀಡುವಂತೆ ರಾಹುತನ್ನು ಕೇಳಿದನಂತೆ. ಆದಕ್ಕೆ ಆ ರಾಹುತನು – ***''ಲಾಡ ರಾಜನಿಗೆ, ಸೇನಾನಿಗೆ ಅಷ್ಟೇ ಏಕೆ ಸಾಮಾನ್ಯ ಸೈನಿಕನಿಗೂ ಸಹ ಲಾಡನೊಬ್ಬನಿಂದ ಮೂರು ವಸ್ತುಗಳನ್ನು ಕೇಳಬಾರದು – ಅವು ಅವನ ಕುದುರೆ, ಅವನ ಹೆಂಡತಿ ಮತ್ತು ಅವನ ಕತ್ತಿ''*** ಎಂದು ಹೇಳಿ ಕುದುರೆಯನ್ನು ಓಡಿಸಿಕೊಂಡು ಹೋದನಂತೆ. ಆಮೇಲೆ ಆ ಘಟನೆಯಿಂದ ಒಂದು ಯುದ್ಧವೇ ಆಯಿತು.

ಲಾಡ ರಾಹುತರಿಗೆ ಕುದುರೆಗಳನ್ನು ಸಾಕುವುದು, ಅವುಗಳನ್ನು ತರಬೇತಿಗೊಳಿಸುವುದು ಮತ್ತು ಅವುಗಳನ್ನು ರಾಜರುಗಳಿಗೆ ಸರಬರಾಜು ಮಾಡುವುದು ಇವು ಲಾಡ ರಾಹುತರ ಮುಖ್ಯ ಕಸುಬಾಗಿತ್ತು. ಗುಜರಾತಿಯಲ್ಲಿ ಮುಸ್ಲಿಂ ದೊರೆಗಳ ಆಕ್ರಮಣಗಳು ಹೆಚ್ಚಾದ ನಂತರ, ಲಾಡ ರಾಹುತರು ತಮ್ಮ ಅಶ್ವ ವ್ಯಾಪಾರಕ್ಕಾಗಿ, ರಾಜಸ್ಥಾನ, ಮಹಾರಾಷ್ಟ್ರ ಹಾಗೂ ಕರ್ನಾಟಕಗಳತ್ತ ವಲಸೆ ಬಂದರು. ಹೀಗೆ ವಲಸೆ ಬಂದ ಕರ್ನಾಟಕದ ಲಾಡ ರಾಹುತರು ತುಮಕೂರು ಜಿಲ್ಲೆಯ ಸಿರಾ ಪಟ್ಟಣವನ್ನು ಉತ್ತಮ ವ್ಯಾಪಾರಿ ನೆಲೆಯೆಂದು ಅಲ್ಲಿ ತಮ್ಮ ಬೀಡುಬಿಟ್ಟರು. ಹೀಗೆ ಅವರು ನೆಲೆಸಿದ ಸಿರಾ ಪಟ್ಟಣದ ಭಾಗ 'ಲಾಟಪುರ' ಪ್ರದೇಶವೆಂದು ಇಂದಿಗೂ ಹೆಸರು ಪಡೆದಿದೆ. ಅಲ್ಲಿ ಶ್ರೀ ಭವಾನಿ ಮಾತೆಯ ದೇವಾಲಯವನ್ನೂ ಸಹ ನಿರ್ಮಿಸಿಕೊಂಡರು. ಸುಮಾರು ೧೭೮೬ ರ

ಸಮಯದಲ್ಲಿ ಹೈದರಾಲಿ, ಅನಂತರ ಟಿಪ್ಪು ಸುಲ್ತಾನನು ಸಿರಾ ಪಟ್ಟಣವನ್ನು ಮುತ್ತಿ ಕೈವಶ ಮಾಡಿಕೊಂಡರು. ತನ್ನ ಸೇನೆಗೆ ತಕ್ಕ ಗುಣಗಳನ್ನು ಹೊಂದಿದ್ದ ಲಾಡರಾಹುತರನ್ನು ನೋಡಿದ ಸುಲ್ತಾನನು, ತಾನು ಹೊಸದಾಗಿ ನಿರ್ಮಿಸಿದ್ದ ಪಟ್ಟಣ ಷಹರ ಗಂಜಾಂಗೆ ಸುಮಾರು ೧೦-೧೨ ಸಾವಿರ ಲಾಡ ರಾಹುತ ಸರದಾರರನ್ನು ಕರೆತಂದು ಅವರಿಗೆ ಅಲ್ಲಿ ನೆಲೆಸುವ ವ್ಯವಸ್ಥೆ ಮಾಡಿಕೊಟ್ಟನು. ಇಂದಿಗೂ ಸಿರಾ, ಶ್ರೀರಂಗಪಟ್ಟಣ, ಗಂಜಾಂ ಹಾಗೂ ಮೈಸೂರುಗಳಲ್ಲಿ ಲಾಡ ರಾಹುತರು ನೆಲೆಸಿರುವುದನ್ನು ಕಾಣಬಹುದು.

**ಧಾರ್ಮಿಕ ಜೀವನ :**

ಲಾಟದೇಶದ ಇತಿಹಾಸನವನ್ನು ಗಮನಿಸಿದಾಗ 'ಲಾಟ' ಎಂಬ ಪದಕ್ಕೆ ವಿದೇಶಿಯರು ನೀಡಿದ್ದ ಅರ್ಥ 'ಕಂಬ'. ಲಾಟದಲ್ಲಿ ಶಿವಲಿಂಗದ ಪೂಜೆ ಸಾಮಾನ್ಯವಾಗಿದ್ದರಿಂದ, ಸ್ಥಾಪಿತವಾಗಿದ್ದ ಲಿಂಗರೂಪವನ್ನು ಕಂಬವೆಂದು ಭಾವಿಸಿದ್ದರೆಂದು ವಿದೇಶಿಯರ ಭಾಷೆಯಲ್ಲಿ 'ಕಂಬ' ಎನ್ನುವುದಕ್ಕೆ 'ಲಾಟ' ಎಂದು ಹೆಸರು. ಶ್ರೀ ಉಮಾಶಂಕರ ಜೋಷಿಯವರು ತಮ್ಮ 'ಪುರಾಣೋಮಾ ಗುಜರಾತ್' ಎಂಬ ಕೃತಿಯಲ್ಲಿ ವಿವರಿಸಿದ್ದಾರೆ. ಶಿವಲಿಂಗದ ಪೂಜೆ ನರ್ಮದೆಯ ಪ್ರದೇಶದಲ್ಲಿ ಹಾಗೂ ಕ್ಯಾಂಬೆ ಕೊಲ್ಲಿಯವರೆಗೂ ವಿಸ್ತರಿಸಿತ್ತು. ಹೀಗೆ ಶೈವಧರ್ಮ ಪ್ರಾಬಲ್ಯ ಹೊಂದಿದ್ದ ಸಂದರ್ಭದಲ್ಲೇ ನಂತರದ ಚಾಲುಕ್ಯ ಹಾಗೂ ರಾಷ್ಟ್ರಕೂಟರು ಲಾಟದ ಹತೋಟಿ ಪಡೆದು ವೈಷ್ಣವ ಹಾಗೂ ಜೈನ ಧರ್ಮಗಳ ವ್ಯಾಪಕ ಹರಡುವಿಕೆಗೆ ಕಾರಣವಾದರು.

ಕಲಚೂರಿ ದೊರೆಗಳ ರಾಜ ಮಾತೆ ಅಲ್ಪಣದೇವಿಯು ಲಾಟದ ಬೇದಘಾಟ್ ಎಂಬಲ್ಲಿ ವೈದ್ಯನಾಥ ಶಿವನ ದೇವಾಲಯವೊಂದನ್ನು ಕಟ್ಟಿಸಿದಳು. ಆ ದೇವಾಲಯದಲ್ಲಿ ಮಠವೊಂದರ ನಿರ್ಮಾಣವೂ ಆಯಿತು. ಆ ಮಠಕ್ಕೆ ಪಾಶುಪತ ಆಚಾರ್ಯರಾಗಿದ್ದ ಶ್ರೀ ರುದ್ರರಾಶಿ ಎಂಬ ಪಂಡಿತರನ್ನು ನೇಮಕ ಮಾಡಲಾಗಿತ್ತು. ಇದಲ್ಲದೆ ಕೋರೀವ್ ಗ್ರಂಥಗಳಲ್ಲಿ ಉಲ್ಲೇಖಿಸಿರುವಂತೆ **''ಲಾಟ ದೇಶದಲ್ಲಿ ಇದಲ್ಲದೆ ಅಲ್ಲೇಲ ಭಾವೇ ಬ್ರಹ್ಮನೆಂಬ ಜ್ಞಾನಿ ಆಚಾರ್ಯನೂ ಸಹ ಆ ಕಾಲದಲ್ಲಿ ಜೀವಿಸಿದ್ದನು.''**

ಶೈವ ಸಂಪ್ರದಾಯದ ಪಾಶುಪತ ಪಂಥದ ಪ್ರತಿಪಾದಕ ಹಾಗೂ 'ಪಂಚಾರ್ಥ ವಿದ್ಯಾ' ಎಂಬ ಕೃತಿಯ ಕರ್ತೃ ಶ್ರೀ ಲಕುಲೀಶನು ಲಾಟ ದೇಶದ ಕಾರೋಹಣ ಗ್ರಾಮದಲ್ಲಿ ಜನ್ಮ ತಾಳಿದನು. ಆತನ ಬುದ್ಧಿ ಸಾಮರ್ಥ್ಯ ಹಾಗೂ ಆಧ್ಯಾತ್ಮಿಕ ಸಾಧನೆಯು ಆತನನ್ನು **'ಶ್ರೀ ಶಂಕರನ ಹದಿನೆಂಟು ಅವತಾರಗಳಲ್ಲಿ ಅತಿ ಮಹತ್ವದ ಉನ್ನತ ಅವತಾರ**'ವೆಂದು, 'ಕಲಚೂರಿ ವಾತ್ಯಾಂಚಾ ಕಾಲ್' ಎಂಬ ವಿ.ವಿ. ಮಿರಾಶಿಯವರ ಕೃತಿಯಲ್ಲಿ ಉಲ್ಲೇಖಿಸಲಾಗಿದೆ. (ಪುಟ ೭೯-೮೦, ಮುದ್ರಣ ೧೯೫೭) (ಮಧ್ಯಪ್ರದೇಶ ಶಾಸನ ಸಾಹಿತ್ಯ ಪರಿಷದ್ ಪ್ರಕಟಣೆ).

ಜೈನ ಹಾಗೂ ಬೌದ್ಧ ಧರ್ಮಗಳೂ ಸಹ ಲಾಟದಲ್ಲಿ ಹರಡಿದ್ದವು. ಜೈನಧರ್ಮ ಕ್ರಮೇಣ ರಾಷ್ಟ್ರಕೂಟ ದೊರೆಗಳಿಂದ ಹೆಚ್ಚಿನ ಸ್ಥಾನಮಾನ ಪಡೆಯಿತು. ಈ ಸಂದರ್ಭದಲ್ಲಿ

ಜೈನಧರ್ಮಕ್ಕೆ ಪರಿವರ್ತನೆಗೊಂಡ ಲಾಟ ಉಪಪಂಗಡಗಳು ರಾಜಸ್ಥಾನ ಹಾಗೂ ಮಹಾರಾಷ್ಟ್ರದ ಲಾಡ ಕಾರಂಜ, ಅಮರಾವತಿ, ನಾಗಪುರ, ಅಚಲಪುರಗಳಲ್ಲಿ ಈಗಲೂ ನೆಲೆಸಿವೆ. ಲಾಡ ಕಾರಂಜದಲ್ಲಿ ಶ್ರೀ ಪದ್ಮಾವತಿ ಬಸದಿ, ಅತಿ ಪ್ರಾಚೀನ ಕಾಲದ ಶ್ರೀ ಚಂದ್ರನಾಥ ಬಸದಿ ಹಾಗೂ ಪರಮ ಪೂಜ್ಯ ಶ್ರೀ ನರಸಿಂಹ ಸರಸ್ವತಿಯವರ ದತ್ತಾತ್ರೇಯ ರೂಪದ ಗದ್ದುಗೆಗಳಿವೆ.

ಲಾಟ ರಾಜ್ಯವನ್ನಾಳುತ್ತಿದ್ದವನು ಸೋಮವಂಶದ ಕ್ಷತ್ರಿಯ ರಾಜ. ಆತನು ತನ್ನ ಪ್ರದೇಶಗಳಾದ ತಕ್ಕಗಾದಿ ಕಾಠೇವಾಡ, ಕಚ್ಛ, ಸಿಂಧಗಳ ಮೇಲೆ ಹತೋಟಿ ಹೊಂದಿದ್ದನು. ಶ್ವೇತಾಶ್ವ, ಶ್ವೇತಛತ್ರಗಳನ್ನು ಒಳಗೊಂಡ ಶ್ವೇತ ಪತಾಕೆ ಅವನದಾಗಿತ್ತು. ಗುರು ಗೋತ್ರ ವಶಿಷ್ಠ. ಕುಲದೇವತಾ ಭವಾನಿ ಮಾತೆ, ಅಲ್ಲದೆ ಸೋಮನಾಥದ ಸೋಮನಾಥೇಶ್ವರನನ್ನು ಮನೆ ದೇವರೆಂದು ಪೂಜಿಸುತ್ತಿದ್ದರು. ಬ್ರಾಹ್ಮಣರಿಗೆ ಅತಿ ಹೆಚ್ಚಿನ ಸ್ಥಾನಮಾನಗಳನ್ನು ನೀಡಲಾಗಿತ್ತು. ಕ್ರಿ.ಶ. ೨ ನೇ ಶತಮಾನದಲ್ಲಿ ಕ್ಷತ್ರಪರು ಲಾಟದ ಬ್ರಾಹ್ಮಣ ಪುರೋಹಿತರನ್ನು ಒತ್ತೆಯಾಳುಗಳನ್ನಾಗಿ ಇಟ್ಟುಕೊಂಡು ಅವರನ್ನು ಹಿಂಸಿಸಲಾರಂಭಿಸಿದರು. ಆಗ ಶಾತವಾಹನರ ಪರಾಕ್ರಮಿ ದೊರೆ ಗೌತಮೀಪುತ್ರ ಸಿರಿ ಸಾತಕರ್ಣಿಯು ನಹಪಾಣ ವಂಶದ ಕ್ಷಹರಾತ್ ಕ್ಷತ್ರಪ ಕುಲವನ್ನು ನಾಶ ಮಾಡಿ, ಬಂಧಿಗಳಾಗಿದ್ದ ವೈದಿಕರನ್ನು ಬಿಡಿಸಿಕೊಂಡು ಅವರನ್ನು ಈಗಿನ ಮಹಾರಾಷ್ಟ್ರದ ತನ್ನ ರಾಜಧಾನಿ ಪೈಠಣದಲ್ಲಿ ಆಶ್ರಯ ನೀಡಿದನು'' ಎಂದು ನಾಶಿಕದಲ್ಲಿ ಪಾಂಡರಿ ಲೇಣ್‌ನಲ್ಲಿರುವ ಶಿಲಾ ಶಾಸನದಲ್ಲಿ ಉಲ್ಲೇಖಿಸಲಾಗಿದೆ (ಕ್ರಿ.ಶ. ೧೪೯).

ಸೋಮವಂಶದ ದೊರೆಗಳ ನಂತರ ಸೂರ್ಯವಂಶ ಕ್ಷತ್ರಿಯದೊರೆಗಳು ಲಾಟ ರಾಜ್ಯವಾಳಿದರು. ಸೂರ್ಯವಂಶಿ ದೊರೆಗಳಲ್ಲಿ ಹನ್ನೆರಡು ಗೋತ್ರದ ರಾಜರು ಆಳಿದರೆಂದು ತಿಳಿದುಬರುತ್ತದೆ. ಅವರ ಆಚರಣೆಗಳನ್ನೆಲ್ಲಾ ದೀರ್ಘವಾಗಿ ವಿವರಿಸಲಾಗಿದೆ.

''ಸೂರ್ಯ ವಂಶೋದ್ಭವಾನಾ ತು ಗೋತ್ರಾಣಿ ದ್ವಾದಶ್ಯೆ ವಹಿ।
ಪಂಚವಿಂಶತಿ ಮ್ಯಾನಾಮ ಗೋತ್ರಾಣಿ ಮುನಿರಭ್ರುವೀತ॥

ಸೂರ್ಯವಂಶದ ಕ್ಷತ್ರಿಯ ರಾಜರುಗಳ ಗೋತ್ರಗಳು ಹನ್ನೆರಡು :

೧) ಭಾರಧ್ವಾಜ, (೨) ಪೂತಿಮಾಕ್ಷ, (೩) ವಶಿಷ್ಠ, (೪) ಕಶ್ಯಪ, (೫) ಹರಿತ, (೬) ಬ್ರಹ್ಮ, (೭) ವಿಷ್ಣು, (೮) ಶೌನಕ, (೯) ಕೌಂಡಿಣ್ಯ, (೧೦) ಕೌಶಿಕ, (೧೧) ವಿಶ್ವಾಮಿತ್ರ, (೧೨) ಮಾಂಡವ್ಯ.

ಲಾಟ ಸೋಮವಂಶದ ಕ್ಷತ್ರಿಯರು ರುದ್ರ ಗಾಯಿತ್ರಿ ಬೀಜಾಕ್ಷತಿ ಸಹಿತ ಜಪ ಮಾಡುತ್ತಾರೆ. ಸೂರ್ಯವಂಶದ ಕ್ಷತ್ರಿಯರು ಸೂರ್ಯ ಗಾಯಿತ್ರಿ ವೇದ ಮಂತ್ರಗಳಿಂದ ವಿಷ್ಣು ಸೂರ್ಯಾದಿ ಉಪಾಸನ ಮಾಡಬೇಕು. ಬ್ರಹ್ಮವಂಶ ಕ್ಷತ್ರಿಯರು ದೇವಿ ಗಾಯತ್ರಿ ಮಂತ್ರದಿಂದ ದೇವಿ ಉಪಾಸನೆ ಮಾಡಬೇಕು. ಶೇಷವಂಶದ ಕ್ಷತ್ರಿಯರು ಗಣೇಶ ಗಾಯಿತ್ರಿ ಮಂತ್ರದಿಂದ ಗಣಪತಿ ಉಪಾಸನೆ ಮಾಡಬೇಕು.

ಮೇಲೆ ಹೇಳಿದ ಪ್ರಕಾರ ನಾಲ್ಕೂ ವಂಶದವರು ತಮ್ಮ ಕುಲಧರ್ಮದಂತೆ ಹತ್ತು ವರ್ಷದೊಳಗಿನ ಗಂಡು ಮಕ್ಕಳಿಗೆ ಮುಂಜ ಮುಂಡನಾದಿಗಳನ್ನು ಮಾಡಿಸಿ ಇಪ್ಪತ್ತೈದು ವರ್ಷಗಳ ಪರ್ಯಂತದ ವಿದ್ಯಾ ಮತ್ತು ವೇದ, ಧನುರ್ವೇದ ಇತ್ಯಾದಿಗಳಲ್ಲಿ ನಿಪುಣರನ್ನು ಮಾಡಬೇಕು. ಕ್ಷತ್ರಿಯ ಸ್ತ್ರೀಯರು ರಜಸ್ವಲಾವಸ್ಥೆಯಲ್ಲಿ ಮೂರು ದಿವಸಗಳ ಪರ್ಯಂತರ ಅಸ್ಪೃಶ್ಯ ಧರ್ಮವನ್ನು ಪಾಲನೆ ಮಾಡಬೇಕು. ಸಮಸ್ತ ಕ್ಷತ್ರಿಯರ ಮನೆಗಳಲ್ಲಿ ವಿಜಯದಶಮಿಯ ದಿವಸ ಶಸ್ತ್ರಗಳನ್ನು ಪೂಜಿಸಬೇಕು.

ಹೀಗಾಗಿ ಲಾಟದಲ್ಲಿ ಮುಖ್ಯವಾಗಿ ಹಿಂದೂ ದೇವರುಗಳಾದ ಶಿವ, ವಿಷ್ಣು ಲಕ್ಷ್ಮಿ ಭವಾನಿ, ಮಾರುತಿ ಹಾಗೂ ಸೂರ್ಯನನ್ನು ಆರಾಧಿಸುತ್ತಿದ್ದರು. ಶೈವ ವೈಷ್ಣವ ಪಂಥಗಳಲ್ಲದೆ, ಜೈನ, ಬೌದ್ಧ ಧರ್ಮಗಳೂ ಅಸ್ತಿತ್ವದಲ್ಲಿದ್ದವು. ವಿಶಾಲ ಮನೋಧರ್ಮ ಹಾಗೂ ಸಹನೆಯ ಈ ಯುಗದ ವೈಶಿಷ್ಟ್ಯವಾಗಿದ್ದಿತು. ದೊರೆಗಳು ವಾಜಪೇಯ, ಅಗ್ನಿಷ್ಟೋಮದಂತಹ ಯಾಗಗಳನ್ನು ಮಾಡಲು ಬ್ರಾಹ್ಮಣರಿಗೆ ನೆರವು ನೀಡುತ್ತಿದ್ದರು. ಸಾಮಾನ್ಯವಾಗಿ ರಥಸಪ್ತಮಿ, ಅಮಾವಾಸ್ಯೆ ಮುಂತಾದ ಪುಣ್ಯ ದಿನಗಳಂದು ಅರಸರು ದಾನ ಮಾಡುವುದು, ಭೂಮಿಯನ್ನು ಅನುಗ್ರಹಿಸುವುದು ಮುಂತಾದ ಧರ್ಮ ಕಾರ್ಯಗಳನ್ನು ಎಸಗುತ್ತಿದ್ದರು. ದೇವಾಲಯಗಳ ಮೂಲಕ ಬಡಬಗ್ಗರಿಗೂ ಅನ್ನದಾನ ನಡೆಯುತ್ತಿದ್ದಿತು. ವಿದ್ಯಾ ಸಂಸ್ಥೆಗಳ ನಿರ್ವಹಣೆಗೂ ದಾನ-ಧರ್ಮಗಳು ಸಹಕಾರಿಯಾಗಿದ್ದವು.

ಜೈನಧರ್ಮದ ಪ್ರಭಾವದಿಂದಾಗಿ ದೇವರ ಸಮ್ಮುಖದಲ್ಲಿ ಪ್ರಾಣಿ ಬಲಿ ನೀಡುವುದು ಅಪರೂಪವಾಗತೊಡಗಿತು. ತೀರ್ಥಯಾತ್ರಾ ಪದ್ಧತಿಯು ಲಾಟ ದೇಶದಲ್ಲಿ ಜನಪ್ರಿಯವಾಗಿತ್ತು, ರಾಷ್ಟ್ರಕೂಟರ ದೊರೆ ದಂತಿದುರ್ಗನು ಹಿರಣ್ಯಗರ್ಭ ಮಹಾದಾನ ಮಾಡಲು ಉಜ್ಜಯನಿಯ ಯಾತ್ರೆಯನ್ನು ಕೈಗೊಂಡನು. ಧಾರ್ಮಿಕ ಸಹಿಷ್ಣುತೆ ಆಗಿನ ಕಾಲದ ಒಂದು ಮುಖ್ಯ ಲಕ್ಷಣ. ಪಶ್ಚಿಮದ ರೇವುಪಟ್ಟಣಗಳಲ್ಲಿ ವಾಣಿಜ್ಯಕ್ಕಾಗಿ ಬರುತ್ತಿದ್ದ ಮುಸ್ಲಿಮರು ಬಹಿರಂಗವಾಗಿ ತಮ್ಮ ಧಾರ್ಮಿಕ ಸಂಪ್ರದಾಯಗಳನ್ನು ಅನುಸರಿಸಬಹುದಾಗಿದ್ದಿತು. ಇಂದಿಗೂ ಲಾಟದಿಂದ ಬಂದಿರುವ ಮುಸ್ಲಿಮರು ತಮ್ಮ ಹೆಸರುಗಳಲ್ಲಿ ಲಾಡಖಾನ್, ಲಾಡಬಾಗವಾನ್ ಇತ್ಯಾದಿ ಸೇರಿಸಿಕೊಂಡಿರುವುದನ್ನು ಕಾಣಬಹುದು.

ಹಿಂದೂ ದೇವಾಲಯಗಳಲ್ಲಿದ್ದಂತೆ ಜೈನ ಮಂದಿರಗಳಲ್ಲೂ ವೈಭವದಿಂದ ಪೂಜೆ, ಪುನಸ್ಕಾರಗಳು ಜರುಗುತ್ತಿದ್ದವು. ಲಾಟ ರಾಜ್ಯದ ಅವನತಿಯ ನಂತರ, ಲಾಡ ಜನಾಂಗಗಳು ಗುಜರಾತಿನಿಂದ ವಲಸೆ ಹೋಗಿ ರಾಜಸ್ಥಾನ, ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ನೆಲೆಸಿದರು. ಅಲ್ಲಿನ ಪರಿಸ್ಥಿತಿಗಳಿಗನುಗುಣವಾಗಿ ಅವರು ತಮ್ಮ ಉಪಪಂಗಡಗಳಿಗೆ ಸಂಬಂಧಿಸಿದಂತೆ ದೇವಾಲಯಗಳನ್ನು ನಿರ್ಮಿಸತೊಡಗಿದರು.

ಮಹಾರಾಷ್ಟ್ರಕ್ಕೆ ವಲಸೆ ಬಂದ ಲಾಡ ಬ್ರಾಹ್ಮಣರು ಧಾರಾಶಿವ, ಲಾತೂರ್,

ಸಾಕರ್ಖೆರ್ಡಾ, ಮಲಕಾಪುರ, ದೇವಳಗಾಂವ್ ಮುಂತಾದೆಡೆ ದೇವಾಲಯಗಳನ್ನು ನಿರ್ಮಿಸತೊಡಗಿದರು. ಅವುಗಳಲ್ಲಿ ಮುಖ್ಯವಾದವು, ಲಾಥೂರಿನ ಕೇಶವರಾಜ ಮಂದಿರ, ಮಲಕಾಪುರದಲ್ಲಿ ಕೇಶವ ಶಿವಾನಿ ಮಂದಿರ, ಸಾಕರ ಖೇರ್ಡಾದ ಫಲಿಸಿದ್ದಮಹಾರಾಜ ಮಠ, ಕೇಶವರಾಜ ಮಂದಿರ, ಅಮೃತೇಶ್ವರ ಮಂದಿರ ಮುಂತಾದವು.

ಕಾರಂಜಾಲಾಡ ನಗರದಲ್ಲಿ ಜೈನಶ್ರಾವಕ ದಿಗಂಬರ ಲಾಡರು ನಿರ್ಮಿಸಿರುವ ಕಾಷ್ಟದ ಚಂದ್ರನಾಥ ಬಸದಿ, ಪದ್ಮಾವತಿ ಬಸದಿ ಹಾಗೂ ನರಸಿಂಹ ಸರಸ್ವತಿಯವರ ಮಠ ಮತ್ತು ಮಂದಿರಗಳು ಅತಿ ಮುಖ್ಯವಾದರು. ಅಮರಾವತಿಯಲ್ಲೂ ಜೈನ ಮಂದಿರಗಳನ್ನು ನಿರ್ಮಿಸಿದ್ದಾರೆ.

ಸುಮಾರು ೨೦೦–೩೦೦ ವರ್ಷಗಳ ಮುಂಚೆ ದೇವುಳಗಾಂವ್ ರಾಜಾ ಎಂಬ ಪ್ರದೇಶದಲ್ಲಿ ಹರಿಸಾ ರಾಮಸಾ ಲಾಡನೆಂಬ ವ್ಯಾಪಾರಿಯಿದ್ದನು. ಈತನು ಬಟ್ಟೆ ವ್ಯಾಪಾರಿಯಾಗಿದ್ದನು. ಒಮ್ಮೆ ಜಮೀನಿನಲ್ಲಿ ಅವನಿಗೆ ಶ್ರೀ ಬಾಲಾಜಿಯ ಮೂರ್ತಿಯೊಂದು ದೊರಕಿತು. ಅದಕ್ಕೆ ದೇವಾಲಯವೊಂದನ್ನು ನಿರ್ಮಿಸಲು ಹರಿಸಾ ಅಂದಿನ ಆಳ್ವಿಕೆದಾರರಾಗಿದ್ದ ಗ್ವಾಲಿಯರ್‌ನ ಸಿಂಧ್ಯಾ, ನಾಗಪುರದ ಭೋಂಸ್ಲೆ ಹಾಗೂ ಇಂದೋರಿನ ಹೋಳ್ಕರ್ ಮತ್ತು ಇತರ ಮರಾಠಾ ನಾಯಕರಿಂದ ಹಣ ಸಂಗ್ರಹಿಸಿ ದೇವುಳಗಾಂವ್ ರಾಜಾ ಎಂಬಲ್ಲಿ ಸುಂದರವಾದ ಭವ್ಯ ಬಾಲಾಜಿ ಮಂದಿರವನ್ನು ನಿರ್ಮಾಣ ಮಾಡಿದನು. ಇದು ಪಟ್ಟಣದ ಮಧ್ಯ ಭಾಗದಲ್ಲಿದ್ದು ಅದ್ಭುತವಾಗಿ ಕಂಗೊಳಿಸುತ್ತಿದೆ. ಇದನ್ನು ಸುಮಾರು ಒಂದೂವರೆ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣ ಮಾಡಲಾಯಿತು. ಆದರೆ, ಅದೇ ದಿನ, ಅದೇ ಘಳಿಗೆಯಲ್ಲಿ ಸಿಂಧಖೇಡದಲ್ಲೂ ಅಂತಹದೇ ಬಾಲಾಜಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ದೇವಾಲಯದ ನಿರ್ಮಾಣ ಕೈಗೊಳ್ಳಲಾಯಿತು. ಪ್ರತಿಷ್ಠಾಪನ ಕಾರ್ಯವನ್ನು ನಡೆಸಿಕೊಡಲು ಕಾಶಿಯಿಂದ ವೇದವಿದ್ವಾಂಸ ಪುರೋಹಿತರನ್ನು ಕರೆಸಲಾಗಿತ್ತು. ಇಷ್ಟಾದರೂ ಹರೀಸಾ ಲಾಡ ಕಟ್ಟಿಸಿದ ಬಾಲಾಜಿಯ ಮಂದಿರದ ಮುಂದೆ ಈ ಸಿಂಧಖೇಡದ ದೇವಾಲಯದ ಅಷ್ಟು ಕಳೆಗಟ್ಟಲಿಲ್ಲ. ಇದನ್ನು ಇತಿಹಾಸಕಾರ ವೈ.ಎಂ. ಕಾಳೆವಕೀಲ ಎಂಬವರು ತಮ್ಮ 'ವಾಡಾಂಚ್ಯ ಇತಿಹಾಸ್' ಎಂಬ ಬುಲ್ಡಾನಾ ಗೆಝೆಟಿಯರ್ (೧೯೩೪ ರಲ್ಲಿ) ನ ೩೩೩ನೇ ಪುಟದಲ್ಲಿ ವಿವರಿಸಿದ್ದಾರೆ.

ಆದರೆ, ಕೆಲ ಕಾಲಾನಂತರ ದೇವಾಲಯದ ಆದಾಯ ಲಕ್ಷಗಟ್ಟಲೆ ಆಗಲು ಆರಂಭವಾಗಿ ಹಣದ ಹೊಳೆಯೇ ಹರಿಯತೊಡಗಿತು. ಇದರಿಂದ ಎಲ್ಲರ ಕಣ್ಣು ಕೆಂಪಗಾಗತೊಡಗಿದವು. ಬುಲ್ಡಾನಾ ಪ್ರಾಂತವನ್ನಾಳುತ್ತಿದ್ದ ಜಾಧವ ವಂಶದವರು ಈ ದೇವಾಲಯ ರಾಜ ಬೊಕ್ಕಸಕ್ಕೆ ಸೇರಬೇಕೆಂದು ನ್ಯಾಯಾಲಯದಲ್ಲಿ ದಾವೆ ಹೂಡಿದರು. ಕಡೆಗೆ ನ್ಯಾಯಾಲಯ, ದೇವಸ್ಥಾನವನ್ನು ರಾಜಮನೆತನದವರಿಗೆ ವಹಿಸಲು ಆಜ್ಞೆ ಮಾಡಿತು. ಕ್ರಮೇಣ ಇದರ ಅಧಿಕಾರ ಮರಾಠರ ರಾಣಿ ಅಹಲ್ಯಾಬಾಯಿಯ ಸಂಬಂಧಿಕರಿಗೆ ಸಿಕ್ಕಿತು. ದೇವಾಲಯದ ಹಣ ಸಿಕ್ಕಸಿಕ್ಕವರು ಲೂಟಿ ಮಾಡತೊಡಗಿದರು. ದೇವಾಲಯದ ಹಣಕ್ಕಾಗಿ ಕೊಲೆಗಳಾಗತೊಡಗಿದವು. ಕಡೆಗೆ ೧೯೦೪ ರ ವೇಳೆಗೆ ಊರಿನ ಹಿರಿಯರು

ಒಂದಾಗಿ ನಿರ್ಣಯ ತೆಗೆದುಕೊಂಡು ಮಂದಿರವನ್ನು ಸಾರ್ವಜನಿಕ ಆಸ್ತಿಯಾಗಿ ಪರಿವರ್ತಿಸಿ ದೇವಾಲಯದ ಅಧಿಕಾರ ವಹಿಸಿಕೊಂಡರು.

ಲಾಟ ದೇಶವು ಧಾರ್ಮಿಕ ವಿಚಾರಗಳಿಗೂ ಪ್ರಸಿದ್ಧವಾಗಿತ್ತು. ಲಾಟ ದೇಶದ ಭಡೋಚ್‌ನಲ್ಲಿ ಗುಜರಾತಿ ಬ್ರಾಹ್ಮಣ ವಂಶದಲ್ಲಿ ಹುಟ್ಟಿದ ಮಹಾಪುರುಷರು ಶ್ರೀ ಚಕ್ರಧರಸ್ವಾಮಿ, ಜಯಂತಕೃಷ್ಣ ದವೆಯವರು ಬರೆದಿರುವ ಕೃತಿ 'ಗುಜರಾತಿ ಸಾಹಿತ್ಯದ ಇತಿಹಾಸ'ದಲ್ಲಿ(೧೯೬೩) ಅವರು ತಿಳಿಸಿರುವಂತೆ –

''ಭರೂಚವನ್ನು ೧೨ ನೇ ಶತಮಾನದಲ್ಲಿ ರಾಜಾ ಮಲ್ಲದೇವನು ಆಳುತ್ತಿದ್ದನು. ಮಲ್ಲದೇವನು ಮರಣ ಹೊಂದುವುದಕ್ಕೆ ಮುಂಚೆ ಸಿಂಹನೆಂಬ ಹೆಸರಿನ ಗಂಡು ಮಗುವನ್ನು ದತ್ತಕ ತೆಗೆದುಕೊಂಡಿದ್ದನು. ರಾಜ್ಯದ ಆಳ್ವಿಕೆಯನ್ನು ತನ್ನ ನೆಚ್ಚಿನ ಮಂತ್ರಿ ವಿಶಾಲದೇವನಿಗೆ ವಹಿಸಿದ್ದನು. ವಿಶಾಲದೇವನು ಗುಜರಾತಿ ಸಾಮವೇದೀ ಲಾಡ ಬ್ರಾಹ್ಮಣ ವಂಶಕ್ಕೆ ಸೇರಿದ್ದವನಾಗಿದ್ದನು. ಕ್ರಿ.ಶ. ೧೧೧೬ರಲ್ಲಿ ವಿಶಾಲದೇವನಿಗೆ ಗಂಡು ಮಗುವೊಂದು ಪ್ರಾಪ್ತವಾಯಿತು. ಆ ಮಗುವಿಗೆ ಹರಿಪಾಲದೇವನೆಂದು ನಾಮಕರಣ ಮಾಡಲಾಯಿತು. ರಾಜ್ಯಕ್ಕೆ ಆಗಮಿಸಿದ ಅಂದಿನ ಪ್ರಸಿದ್ಧ ಸ್ವಾಮಿಗಳಾದ ಶ್ರೀ ಗೋವಿಂದ ಪ್ರಭುಗಳು ಮಗುವಿಗೆ ಚಕ್ರಧರನೆಂದು ಹೆಸರಿಟ್ಟರು. ಆನಂತರ ಹರಿಪಾಲದೇವನು ಚಕ್ರಧರನೆಂಬ ಹೆಸರಿನಿಂದ ಖ್ಯಾತಿ ಹೊಂದಿದ್ದು, ಶ್ರೀ ಚಕ್ರಧರಸ್ವಾಮಿಗಳು ಗುಜರಾತನ್ನು ಬಿಟ್ಟು ಮಹಾರಾಷ್ಟ್ರಕ್ಕೆ ವಲಸೆ ಬಂದರು. ಅವರು ಬ್ರಾಹ್ಮಣ ಧರ್ಮದ ವೈದಿಕ ವಿಚಾರಗಳ ಕಟ್ಟುನಿಟ್ಟಿನ ಜಾತಿ ಪದ್ಧತಿ ಮುಂತಾದವನ್ನು ವಿರೋಧಿಸಿದರು. ತಾವು ಧರಿಸಿದ್ದ ಯಜ್ಞೋಪವೀತವನ್ನು ತ್ಯಜಿಸಿದರು. ಶ್ರೀ ಬಸವೇಶ್ವರರಂತೆ ಜಾತಿರಹಿತ ಸಮಾಜವನ್ನು ರಚಿಸಲು ಮುಂದಾದರು. ಅವರು 'ಮಹಾನುಭಾವ ಪಂಥ' ವೆಂಬ ಹೊಸ ಪಂಥವನ್ನು ಹುಟ್ಟುಹಾಕಿದರು. ಈಗ ಮಹಾರಾಷ್ಟ್ರದಲ್ಲಿ ನೆಲೆಸಿರುವ ಲಾಟ ಬ್ರಾಹ್ಮಣರು ಶ್ರೀ ಚಕ್ರಧರಸ್ವಾಮಿಗಳನ್ನು ಬ್ರಾಹ್ಮಣರೆಂದು ಒಪ್ಪಿಕೊಳ್ಳುತ್ತಾರೆ. ಆದರೆ ಅವರ ಅನುಯಾಯಿಗಳಾದ ಮಹಾನುಭಾವ ಪಂಥದವರನ್ನು ಬ್ರಾಹ್ಮಣ ಕುಲದವರೆಂದು ಒಪ್ಪುವುದಿಲ್ಲ. ಮಹಾರಾಷ್ಟ್ರದ ಪೈಠಣದಲ್ಲಿ ಶ್ರೀಚಕ್ರಧರ ಸ್ವಾಮಿಗಳ ಬೃಂದಾವನವಿದೆ. ಸಾವಿರಾರು ಭಕ್ತರು ಇಲ್ಲಿಗೆ ಯಾತ್ರೆ ಹೋಗುತ್ತಾರೆ.

**ತತ್ವಜ್ಞಾನ ಪ್ರಸಾರ :** ಭಾರತೀಯ ವಿದ್ಯಾ ಭವನ ಪ್ರಕಟಿಸಿರುವ ''**ಭಾರತೀಯರ ಇತಿಹಾಸ ಹಾಗೂ ಸಂಸ್ಕೃತಿ**'' (ಭಾಗ–೩) ಪುಟ ೬೦೧ ಯಲ್ಲಿ ತಿಳಿಸಿರುವಂತೆ – ''ಧರ್ಮ ಗುಪ್ತನೆಂಬುದವನು ಲಾಟದ ಪ್ರಸಿದ್ಧ ತತ್ವಜ್ಞಾನಿಯಾಗಿದ್ದನು. ಈತನು ಲಾಟ ದೇಶದಲ್ಲಿ ಜನ್ಮ ತಾಳಿದನು. ಈತನು ತತ್ವಜ್ಞಾನ ಪ್ರಸಾರಕ್ಕಾಗಿ ಹಾಗೂ ಬೌದ್ಧ ಧರ್ಮದ ವಿಚಾರಗಳನ್ನು ಅಧ್ಯಯನ ಮಾಡಲು ಚೀನಾ ದೇಶಕ್ಕೆ ಪ್ರವಾಸ ಹೋದನು. ಅಲ್ಲಿ ಚೀನಾದ ಬೌದ್ಧ ಧರ್ಮದ ಕೃತಿಗಳನ್ನು ಅನುವಾದ ಮಾಡುವುದಲ್ಲದೇ ತನ್ನ ಪ್ರವಾಸ ಕಥನವೊಂದರಲ್ಲಿ ಅಂದಿನ ಕಾಲದ ಲಾಟ ರಾಜ್ಯದ ಸೂಕ್ಷ್ಮಾತಿಸೂಕ್ಷ್ಮ ಭೌಗೋಳಿಕ

ವಿವರಗಳನ್ನು ಅಲ್ಲದೇ ಅಂದಿನ ಆಡಳಿತ ವ್ಯವಸ್ಥೆಯ ರೂಪರೇಷೆಗಳನ್ನು ವಿವರಿಸಿದ್ದಾನೆ.'' ಆದರೆ ದುರಾದೃಷ್ಟವಶಾತ್ ಆ ಕೃತಿ ಈಗ ಲಭ್ಯವಿಲ್ಲವಾಗಿದೆ.

ಅಂದಿನ ಲಾಟ ದೇಶದಲ್ಲಿ ಅಲ್ಲೇಲ ಭಾವೆ ಬ್ರಹ್ಮನೆಂಬ ಪ್ರಕಾಂಡ ಪಂಡಿತಾಚಾರ್ಯನಿದ್ದನೆಂದೂ ಕೊರಿವ್ ಗ್ರಂಥಗಳಲ್ಲಿ ಅವನ ಬಗ್ಗೆ ಉಲ್ಲೇಖವಿದೆ. (ಕಲಚೂರಿ ನೃಪತಿ ವತ್ಸ್ಯಾಂಜಾಕಾತ' – ಲೇ : ವಾ.ವಿ : ಮಿರಾಸಿ ಪು – ೭೯–೮೦/ ೧೯೫೦, ಮಧ್ಯಪ್ರದೇಶ ಶಾಸನ ಸಾಹಿತ್ಯ ಪರಿಷತ್ ಪ್ರಕಟಣೆ).

ಜಾರ್ಮೆಂಚೆಗೊ (ಗ್ರೀಕರು 'ಧರ್ಮೇಂದ್ರ' ಹೆಸರನ್ನು ಉಚ್ಚರಿಸಿರುವುದು) ಲಾಟ ದೇಶದ ಭಡೋಚ್‌ನ ಒಬ್ಬ ಮಹಾನ್ ತತ್ವಜ್ಞಾನಿ. ಈತನು ಧರ್ಮ ಪ್ರಚಾರಕ್ಕಾಗಿ ಗ್ರೀಸ್ ದೇಶಕ್ಕೆ ಪಯಣಿಸಿದನು. ಭಾರತೀಯ ಧರ್ಮ, ತತ್ವಶಾಸ್ತ್ರಗಳನ್ನು ಜನಪ್ರಿಯಗೊಳಿಸಿ, ಕಡೆಗೆ ಗ್ರೀಸ್ ದೇಶದಲ್ಲೇ ಅವನು ಮರಣ ಹೊಂದಿದನು. (''**ಪುರಾಣೋಮಾ ಗುಜರಾತ್**'' ಪು.೧೧೮.)

## ಲಾಟ ದೇಶದ ಭಾಷೆ ಹಾಗೂ ಸಾಹಿತ್ಯ :

''ಭಾರತದಲ್ಲಿ ಬಳಕೆಯಲ್ಲಿರುವ ಅನೇಕ ಲಿಪಿಗಳಲ್ಲಿ ಅತಿ ಹೆಚ್ಚು ಪ್ರಚಾರದಲ್ಲಿರುವುದು ದೇವನಾಗರಿ ಲಿಪಿ. ದೇವನಾಗರಿ ಲಿಪಿಯು ಲಾಟ ಪ್ರದೇಶದಲ್ಲಿ ಲಾಟ ಬ್ರಾಹ್ಮಣರು ಕಂಡುಹಿಡಿದರು. ದೇವನಾಗರಿಯು ಬ್ರಾಹ್ಮಿ ಅಕ್ಷರಗಳಿಂದ ಉಂಟಾಗಿದೆ.'' 'ಪ್ರಾಚೀನ ಹಾಗೂ ಮಧ್ಯಯುಗದ ಭೌಗೋಳಿಕ ಭಾಷಾ ಕೋಶ' – ನಂದುಲಾಲಡೇ (ಓರಿಯಂತ ಬಂಕ್ಸ್ ರಿ ಪ್ರಿಂಟ್ ಕಾ ದೆಹಲಿ – ೫೫–೧೯೭೧, ಪು ೧೧).

ಲಾಟ ದೇಶಕ್ಕೆ ತನ್ನದೇ ಆದ ಭಾಷೆ 'ಲಾಟಿ' ಅಥವಾ 'ಲಾಡಿ' ಬಳಕೆಯಲ್ಲಿತ್ತು. ಇದು ಹಾಸ್ಯ, ವಿನೋದಗಳಿಗೆ ಪ್ರಖ್ಯಾತಿಯಾದ ಭಾಷೆಯಾಗಿತ್ತು. (ವಾಗ್ಭಟಾಲಂಕಾರದ ಮೇಲೆ ಸಿಂಹದೇವಗಣಿಯ ಟಿಪ್ಪಣಿ.) (ಗುಜರಾತ ಮತ್ತು ಅದರ ಸಾಹಿತ್ಯ – ಕೆ.ಎಂ. ಮುನ್ಷಿ. 'ಲಾಟರೀತಿ' ಎಂಬ ಪ್ರಸಿದ್ಧ ಶೈಲಿ ಜನಪ್ರಿಯವಾಗಿತ್ತು.

'ಲಾಟಾನುಪ್ರಾಸ' ವೆಂದು ಒಂದು ಬಗೆಯ ಅಲಂಕಾರ ಲಾಟಿ ಭಾಷೆಯಲ್ಲಿ ಅದರ ಶಬ್ದಾಲಂಕಾರವೆನಿಸಿತ್ತು. ''ಲಾಟಿಯು ಭಾವಭೋಧಕವಾಗಿ ವ್ಯಕ್ತಿಗಳನ್ನು ಸಂಬೋಧಿಸಲು ಅತ್ಯಂತ ಶ್ರೀಮಂತ ಭಾಷೆ ಎನಿಸಿತ್ತು.'' (ಪ್ರಾಕೃತ ಭಾಷೆಯ ವ್ಯಾಕರಣ – ಡಿ.ಸಿ. ಮುನ್ಷಿ). ''ಲಾಟದ ಸ್ತ್ರೀಯರು ಅವರ ಸೌಂದರ್ಯಕ್ಕಷ್ಟೇ ಅಲ್ಲ ಅವರ ಮನೋಹರ ವಾಕ್ಚಾತುರ್ಯಕ್ಕೂ ಪ್ರಸಿದ್ಧಿಯಾಗಿದ್ದರು.'' ಗುರ್ಜರ ದೇಶದ ವೈಭವ – ಕೆ.ಎಂ. ಮುನ್ಷಿ.

***''ಪಠಂತಿ ಲಟಭಂ ಲಾಟಹ ಪ್ರಾಕೃತಮ್ ಸಂಸ್ಕೃತದ್ವಿಶಾ''*** ಎಂದು, ಪುಟ ೫೩ ರಲ್ಲಿ ಕೆ.ಎಂ. ಮುನ್ಷಿ, ತಮ್ಮ 'ಗುಜರಾತ್ ಮತ್ತು ಅದರ ಸಾಹಿತ್ಯ' ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಪಿ.ಎಲ್.ವೈದ್ಯಾ (ಪುಣೆ ೧೯೩೧) ರವರು ಪ್ರಕಟಿಸಿದ ಅನೇಕ ಕೃತಿಗಳಲ್ಲಿ 'ಜಸಹರಾ

ಚಾರು' ಎನ್ನುವುದು ಅತ್ಯಂತ ಮುಖ್ಯವಾದುದು. ಪ್ರಕಾಶಕರು ಈ ಕೃತಿಯಲ್ಲಿ ತಿಳಿಸಿರುವಂತೆ ಅದರ ಹಸ್ತಲೇಖನವು (Script) ಸೂರತ್‌ನಲ್ಲಿ ಬರೆಯಲ್ಪಟ್ಟು ನಂತರ ಅದರ ಪ್ರತಿಗಳು ದೂರದ ಬೇರಾರ್‌ನ ಕಾರಂಜಾಕ್ಕೆ ತಲುಪಿದವು. ಪ್ರಕಾಶಕರು ಆ ಭಾಷೆಯ ರಚನೆಯ ವಿಶ್ಲೇಷಣೆ ನೀಡುವುದಿಲ್ಲ. ಈ ಹಸ್ತಪ್ರತಿಗಳು 'ಲಾಡಿ' ಅಥವಾ ಚೌರಾಸಿಯಲ್ಲಿ ಅಪಭ್ರಂಶದ ಒಂದು ರೂಪವಾಗಿ ಉಗಮವಾಯಿತು ಎಂದು ತಿಳಿದುಬರುತ್ತದೆ.

ಅದೇ ರೀತಿಯಲ್ಲಿ ಲೇಖಕನು ಕಾರಂಜಾ ಲಾಡದ ಪದ್ಮಾವತಿ ಬಸದಿಯಲ್ಲಿ ಪಡೆದ ಕೃತಿಯ ಅವತರಣಿಕೆ ಪಂಚಮೇರು ಕೃತಿಯ 'ನಂದೀಶ್ವರ ಪೂಜಾ ವಿಧಾನ' ದಲ್ಲಿ ತಿಳಿಸಿರುವಂತೆ **''ಭಗವಂತನ ಗುಣಗಾನ ಮಾಡಬೇಕಾದರೆ, ಅವನಿಗೆ ಪ್ರಿಯವಾದ ಮಧುರ ಚೌರಾಸಿ ಭಾಷೆಯಲ್ಲಿ ಮಾಡು''** ಎಂದು ಚೌರಾಸಿ ಭಾಷೆಯ ಪ್ರಾಮುಖ್ಯತೆಯ ಬಗ್ಗೆ ವರ್ಣಿಸಲಾಗಿದೆ.

ಕ್ರಿ.ಶ. ೧೮೪೯ ರಲ್ಲಿ ರೆವರೆಂಡ್ ಜಿ. ಮೆಕಾಲಿಸ್ಟರ್ ಎಂಬುವವರು ಗುಜರಾತ್, ರಾಜಸ್ಥಾನ ಮತ್ತು ಮಹಾರಾಷ್ಟ್ರದ ಭಾಗಗಳಲ್ಲಿ ಸಮೀಕ್ಷೆ ನಡೆಸಿ ಚೌರಾಸಿ ಭಾಷೆಯ ಒಂದು ನಮೂನೆಯನ್ನೂ ಸಹ ನೀಡಿರುತ್ತಾರೆ. ಅದು ಇಂದಿನ ಚೌರಾಸಿ ಭಾಷೆಗೆ ಬಹುಮಟ್ಟಿಗೆ ಹೋಲುತ್ತದೆ.

'ಲಿಂಗ್ವಿಸ್ಟಿಕ್ ಸರ್ವೆ ಆಫ್ ಇಂಡಿಯಾ' (ಭಾಗ XI)ರ ಜಿ.ಎ. ಗ್ರಿಯರಸನ್ ಪ್ರಕಟಿಸಿರುವ ಈ ಕೃತಿಯಲ್ಲಿ ಲಾಡ ಜನಾಂಗವು ಒಂದು ಅಲೆಮಾರಿ ಜನಾಂಗವಾಗಿದ್ದು ವೀಳ್ಯದೆಲೆ, ಅಡಿಕೆ, ತಂಬಾಕು ಮುಂತಾದುವನ್ನು ಮಾರುವವರು ಎಂದೂ, ಕ್ರಿ.ಶ. ೧೯೧೧ ರಲ್ಲಿ ಮುಂಬಯಿ, ಬರೋಡಾ ಇತ್ಯಾದಿ ಪ್ರದೇಶಗಳಲ್ಲಿ ಅದರ ಒಟ್ಟು ಸಂಖ್ಯೆ : ೩೫,೫೭೨ ಎಂದೂ ನಮೂದಿಸಿರುತ್ತಾರೆ. ಅಲ್ಲದೆ 'ಲಾಡಿ' ಯನ್ನು ಅಲೆಮಾರಿ ಭಾಷೆಯೆಂದು ಪರಿಗ್ರಹಿಸಿ, ಅದರ ಒಂದು ನಮೂನೆಯನ್ನು ಜೊತೆಗೆ ಪ್ರಕಟಿಸಿರುತ್ತಾರೆ. ಮಹಾರಾಷ್ಟ್ರದ ಅಚಲಪುರದ ಭಾಗದಲ್ಲಿ ಮಾತನಾಡುತ್ತಿದ್ದ ಈ ಲಾಡಿ ಭಾಷೆ ಮೆಕಾಲಿಸ್ಟರನು ಕೊಟ್ಟಿರುವ ವಿವರಣೆಗಿಂತ ಭಿನ್ನವಾಗಿದ್ದು ಅದೆ ಮೇಲೆ ರಾಜಸ್ಥಾನಿ ಭಾಷೆಯ ಪ್ರಭಾವ ಹೆಚ್ಚಾಗಿ ಕಾಣುತ್ತಿದೆ. (ಗ್ರಿಯರ್‌ಸನ್ ವಿವರಣೆ).

ಲಾಠ ದೇಶ ಹಾಗೂ ಲಾಡ ಜನಾಂಗದ ಪುರಾತನ ಹಾಗೂ ಪೌರಾಣಿಕ ವಿಷಯಗಳನ್ನು ತಿಳಿಸಬಲ್ಲ ಏಕೈಕ ಗ್ರಂಥವೆಂದರೆ 'ಲಾಟ್ಯಾಯನ' ಎದು ಸಂಸ್ಕೃತಿಯಲ್ಲಿ ಸೂತ್ರ ರೂಪದಲ್ಲಿರುವ ಗ್ರಂಥವಾಗಿದೆ. 'ಲಾಟ್ಯಾಯನ' ಪದದ ಪ್ರಾರಂಭಿಕ ಭಾಗವೇ 'ಲಾಟ್ಯ' – 'ಲಾಠ' ಎಂಬುದರಿಂದ ಆರಂಭವಾಗುತ್ತದೆ. 'ಲಾಟ್ಯಾನುಪ್ರಾಸ' ಎಂಬ ಒಂದು ಅಲಂಕಾರ ಪ್ರಬೇಧ ಲಾಠಿ ಭಾಷೆಯಲ್ಲೂ ಸಂಸ್ಕೃತ ಮತ್ತು ಇತರ ಭಾಷೆಗಳ ಮಧ್ಯೆ ಬಹಳ ಕಾಲ ಬಳಸಲ್ಪಡುತ್ತಿತ್ತು ''ಸಂಭೋಧಿಸುವ ಪ್ರಮಾಣದಲ್ಲಿ ಲಾಠಿ ಭಾಷೆಯಲ್ಲಿ ತೌಲನಿಕ ದೃಷ್ಟಿ ಹೆಚ್ಚಾಗಿತ್ತು'' ಎಂದು ಪ್ರಸಿದ್ಧ ಇತಿಹಾಸಕಾರ ಡಿ.ಸಿ. ಸರ್ಕಾರ್ ತಮ್ಮ ಕೃತಿ 'ಎ ಗ್ರಾಮರ್ ಆಫ್ ಪ್ರಾಕೃತ್ ಲಾಂಗ್ವೇಜ್' ದಲ್ಲಿ ಪ್ರಸ್ತಾಪಿಸಿದ್ದಾರೆ.

''ಲಾಡರು ಉತ್ತಮ ವ್ಯಾಪಾರಿಗಳಾಗಿದ್ದು ಅತ್ಯಂತ ಸತ್ಯನಿಷ್ಠರೂ, ಸ್ವಧರ್ಮನಿಷ್ಠರೂ, ಏಕ ಪತ್ನೀವ್ರತಸ್ಥರು ಆಗಿರುತ್ತಿದ್ದರು. ಲಾಡ ಬ್ರಾಹ್ಮಣರಲ್ಲಿ ತಪಸ್ವಿಗಳಾಗಿದ್ದವರು ಉತ್ತಮ ಆರೋಗ್ಯ ಹಾಗೂ ದೀರ್ಘಾಯುಷಿಗಳೂ ಆಗಿದ್ದರು.'' ಹೀಗೆಂದು ಮಾರ್ಕೋಪೋಲೋ ಎಂಬ ಇಟಲಿಯ ಪ್ರಸಿದ್ಧ ಪ್ರವಾಸಿ ತನ್ನ ಪ್ರವಾಸ ವೃತ್ತಾಂತದಲ್ಲಿ ತಿಳಿಸಿದ್ದಾನೆ. ಇದನ್ನು ಇತಿಹಾಸಕಾರ ಸಿ.ವಿ. ವೈದ್ಯರವರು ತಮ್ಮ ಕೃತಿ ***''ಮಧ್ಯಯುಗೀನ್ ಭಾರತ್''***ದಲ್ಲಿ ಪ್ರಸ್ತಾಪಿಸಿದ್ದಾರೆ.

ರಾಜಾ ಭೋಜನ ಆಸ್ಥಾನದಲ್ಲಿದ್ದ ಸುಪ್ರಸಿದ್ಧ ಕವಿ ರಾಜಶೇಖರ ಹಾಗೂ ಸೊದ್ದಾಲ ಇಬ್ಬರು ಲಾಠ ದೇಶದ ಅತ್ಯಂತ ಪ್ರಸಿದ್ಧ ಕವಿಗಳಾಗಿದ್ದರು. ಕವಿ ರಾಜಶೇಖರನ ಪ್ರಕಾರ ***''ಲಾಠ ದೇಶವು ಪೃಥ್ವಿಗೆ ಕಿರೀಟಪ್ರಾಯವೆನಿಸಿತ್ತು.''***

ವಾಗ್ಭಟಾಲಂಕಾರದ ಬಗ್ಗೆ ಸಿಂಹದೇವಗಣಿ ರಚಿಸಿರುವ ಭಾಷ್ಯದಲ್ಲಿ ವಿವರಿಸಿರುವಂತೆ – ***''ಲಾಠಿ ಹಾಸ್ಯರಸೇ ಪ್ರಯೋಗ ನಿಪುಣ್ಯೆ ರೀತಿಃ ಪ್ರಭಾಧೇ ಕೃತಾ''***, ಎಂದರೆ ಲಾಠದೇಶದಲ್ಲಿ ಲಾಠಿ ಎಂಬ ತನ್ನದೇ ಭಾಷೆ ಇತ್ತು, ವಿನೋದವು ಲಾಠೀ ಭಾಷೆಯ ವೈಶಿಷ್ಟ್ಯವಾಗಿತ್ತು ಎಂದರ್ಥ.

ಆಧುನಿಕ ಗುಜರಾತಿನಲ್ಲಿ 'ಕಲಾಪಿ' ಕಾವ್ಯನಾಮದ ಒಬ್ಬ ನಿಸರ್ಗವಾದಿ ಕವಿ ತನ್ನ ಕವಿತೆಗಳಿಮದ ಹೆಚ್ಚು ಪ್ರಸಿದ್ಧಿಗೆ ಬಂದನು ಸೌರಾಷ್ಟ್ರದಲ್ಲಿ 'ಲಾಠಿ' ಹೆಸರಿನ ಸಂಸ್ಥಾನಕ್ಕೆ ಅವನು ಠಾಕೂರನಾಗಿದ್ದನು.

**ಈ ಕೆಳಕಂಡ ಎರಡು ಪ್ರಸಿದ್ಧ ಪುರಾಣ, ಕಾವ್ಯಗಳಲ್ಲಿ ವರ್ಣಿಸಿರುವಂತೆ :**

(i) ಬಾಲಾರಾಮಾಯಣ ಛಂದ – ೧ – (೪೮–೪೯)

ಗದ್ಯಂ ಚೂರ್ಣಪದಂ ಪದಂ ರತಿಪತೇಸ್ತಕ್ ಪ್ರಾಕೃತಂ ಯದ್ವಚ
ಸ್ಥಾಂ ಲ್ಲಾಠಾಂ ಲಲಿತಾಡಿನ ಪಶ್ಯ ನುದತಿ ದೃಷ್ಟೇರ್ನಿಮೇಶವ್ರತಂ ॥ ೪೮ ॥
ಕಿಂಚ ಲಕ್ಷ್ಮೀಕರ್ತೃ ಪ್ರವೃತ್ತೋಪಿ ಲಾಠೀಲಡಹವೀಕ್ಷ್ಶೈ
ಲಕ್ಷ್ಮೀಭವತಿ ಕಂದರ್ಪಃ ಸ್ವೇಶಾಮೆರಾತ್ರ ಪತ್ರಿಗಾಮ್ ॥ ೪೯ ॥

(ii) ೪ಂನೇ ರುದ್ರತ ಕಾವ್ಯಾಲಂಕಾರ – II ೪.೫ :

ಪಾಂಚಾಲೀ ಲಾಠೀಯ ಗೌಡೀಯ ಚೇತಿ ನಾಮತೋಭಿಹಿತಾಃ
ಲಘು ಮಧ್ಯಾಯತ ವಿರಚನ ಸಮಾಸಭೇದಾದಿಮಾಸ್ತತ್ರ ॥ ೪ ॥
ದ್ವಿತ್ರಿಪದಾ ಪಾಂಚಾಲೀ ಲಾಠೀಯ ಪಂಚಸಪ್ತವಾಯಾವತ್ ।
ಶಬ್ದಾಃ ಸಮಾಸವಂತೊ ಭವತಿ ಯಥಾಶಕ್ತಿಗೌಡೀಯಾ ॥ ೫ ॥

ಈ ಪದ್ಯಗಳ ಸಾರಾಂಶವೆಂದರೆ ಲಾಠ ಸಾಹಿತ್ಯದಲ್ಲಿ 'ಲಾಠೀ ರೀತಿ' ಎಂಬ ವಿಶೇಷ ಶೈಲಿಯು ಪ್ರಸಿದ್ಧವಾಗಿತ್ತು, ಆದ್ದರಿಂದಲೇ 'ಲಾಠಾಂ ಲಲಿತಾಡಿನ ಪಶ್ಯಮದತಿ'

ಎಂತಲೂ....'' ಲಾಠೀಯ..... ನಾಮತೋಭಿಹಿತಾಃ ಲಘು ಮಧ್ಯಾಯತ ವಿರಚನ ಸಮಾಸಭೇದಾದಿ ಮಾಸ್ತತ್ರ'', ಎಂದೂ ವರ್ಣಿಸಲಾಗಿದೆ.

**ಲಾಟ ದೇಶದ ಚತುರ್ವರ್ಣ ವ್ಯವಸ್ಥೆ:**

ಲಾಟ ದೇಶದಲ್ಲಿ ಚತುರ್ವರ್ಣ ಪದ್ಧತಿಯಿತ್ತು, ಲಾಟ ರಾಜ್ಯದಲ್ಲಿ ಜನಿಸಿದವರೆಲ್ಲ 'ಲಾಡ' ರೆಂದು ಕರೆಯಲಾಗಿದೆ. ಹಾಗಾಗಿ 'ಲಾಡ' ನೆಂದರೆ ಒಂದು ನಿರ್ದಿಷ್ಟ ಜಾತಿಯವನಲ್ಲ, ಲಾಟ ದೇಶಕ್ಕೆ ಸೇರಿದವರು 'ಲಾಡ'. ಪ್ರಾರಂಭದಲ್ಲಿ ಬ್ರಾಹ್ಮಣರಿಗೆ ಹೆಚ್ಚಿನ ಪ್ರಾಶಸ್ತ್ಯವಿತ್ತು, ನಂತರದ ಸ್ಥಾನ ರಾಷ್ಟ್ರವನ್ನಾಳುವ ಕ್ಷತ್ರಿಯರದು. ತಮ್ಮ ಮೂಲವನ್ನು ಸೂರ್ಯವಂಶ, ಚಂದ್ರವಂಶ ಎನ್ನುವ ಪೌರಾಣಿಕ ಮೂಲದಿಂದ ಗುರ್ತಿಸಿಕೊಳ್ಳತೊಡಗಿದರು. ವ್ಯಾಪಾರ, ವಾಣಿಜ್ಯ ಮತ್ತು ಕೃಷಿಯಲ್ಲಿ ತೊಡಗಿದ್ದ ವೈಶ್ಯ ವರ್ಗ ಸಾಮಾಜಿಕ ಶ್ರೇಣಿಯಲ್ಲಿ ಮೂರನೇ ಸ್ಥಾನವನ್ನು ಪಡೆದಿದ್ದರೂ ರಾಜ್ಯದ ಆರ್ಥಿಕತೆಯ ದೃಷ್ಟಿಯಿಂದ ಪ್ರಮುಖ ಸ್ಥಾನವನ್ನು ಹೊಂದಿತ್ತು, ವ್ಯಾಪಾರ, ವಾಣಿಜ್ಯ, ರಾಜ್ಯ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುತ್ತಿದ್ದು ಅರಸರ ಪ್ರೋತ್ಸಾಹ ಪಡೆಯಲು ಕಾರಣವಾಯಿತು. ವರ್ಣ ವ್ಯವಸ್ಥೆಯಲ್ಲಿ ಕೊನೆಯವರಾದ ಶೂದ್ರರು ದುಡಿಯುವ ಶ್ರಮ ಜೀವಿಗಳಾಗಿದ್ದರು.

ಕ್ರಮೇಣ ವೃತ್ತಿ ಆಧಾರದ ಮೇಲೆ ಪಂಗಡ, ಉಪ ಪಂಗಡಗಳು ರಚನೆಗೊಂಡವು. ಬಟ್ಟೆ ಒಗೆಯುವವರು, ನೇಕಾರರು, ಕ್ಷೌರಿಕರು, ನೇಕಾರರು, ಬಳೆಗಾರರು, ಬೆಸ್ತರು, ತೈಲಿಗರು, ಚಿಪ್ಪಿಗರು, ತಂಬುಲಿಗರು, ಶಿಲ್ಪಿಗಳು, ಕೆತ್ತನೆಕಾರರು, ಚಿತ್ರಕಾರರು, ಕಮ್ಮಾರರು, ಬಡಗಿಗಳು, ಅಕ್ಕಸಾಲಿಗರು, ಕಂಚುಗಾರರು, ಬುಡಕಟ್ಟು ಜನಾಂಗಗಳಾದ ಬೇಡರು, ಮಲೆಪರು, ಕುರುಬರು, ಅಸ್ಪೃಶ್ಯರು ಇರುತ್ತಿದ್ದರು.

ಜಾತಿ ವ್ಯವಸ್ಥೆಯು ಕ್ರಮೇಣ ವ್ಯಾಪಕವಾಯಿತು. ಜಾತಿ ವ್ಯವಸ್ಥೆಯ ಸಂಕೀರ್ಣತೆಯನ್ನು ಸರಳಗೊಳಿಸುವಲ್ಲಿ ಚಳುವಳಿಗಳು ಸೋತವು. ಲಾಟ ದೇಶಕ್ಕೆ ಮಹಾವೀರರ ಲಾಟದೇಶದ ಪರ್ಯಟನ ಸಹಿತ ಏನೂ ಕೆಲಸ ಮಾಡಲಿಲ್ಲ. ಸ್ವತಃ ಲಾಟ ದೇಶದಲ್ಲಿ ಜನಿಸಿದ ಶ್ರೀ ಚಕ್ರಧರ ಸ್ವಾಮಿಗಳು ಬುದ್ಧ, ಬಸವಣ್ಣರಂತೆ ಜಾತಿರಹಿತ ಸಮಾಜ ವ್ಯವಸ್ಥೆ ಜಾರಿಗೆ ತರಲು ಪ್ರಯತ್ನಿಸಿ, ತನ್ನ ಜನಿವಾರವನ್ನು ಕಿತ್ತೆಸೆದು ವರ್ಗರಹಿತ ಸಮಾಜ ನಿರ್ಮಾಣಕ್ಕೆ ಕಂಕಣಬದ್ಧರಾಗಿದ್ದರೂ ಗುಜರಾತಿನಲ್ಲಿ ಅದಕ್ಕೆ ಮನ್ನಣೆ ಸಿಗದೆ ಕಡೆಗೆ ಮಹಾರಾಷ್ಟ್ರಕ್ಕೆ ವಲಸೆ ಹೋಗಿ ಅಲ್ಲಿ ***'ಮಹಾನುಬಾವ ಪಂಥ'*** ವೆಂಬ ಹೊಸ ಪಂಥ ನಿರ್ಮಾಣ ಮಾಡಬೇಕಾಯಿತು.

ಎಲ್ಲಾ ಹಿಂದೂ ಪಂಗಡಗಳು, ಉಪ ಜಾತಿಗಳು ಒಟ್ಟಿಗೆ ಸಾಮರಸ್ಯದಿಂದ ಬದುಕುವುದು ಅನಿವಾರ್ಯವಾಗತ್ತು, ಪರಂಪರಾನುಗತವಾಗಿ ಬಂದ ಅನೇಕ ರೂಢಿ, ಕಟ್ಟುಪಾಡುಗಳು ಹಾಗೂ ಆಚಾರಗಳನ್ನು ಪಾಲಿಸಿಕೊಂಡು ಬದುಕುತ್ತಿದ್ದರು. ಹಿಂದೂಗಳು, ತಾವೆಲ್ಲ ನಂಬುವ ದೈವ ಒಂದೇ. ಒಂದು ವ್ಯಕ್ತಿ ಹಾಗೂ ಸಾಮಾಜಿಕ

ನಂಬಿಕೆಗಳಿಗನುಸಾರವಾಗಿ ತಮ್ಮ ದೈವಗಳನ್ನು ನಂಬಿ ಪೂಜಿಸುತ್ತಾ ಬಂದಿದ್ದಾರೆ. ಹಿಂದೂ ಪದ್ಧತಿಗಳಿಗನುಸಾರವಾಗಿ ಅನೇಕ ಧಾರ್ಮಿಕ ಆಚರಣೆಗಳನ್ನು ಅನುಸರಿಸುತ್ತಾ ಅವುಗಳನ್ನು 'ಸಂಸ್ಕಾರ' ಗಳೆಂದು ಕರೆದಿದ್ದಾರೆ. ಈ ಸಂಸ್ಕಾರಗಳು ಶಾಸ್ತ್ರ ರೂಪದಲ್ಲಿದ್ದು ಶುದ್ಧಿಕರಣ ವಿಧಿಗಳನ್ನು ಪುರೋಹಿತರ ಸಮ್ಮುಖದಲ್ಲಿ ಆಚರಿಸುವುದು ಅವಶ್ಯಕ. ಈ ಸಂಸ್ಕಾರಗಳ ಒಟ್ಟು ಸಂಖ್ಯೆಯ ಬಗ್ಗೆ ಸ್ಮೃತಿಗಳಲ್ಲಿ ಒಮ್ಮತವಿಲ್ಲ. ಕೆಲವು ಸ್ಮೃತಿಕಾರರ ಪ್ರಕಾರ ಒಟ್ಟು ಸಂಸ್ಕಾರಗಳಲ್ಲಿ ೧೬ ಕಡ್ಡಾಯವಾಗಿ ಪಾಲಿಸಬೇಕಾಗಿದ್ದ ೨೪ ಸಂಸ್ಕಾರಗಳನ್ನು ಪಾಲಿಸುವುದು ಅವರ ಇಷ್ಟಕ್ಕೆ ಬಿಟ್ಟದ್ದು. ಸಂಸ್ಕೃತದಲ್ಲಿ ಇವನ್ನು (೧) ನಿತ್ಯ ಹಾಗೂ (೨) ನೈಮಿತ್ತಿಕಗಳೆಂದು ವರ್ಗೀಕರಿಸಲಾಗಿದೆ. ಆ ಹದಿನಾರು ಸಂಸ್ಕಾರಗಳಲ್ಲಿ ಇತ್ತೀಚೆಗೆ ಅವುಗಳನ್ನು ಆರಕ್ಕೆ ಇಳಿಸಲಾಗಿದೆ. ಈ ಸಂಸ್ಕಾರಗಳನ್ನು ಮಗು ಹುಟ್ಟಿದಾಗ, ಮುಂಜಿ, ಋತುಮತಿಯಾದಾಗ, ವಿವಾಹ, ಗರ್ಭ ಧರಿಸಿದಾಗ ಹಾಗೂ ಸಾವಿನ ಸಂದರ್ಭಗಳಲ್ಲಿ ಮಾಡುವ ಆಚರಣೆಗಳಾಗಿವೆ.

ಮುಂಜಿಯು ಬ್ರಾಹ್ಮಣ ಅಥವಾ ದ್ವಿಜರಲ್ಲಿ ಅತಿ ಸಾಮಾನ್ಯ ಆಚರಣೆ. ಅಲ್ಲದೆ ಕ್ಷತ್ರಿಯರು ವೈಶ್ಯರಲ್ಲೂ ಯಜ್ಞೋಪವೀತ ಧಾರಣೆಯ ಸಂಸ್ಕಾರ ಆಚರಣೆಯಲ್ಲಿದೆ. ಗರ್ಭದಾನವು ಮದುಮಗಳು ಗರ್ಭಧರಿಸುವ ಸಾಮರ್ಥ್ಯ ಹೊಂದಿರುವುದನ್ನು ಪುಷ್ಟೀಕರಿಸುವ ಕ್ರಿಯೆ. ಹಿಂದಿನ ಕಾಲದಲ್ಲಿ ಬಾಲ್ಯ ವಿವಾಹವೇ ಹೆಚ್ಚಾಗಿ ಆಚರಣೆಯಲ್ಲಿದ್ದುದರಿಂದ ಆಗ ಗರ್ಭದಾನ ಸಂಸ್ಕಾರಕ್ಕೆ ಹೆಚ್ಚಿನ ವೈಭವೀಕರಣ ಜರುಗುತ್ತಿತ್ತು. ಇದೀಗ ಅದೆಲ್ಲಾ ಕಡಿಮೆಯಾಗಿದೆ.

ಹಿಂದೂ ಧರ್ಮದ ಪ್ರತಿಯೊಬ್ಬ ವ್ಯಕ್ತಿಯ ಜೀವನದ ಮಹತ್ವ ಹಾಗೂ ದೀರ್ಘ ಕಾಲ ಪರಿಣಾಮ ಬೀರುವ ಸಂಸ್ಕಾರವೆಂದರೆ 'ವಿವಾಹ'. ಇತ್ತೀಚಿನವರೆಗೂ ವಿವಾಹವನ್ನು ಒಂದು ಅತಿ ವೈಭವಯುತ ಆಚರಣೆಯನ್ನಾಗಿ ಪಾಲಿಸಲಾಗುತ್ತಿದ್ದು. ಲಾಟಕುಲಜರಲ್ಲಿ ೧೦–೧೨ ದಿನಗಳ ವಿವಾಹ ಆಚರಣೆಯ ಸಂಪ್ರದಾಯವಿತ್ತು. ಆದರೆ, ಆಧುನಿಕ ದಿನಗಳಲ್ಲಿ ಈ ಆಚರಣೆಯನ್ನು ಸರಳಗೊಳಿಸಿ ೧–೨ ದಿನಗಳ ಆಚರಣೆಗೆ ಸೀಮಿತಗೊಳಿಸಲಾಗಿದೆ. ಇವುಗಳಲ್ಲಿ ಸಪ್ತಪದಿ, ಕನ್ಯಾದಾನ, ವಿವಾಹ – ಹೋಮ – ಇವುಗಳನ್ನು ಮೂಲ ಸ್ವರೂಪದಲ್ಲೇ ಉಳಿಸಿಕೊಳ್ಳಲಾಗಿದೆ. ಹೆಚ್ಚಿನ ಹಿಂದೂ ಧರ್ಮೀಯರು ಇವನ್ನು ಪಾಲನೆ ಮಾಡುತ್ತಿದ್ದರು.

**ಅವಿಭಾಜಿತ ಕುಟುಂಬ ವ್ಯವಸ್ಥೆ :** ಅವಿಭಾಜಿತ ಕುಟುಂಬ ವ್ಯವಸ್ಥೆ ಪ್ರಾಚೀನ ಲಾಟ ದೇಶದಲ್ಲಿ ಪ್ರಚಲಿತವಾಗಿದ್ದ ಪದ್ಧತಿಯಾಗಿತ್ತು. ತಾತ, ಅಜ್ಜಿ ಅಣ್ಣ – ತಮ್ಮಂದಿರು, ದಾಯಾದಿಗಳು, ಅತ್ತಿಗೆ–ಮೈದುನರು, ಚಿಕ್ಕಪ್ಪಂದಿರು ಎಲ್ಲಾ ಒಟ್ಟಾಗಿ ೧೦–೧೨ ಕೋಣೆಗಳ ವಿಶಾಲ ಮನೆಗಳಲ್ಲಿ ವಾಸ ಮಾಡುವುದು ಸಾಮಾನ್ಯವಾಗಿತ್ತು. ತಂದೆ ಅಥವಾ ತಾತ ಮನೆಯ ಯಜಮಾನನಾಗಿರುತ್ತಿದ್ದನು. ಹಿರಿಯರಿಂದ ಬಂದ ಆಸ್ತಿಪಾಸ್ತಿಯನ್ನು ಮಕ್ಕಳಿಗೆ, ಮೊಮ್ಮಕ್ಕಳಿಗೆ ಹಂಚುತ್ತಿದ್ದು. ಸಾಮಾನ್ಯವಾಗಿ ಗಂಡು ಮಕ್ಕಳಿಗೆ ಆಸ್ತಿಯ ಹಕ್ಕು

ಇರುತ್ತಿತ್ತು. ಇದೀಗ ಹಿಂದೂ ಕಾಯಿದೆಯ ಪ್ರಕಾರ ಹೆಣ್ಣು ಮಕ್ಕಳಿಗೂ ಆಸ್ತಿಯ ಹಕ್ಕು ದೊರೆತಿದೆ. ಮಕ್ಕಳಿಲ್ಲದವರು ಮಗುವನ್ನು 'ದತ್ತು' ತೆಗೆದುಕೊಳ್ಳುತ್ತಾರೆ. ತಮ್ಮ ಜೀವನದ ಕೊನೆಗಾಲಕ್ಕೆ ಆಸರೆಯಾಗಲು ಹಾಗೂ ಪಾಲಕರು ಸತ್ತಾಗ ಅವರಿಗೆ ಸದ್ಗತಿ ದೊರೆಯಲು ಶ್ರಾದ್ಧ ಕರ್ಮಾದಿಗಳನ್ನು ಮಾಡಲು ದತ್ತು ಮಗ ಅಗತ್ಯವಾಗಿರುತ್ತಿದ್ದನು.

**ವಿವಾಹ ಆಚರಣೆಗಳು :**

ಲಾಟ ದೇಶದಲ್ಲಿ ಗುಜರಾತಿ ಪದ್ಧತಿಯ ವಿವಾಹ ಕಾರ್ಯಗಳು ಸಾಮಾನ್ಯ ಆದಾಗ್ಯೂ ಅಂದಿನ ಮಹಾರಾಷ್ಟ್ರದ ಭಾಗಗಳೂ ಲಾಟದೇಶದ ವ್ಯಾಪ್ತಿಯಲ್ಲಿದ್ದುದರಿಂದ ಕೆಲವು ಮರಾಠಾ ವಿವಾಹ ಪದ್ಧತಿಗಳೂ ಬೆರೆತವು. ಗುಜರಾತ್, ರಾಜಾಸ್ಥಾನ ಹಾಗೂ ಮಹಾರಾಷ್ಟ್ರಗಳಿಗೆ ಸಾಮಾನ್ಯ ಪದ್ಧತಿಯೆನಿಸಿದ್ದ, ವರನು ಕುದುರೆಯೇರಿ ಬರುವ ಪದ್ಧತಿ ಇಂದಿಗೂ ಅನೂಚಾನವಾಗಿ ನಡೆದು ಬಂದಿದೆ. ಘಳಿಗೆ ಬಟ್ಟಲ ಶಾಸ್ತ್ರ ಲಗ್ನ ನಿಷ್ಕರ್ಶೆಗೆ ಅತಿ ಅಗತ್ಯವಾಗಿದೆ.

ವಿವಾಹವು ಹಿಂದೂ ಧರ್ಮದಲ್ಲಿ ಅತಿ ಪವಿತ್ರವಾದ ಪ್ರಮುಖ ಧಾರ್ಮಿಕ ಕ್ರಿಯೆಯೆನಿಸಿದೆ. ಮಾನವ ಜೀವನದ ಸಾರ್ಥಕತೆ ಮುಂದಿನ ಪೀಳಿಗೆಯನ್ನು ಬೆಳೆದು ಸಂರಕ್ಷಿಸಲು ವೈವಾಹಿಕ ಜೀವನ ಅತ್ಯಗತ್ಯ. ಹಿಂದೂ ಧರ್ಮದ ಪ್ರಕಾರ ವಿವಾಹವು ಕೇವಲ ಒಂದು ಒಪ್ಪಂದವಲ್ಲ. ಅದು ಅತಿ ಮುಖ್ಯವಾದ ಧಾರ್ಮಿಕ ಸಂಸ್ಕಾರವಾಗಿದ್ದು ಒಂದು ಮುರಿಯದ ಬಂಧನವಾಗಿದೆ. ಒಂದೇ ಜಾತಿಯ, ಪಂಗಡದ ಸ್ತ್ರೀ–ಪುರುಷರು ವಿವಾಹವಾಗಲು ಸಾಮಾಜಿಕ ಸಮ್ಮತಿ ಇದೆ. ಆದರೆ, ವಿವಾಹವು ಒಂದೇ ಗೋತ್ರದವರ ಮಧ್ಯೆ ನಡೆಯುವಂತಿಲ್ಲ. ಶಾಸ್ತ್ರ ಸಮ್ಮತವಾಗಿ ಗಂಡು ಹೆಣ್ಣಿನ ಗ್ರಹ, ನಕ್ಷತ್ರಗಳ ಹಾಗೂ ಜಾತಕಗಳ ಹೊಂದಾಣಿಕೆಯಾಗಬೇಕು. ವರ್ಷದ ಕೆಲವು ಮಾಸಗಳು ಮಾತ್ರ ವಿವಾಹಕ್ಕೆ ಯೋಗ್ಯವೆನಿಸಿದೆ. ಆ ದಿನಗಳಲ್ಲಿ ಶುಭ ಘಳಿಗೆ ನಿಗದಿಪಡಿಸಿ ಆ ಮುಹೂರ್ತದಲ್ಲೇ ವಿವಾಹ ನಡೆಸುವುದು ಸಾಮಾನ್ಯ. ಆಧುನಿಕ ಶಿಕ್ಷಣ ಪದ್ಧತಿ, ವೈಜ್ಞಾನಿಕ ಚಿಂತನೆ, ಸಾಮಾಜಿಕ ಪರಿವರ್ತನೆಗಳು ವಿವಾಹವಿಧಿ, ಕ್ರಮ, ಕಟ್ಟುಪಾಡುಗಳನ್ನು ಉಲ್ಲಂಘಿಸಿ, ಪ್ರೇಮ ವಿವಾಹ, ಅಂತರ್ಜಾತಿಯ ವಿವಾಹನ, ವಿವಾಹ ನೋಂದಣಿ ಮುಂತಾದ ಆಧುನಿಕ ಪದ್ಧತಿಗಳು ಬೆಳೆದು ಬರುತ್ತಿವೆ. ಶಿಶುವಿವಾಹ ಪದ್ಧತಿ ರದ್ದಾಗಿದೆ. ಇತರೆ ಜಾತಿ, ಧರ್ಮಗಳ ನಡುವೆ ವಿವಾಹಗಳು ಈಗ ರೋಚಕ ಸುದ್ದಿಗಳೆನಿಸುವುದಿಲ್ಲ. ಆದರೆ, ಅಂತಹ ವಿವಾಹಗಳು ಇನ್ನೂ ಅಷ್ಟು ಜನಪ್ರಿಯವಾಗಿಲ್ಲ. ನಗರ ಪ್ರದೇಶಗಳಲ್ಲಂತೂ ಯಾರೂ ಅದನ್ನು ಅಷ್ಟಾಗಿ ಹಚ್ಚಿಕೊಳ್ಳುವುದಿಲ್ಲ.

ಕೈಗಾರಿಕೀಕರಣ ಹಾಗೂ ನಗರ ಪ್ರದೇಶಗಳ ಒತ್ತಡ ಜೀವನದಿಂದ ವಿವಾಹ ಸಂಪ್ರದಾಯದ ಅನೇಕ ಅನೂಚಾನ ಪದ್ಧತಿಗಳನ್ನು ಕಡಿತಗೊಳಿಸಲಾಗಿದೆ. ವಿವಾಹಪೂರ್ವ ಆರತಕ್ಷತೆ, ನಂತರ ಲಗ್ನ, ಇವು ಜನಪ್ರಿಯವಾಗುತ್ತಿವೆ. ಲಾಡ ಜನಾಂಗದ ವಿವಾಹ ಸಂಪ್ರದಾಯಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಒಂದು ನಿರ್ದಿಷ್ಟ ವ್ಯವಸ್ಥೆಯ

ವಿವಾಹ ಪದ್ಧತಿಯಿದ್ದರೆ, ಇತರ ಪಂಗಡಗಳಲ್ಲಿ ಬೇರೆಯದೇ ರೀತಿಯ ಶಾಸ್ತ್ರ ಸಂಪ್ರದಾಯಗಳಿವೆ. ಆದರೆ, ಆಚಾರಗಳಲ್ಲಿ ಒಂದು ಮಹತ್ವದ ವಿಚಾರವೆಂದರೆ, ಮೊದಲ ಗುಂಪಿನ ಜನಾಂಗದವರು ವೈದೀಕ ಮಂತ್ರಗಳ ಪದ್ಧತಿಯಂತೆ ಆಚರಿಸಿದರೆ, ಎರಡನೇ ಗುಂಪು ಪುರಾಣ ಸಮ್ಮತ ಮಂತ್ರಗಳಿಗನುಗುಣವಾಗಿ ನಡೆಯುತ್ತದೆ.

ಎಲ್ಲ ವಿವಾಹ ಸಂಪ್ರದಾಯಗಳನ್ನು ಐದು ಸರಳ ಪದ್ಧತಿಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ –

(i) ಸಾಲಂಕೃತ ಕನ್ಯಾದಾನ, (ii) ಪದ್ಧತಿ ಪ್ರಕಾರದ ಕನ್ಯಾದಾನ, (iii) ವರ ಪಕ್ಷ – ವಧುಪಕ್ಷ ವಿವಾಹ ಪದ್ಧತಿ, (iv) ಹುಂದಾ ಪದ್ಧತಿ, (v) ವಧು ದಕ್ಷಿಣೆ ಅಥವಾ ದೇಜಾ ವ್ಯವಸ್ಥೆ.

(i) **ಸಾಲಂಕೃತ ಕನ್ಯಾದಾನ** ಪದ್ಧತಿಯಲ್ಲಿ ವಧುವಿನ ತಂದೆ ವಧುವಿಗೆ ಒಡವೆ ವಸ್ತ್ರಗಳಿಂದ ಸಿಂಗರಿಸಿ, ಮದುವೆಯ ಎಲ್ಲಾ ಖರ್ಚು ವೆಚ್ಚಗಳನ್ನು ನಿಬಾಯಿಸಿ ವಿವಾಹ ಮಾಡಿಕೊಡುತ್ತಾನೆ. ಇಷ್ಟಲ್ಲದೆ ವರನ ಕಡೆಯವರ ಪ್ರಯಾಣದ ವೆಚ್ಚದೊಂದಿಗೆ ಎಲ್ಲಾ ವೆಚ್ಚಗಳನ್ನು ಭರಿಸುತ್ತಾನೆ.

(ii) **ಪದ್ಧತಿ ಪ್ರಕಾರದ ಕನ್ಯಾದನ** ಪದ್ಧತಿಯಲ್ಲಿ ವಿವಾಹದ ವೆಚ್ಚಗಳು ಬರೀ ವಧುವಿನ ಕಡೆಯ ಖರ್ಚುಗಳನ್ನು ಮಾತ್ರ ಭರಿಸಬೇಕಾಗುತ್ತದೆ.

(iii) **ವರ ಪಕ್ಷ – ವಧುಪಕ್ಷ ವಿವಾಹ** ಪದ್ಧತಿಯಲ್ಲಿ ವಧು ಮತ್ತು ವರನ ಪಕ್ಷದವರಿಬ್ಬರೂ ತಮ್ಮ ತಮ್ಮ ವೆಚ್ಚವನ್ನು ಭರಿಸುತ್ತಾರೆ. ಕಡೆಗೆ ಎರಡೂ ಕಡೆಯವರು ಪರಸ್ಪರ ಭೋಜನ ಕೂಟಗಳನ್ನು ವ್ಯವಸ್ಥೆ ಮಾಡಿ ಉಡುಗೊರೆಗಳ ವಿನಿಮಯ ಮಾಡಿಕೊಳ್ಳುತ್ತಾರೆ.

(iv) **ಹುಂದಾ ಪದ್ಧತಿಯ ವಿವಾಹ**ದಲ್ಲಿ ವರನಿಗೆ ಅಪಾರವಾದ ವರದಕ್ಷಿಣೆ ನೀಡಿ ಹೆಚ್ಚು ಕಡಿಮೆ ಅವನ್ನು ಕೊಂಡುಕೊಂಡಂತೆ ವೆಚ್ಚ ಮಾಡಿ ವಿವಾಹ ಮಾಡಲಾಗುತ್ತದೆ.

(v) **ದೇಜಾ ವ್ಯವಸ್ಥೆ** ಅಥವಾ ವಧು ದಕ್ಷಿಣೆ ಪದ್ಧತಿಯಲ್ಲಿ ವರನ ಕಡೆಯವರು ಒಂದು ನಿರ್ದಿಷ್ಟ ಮೊತ್ತವನ್ನು 'ತೆರ'ವನ್ನಾಗಿ ಪಾವತಿ ಮಾಡಲು ಒಪ್ಪಿ ಅದರಂತೆ ಅವರವರ ಅನುಕೂಲಕ್ಕೆ ತಕ್ಕಂತೆ ವಿವಾಹ ನಡೆಸಿಕೊಡುತ್ತಾರೆ.

ವಿವಾಹ ವಿಧಿಯ ಕ್ರಿಯೆಗಳು ಅನೇಕ ಹಂತಗಳನ್ನೊಳಗೊಂಡಿರುತ್ತವೆ. ಮೊದಲು 'ವಧು ಪರೀಕ್ಷೆ'. ಸ್ವಾಭಾವಿಕವಾಗಿ ಬಡತನದಲ್ಲಿರುವ ಗಂಡಿನ ತಂದೆ ಅಥವಾ ಅವರ ಹತ್ತಿರದ ಸಂಬಂಧಿಕರು ವಧುವಿನ ಮನೆಯವರಲ್ಲಿ ಪ್ರಸ್ತಾಪ ಪ್ರಾರಂಭಿಸುತ್ತಾರೆ. ಶ್ರೀಮಂತ ವರ್ಗದವರಲ್ಲಿ ಸಾಮಾನ್ಯವಾಗಿ ಹೆಚ್ಚಿನ ತಂದೆ ಅಥವಾ ಹತ್ತಿರದ ಬಂಧುಗಳು ವಿವಾಹ ಪ್ರಸ್ತಾಪ ಪ್ರಾರಂಭಿಸುತ್ತಾರೆ. ಕೆಲವೊಮ್ಮೆ ಕುಲಪುರೋಹಿತರೂ ಸಹ ಇಂತಹ ಪ್ರಸ್ತಾಪಗಳನ್ನು ಮಾಡುವ ಪದ್ಧತಿ ಇದೆ. ಹುಡುಗ ಮತ್ತು ಹುಡುಗಿ ಪರಸ್ಪರ ನೋಡಿದ

ನಂತರ ಹಿರಿಯರ ಸಮ್ಮತಿಯೊಂದಿಗೆ 'ವೀಳ್ಯಶಾಸ್ತ್ರ' ಅಥವಾ 'ನಿಶ್ಚಯ ತಾಂಬೂಲ' ನಡೆಯುತ್ತದೆ. ಒಂದು ಮಂಗಳಕರ ದಿನದಂದು ಬಂಧು ಮಿತ್ರರು ಒಟ್ಟಿಗೆ ಹೆಣ್ಣಿನ ಮನೆಯಲ್ಲಿ ಕಲೆತು ವೀಳ್ಯ ಬದಲಾಯಿಸಿಕೊಳ್ಳುತ್ತಾರೆ. ಬಂದವರಿಗೆಲ್ಲಾ 'ಪಾನ್ ಬಾಟನಾ' ಎಲೆ ಅಡಿಕೆ ವಿತರಣೆಯಾಗುತ್ತದೆ. ಒಮ್ಮೆ ನಿಷ್ಕರ್ಷೆಯಾದ ನಂತರ ವಿವಾಹವೇನಾದರೂ ಮುರಿದು ಬಿದ್ದರೆ ಅದನ್ನು ಬಹಳ ದೊಡ್ಡ ಅಪರಾಧವೆಂದು ಭಾವಿಸಲಾಗುತ್ತದೆ. ಸಮರ್ಥ ಹಾಗೂ ಬಲವಾದ ಕಾರಣಗಳಿಲ್ಲದೆ ಮದುವೆ ಮುರಿದು ಬೀಳುವುದು ಅಸ್ವಾಭಾವಿಕ.

ವೀಳ್ಯಶಾಸ್ತ್ರದ ನಂತರ 'ಸಾಕರ್ ಪುಡಾ' ಅಥವಾ 'ಸಾಕರ್ ಸಾಡಿ' ಎಂಬ ಶಾಸ್ತ್ರ ನಡೆಯುತ್ತದೆ. ಶುದ್ಧ ಗುಜರಾತಿ ಲಾಡ ಕುಟುಂಬಗಳಲ್ಲಿ ಹೆಣ್ಣಿನ ಸೋದರ ಮಾವನ ಮನೆಯಿಂದಲೇ ಆ ವಿವಾಹದ 'ಸೀರೆ ಖಣ' ಹೆಣ್ಣಿನ ಮನೆಗೆ ಬರಬೇಕು. ಸೋದರ ಮಾವನ ಹೆಂಡತಿ ಆ ದಿಬ್ಬಣವನ್ನು, ತಲೆಯ ಮೇಲೆ ಹೊತ್ತು ಉಡುಗೊರೆಗಳನ್ನು ತಂದು ಕೊಡುತ್ತಾರೆ. ಇದನ್ನು 'ಮಾಸಾಳು' (ಸೋದರ ಮಾವನ ಮನೆಯ) ಎಂದು ಕರೆಯುತ್ತಾರೆ. (ಭರೋಜ್ ಗೆಝೆಟಿಯರ್ ೧೯೬೧, ಪುಟ ೧೧೨). ಹೆಣ್ಣಿನ ಹಣೆಗೆ ಅರಿಸಿನ ಕುಂಕುಮವಿಟ್ಟು, ಈ ಉಡುಗೋರೆ ನೀಡಲಾಗುತ್ತದೆ. 'ಸಾಕರ್' ಎಂದರೆ ಸಕ್ಕರೆ, 'ಸಾಡಿ' ಎಂದರೆ ಸೀರೆ ಹೀಗೆ ಸಾಕರ್ ಸಾಡಿ ಶಾಸ್ತ್ರದಲ್ಲಿ ಸೀರೆ ಹಾಗೂ ಸಕ್ಕರೆ ಪ್ರಮುಖ ಪಾತ್ರವಹಿಸುತ್ತವೆ. ಇದರೊಟ್ಟಿಗೆ 'ತಿಲಕ್' ಶಾಸ್ತ್ರ ನಡೆಯುತ್ತದೆ. ವರವನ್ನು ಮೂರು ಕಾಲಿನ 'ಟಿವ್‌ಟಿಣ್‌ಗಿ' ಎಂಬ ಚಿಕ್ಕ ಮೇಜಿನ ಮೇಲೆ ಕೂಡಿಸಿ ವಿಶಿಷ್ಟವಾದ ಗುಜರಾತೀ ಪೇಟಾ ತೊಡಿಸಿ ಹಣೆಗೆ ಸುವಾಸಿನಿಯರು ತಿಲಕವಿಡುತ್ತಾರೆ. ಫಲಕಧಾರಣೆಯ ನಂತರ ವಿನಾಯಕ ಪೂಜೆ ಮಾಡಿ ಲಗ್ನ ಪತ್ರಿಕೆ ಬರೆಸಿ ಅವುಗಳ ಪ್ರತಿಗಳನ್ನಿಟ್ಟು ಪೂಜಿಸುತ್ತಾರೆ. ಎಲ್ಲರಿಗೂ ಸಿಹಿ ಹಂಚಲಾಗುತ್ತದೆ. ಇದಾದ ನಂತರ ಕುಲದೇವತೆ ಹಾಗೂ ಮನೆದೇವರುಗಳಿಗೆ ಪೂಜೆ ಮಾಡಿ ಆಶೀರ್ವಾದ ಪಡೆಯುತ್ತಾರೆ.

ಲಗ್ನಕ್ಕೆ ಒಂದು ದಿನ ಮುಂಚಿತವಾಗಿ, ಸಾಂಕೇತಿಕವಾಗಿ 'ಅರಿಸಿನ ಶಾಸ್ತ್ರ' ಜರುಗುತ್ತದೆ. ಇದು ಧಾರ್ಮಿಕ ಆಚರಣೆಯಲ್ಲವಾದರೂ ಸಾಮಾಜಿಕವಾಗಿ ಮದುವೆಯ ಒಂದು ಭಾಗವಾಗಿದೆ. ಇದನ್ನು 'ಹಳೇದ್ಯೊಶಾಸ್ತರ್' ಎಂದು ಲಾಡರಲ್ಲಿ ಕರೆಯಲಾಗುತ್ತದೆ. ಒಂದು ಬೀಸುವ ಕಲ್ಲಿಗೆ, ಒಂದು ಅರಸಿನದ ಕೊನೆ, ಸ್ವಲ್ಪ ಗೋಧಿ ಹಾಗೂ ಅಡಕೆಯನ್ನು ಒಂದು ಹೊಸ ಬಿಳಿ ಬಟ್ಟೆಯಲ್ಲಿ ಕಟ್ಟಿ ಅದನ್ನು ಬೀಸುವ ಕಲ್ಲಿನ ಗೂಟಕ್ಕೆ ಕಟ್ಟಲಾಗುತ್ತದೆ. ಇದನ್ನು ಸುಮಂಗಲಿಯರು ಮಾಡುತ್ತಾರೆ. ನಂತರ ವಿನಾಯಕ ಹಾಗೂ ಸರಸ್ವತಿ ಸ್ತುತಿಯೊಂದಿಗೆ ಅರಸಿನವನ್ನು ಆ ಕಲ್ಲಿನಲ್ಲಿ ಬೀಸಲಾಗುತ್ತದೆ. ಅದೇ ರೀತಿ ಒಂದು ಹೊಸ ಬಿಳಿ ಬಟ್ಟೆಯಲ್ಲಿ ಅರಸಿನದ ಕೊಂಬು, ಗೋಧಿ ಹಾಗೂ ಅಡಕೆಯನ್ನು ಎರಡು ಒನಕೆಗಳಿಂದ ಕಟ್ಟಲಾಗುತ್ತದೆ. ಪೂಜಿಸಿದ ಬೀಸುವ ಕಲ್ಲು ಹಾಗೂ ಒನಕೆಗಳನ್ನು ಮದುವೆ ಮುಗಿಯುವವರೆಗೆ ಹಾಗೇ ಇಟ್ಟಿರಲಾಗುತ್ತದೆ. ಸಾಮಾನ್ಯವಾಗಿ ಈ ಶಾಸ್ತ್ರವನ್ನು ಬೆಳಗ್ಗೆಯ ಹೊತ್ತು ಮಾಡಲಾಗುತ್ತದೆ.

ನಂತರ ಶಾಸ್ತ್ರವೇ 'ಹಳೇದ್ ಕೊ ಶಾಸ್ತ್ರರ್'. ಒಂದು ಮುತ್ತೈದೆಯರ ಗುಂಪು (ಕನಿಷ್ಠ ಐದು ಜನರಿರಬೇಕು) ವರನ ಮನೆಯಿಂದ ವಧುವಿನ ಮನೆಗೆ ಮಂಗಳ ವಾದ್ಯಗಳೊಡನೆ ಒಂದು ಬುಟ್ಟಿಯಲ್ಲಿ ಅರಸಿನದ ರುಬ್ಬಿದ ಕಣಕ, ಮೈಗೆ ಹಚ್ಚುವ ಎಣ್ಣೆ ಇತ್ಯಾದಿಗಳನ್ನು ಹೊಸ ವಸ್ತ್ರಗಳೊಂದಿಗೆ ತೆಗೆದುಕೊಂಡು ದಿಬ್ಬಣ ಹೋಗುತ್ತಾರೆ. ಮದುವ ಹೆಣ್ಣಿಗೆ ಅರಸಿನ, ಎಣ್ಣೆ ಲೇಪಿಸಿ ನೀರೆರೆಯುತ್ತಾರೆ. ಆಕೆಗೆ ಹೊಸ ಸೀರೆ, ರವಿಕೆಗಳನ್ನು ಕೊಟ್ಟುಕೊಳ್ಳಲು ನೀಡಲಾಗುತ್ತದೆ. ಉಳಿದ ಅರಸಿನ ಎಣ್ಣೆಗಳನ್ನು ಮತ್ತೆ ದಿಬ್ಬಣದಲ್ಲಿ ಗಂಡಿನ ಮನೆಗೆ ತರುತ್ತಾರೆ. ಮದುವೆ ಗಂಡಿಗೂ ಆ ಉಳಿದ ಎಣ್ಣೆ–ಅರಸಿನಗಳನ್ನು ಹಚ್ಚಿ ನೀರೆರೆಯುತ್ತಾರೆ. ಹೆಣ್ಣಿನ ತಂದೆ ಕಳುಹಿಸಿರುವ ಹೊಸ ಉಡುಪನ್ನು ಮದುವೆ ಗಂಡು ತೊಟ್ಟುಕೊಳ್ಳುತ್ತಾನೆ.

ವಿವಾಹದ ದಿನ ಅನೇಕ ಮಂಗಳಕರ ಕಾರ್ಯಗಳು ನೆರವೇರುತ್ತವೆ. ಇವುಗಳನ್ನು ವರನ ಹಾಗೂ ವಧುವಿನ ಮನೆಗಳಲ್ಲಿ, ನಂತರ ಮಂಟಪಗಳಲ್ಲಿ ನಡೆಸಲಾಗುತ್ತದೆ. ಮಂಟಪ ಪ್ರತಿಷ್ಠೆ, ದೇವಕ ಪ್ರತಿಷ್ಠೆ, ಗಣಪತಿ ಪೂಜೆ, ಪುಣ್ಯಾವಾಹನ ನಂದಿಶ್ರಾದ್ಧ ಹಾಗೂ ಗ್ರಹಮಾಕ ಇವು ಮುಖ್ಯ ಶುಭಕರ ಕಾರ್ಯಗಳು. ಮದುವೆ ನಡೆಯುವ ಸ್ಥಳದಲ್ಲಿ ಮುತ್ತೈದೆಯರು ಸಗಣಿಯಿಂದ ನೆಲ ಸಾರಿಸಿ ರಂಗೋಲಿಯಿಂದ ಸಿಂಗರಿಸುತ್ತಾರೆ. ಅಲ್ಲಿ ಮೂರು ಮಣೆಗಳನ್ನು ಇಡಲಾಗುತ್ತದೆ. ವರನ ಹಾಗೂ ವಧುವಿನ ತಂದೆ ತಾಯಿಗಳು ಶುಚಿರ್ಭೂತರಾಗಿ ಹೊಸ ಬಟ್ಟೆಯುಟ್ಟು ಈ ಮಣೆಗಳ ಮೇಲೆ ಪೂರ್ವಾಭಿಮುಖವಾಗಿ ಕುಳಿತುಕೊಳ್ಳುತ್ತಾರೆ. ಇಲ್ಲಿ ವಿವಾಹವಾಗುವ ಗಂಡು ಮತ್ತು ಹೆಣ್ಣು ಕೆಲವು 'ಪ್ರಾಯಶ್ಚಿತ್ತ' ಕ್ರಿಯಾವಿಧಿಗಳಿಗೆ ಒಳಗಾಗಬೇಕಾಗುತ್ತದೆ. ನಂತರ ಹೆಣ್ಣಿನ ಅಥವಾ ಗಂಡಿನ ತಂದೆ ಈ ಕೆಳಕಂಡಂತೆ ಘೋಷಣೆ ಮಾಡುತ್ತಾನೆ :

*''ನನ್ನ ಮಗ/ಮಗಳಾದ ಶ್ರೀ ........ ಕುಮಾರಿ .......... ಯನ್ನು ............* ***ವರಿಸಲು ದೇವ ದೇವತೆಗಳ ಮತ್ತು ಹಿರಿಯರ ಆಣತಿಯ ಮೇರೆಗೆ ಶುಭ ವಿವಾಹ ಜರುಗಿಸಿ ನೂತನ ದಂಪತಿಗಳು, ಸುಖ ಸಂಸಾರ ನಡೆಸುತ್ತಾ ಕುಲೋದ್ಧಾರಕರಾದ ಮಕ್ಕಳನ್ನು ಪಡೆಯಲೆಂದು ಈ ಕ್ರಿಯಾವಿಧಿಗಳನ್ನು ನಡೆಸುತ್ತೇವೆ.''*** ಈ ಹೇಳಿಕೆಯಲ್ಲಿ ಮದುವೆ ಆಶಯವು ಮತ್ತು ಅದರ ಸಾಮಾಜಿಕ ಹೊಣೆಗಾರಿಕೆಯೂ ವ್ಯಕ್ತವಾಗುತ್ತದೆ. ವಿವಾಹವು ಯಾವುದೇ ವಿಘ್ನಗಳು ಅಥವಾ ಅಡಚಣೆಗಳಿಲ್ಲದೆ ನಿರ್ವಿಘ್ನವಾಗಿ ನಡೆಯಬೇಕೆಂದು ಗಣಪತಿ ಪೂಜೆ, ಮೃತ್ಯುಂಜಯ ಜಪ ಹಾಗೂ ನವಗ್ರಹಗಳನ್ನು ಪೂಜಿಸಲಾಗುತ್ತದೆ. ಈ ಪೂಜೆ ಪುನಸ್ಕಾರಗಳು ವಿವಾಹಪೂರ್ವ ಹಾಗೂ ವಿವಾಹ ನಂತರ ನಡೆಯುವುದರಿಂದ ಇವನ್ನು 'ಅನುಷ್ಠಾನ' ಗಳೆಂದು ಕರೆಯುತ್ತಾರೆ.

ಲಾಡರಲ್ಲಿ ಮುಖ್ಯವಾಗಿ ಮಹಾರಾಷ್ಟ್ರಕ್ಕೆ ಸೇರಿದ ಮರಾಠಾ ಲಾಡರಲ್ಲಿ ಒಂದು ವಿಶೇಷ ಆಚರಣೆ ಇದೆ. ಈ ಮರಾಠಾ ಲಾಡ ರಾಹುತರು ಯುದ್ಧಗಳಲ್ಲಿ ಕಲಿತನ ತೋರಿ ವೀರಾವೇಶದಿಂದ ಮರಣಿಸಿದ್ದರೆ, ವರ ಮತ್ತು ವಧುವಿನ ಕುಲದವರನ್ನು ಬಿಟ್ಟು ಮೂರನೇ ಗುಂಪಿನ ಕುಲದವರೊಬ್ಬರನ್ನು 'ವೀರಪುರುಷ' ಅಥವಾ 'ವೀರಗಾರ' ರೆಂದು

ಯೋಧನಂತೆ ಧರಿಸಿ ಅವನನ್ನು ಮೆರವಣಿಗೆಯಲ್ಲಿ ಕತ್ತಿ ಹಾಗೂ ಪಂಜುಗಳನ್ನು ಹಿಡಿದು ದೇವಾಲಯ ಅಥವಾ ನದಿ ತೀರದವರೆಗೆ ಹೋಗಿ ಹಿಂತಿರುಗಿ ಬರುವುದು ವಾಡಿಕೆ. ಇವರ ಜೊತೆಯಲ್ಲಿ ಚಿಕ್ಕ ಹುಡುಗರೈದು ಜನರನ್ನು 'ಕಿರಿಯ ವೀರಗಾರ' ರೆಂದು ಭಾವಿಸಿ ಅವರನ್ನೂ ಸಹ ಮೆರವಣಿಗೆಯಲ್ಲಿ ಕರೆದೊಯ್ಯುವ ಪದ್ಧತಿ ಇದೆ. ಈ ವೀರಗಾರರು ಹಿಂತಿರುಗಿ ಬಂದಾಗ ಅವರಿಗೆ ಹಣೆಗೆ ಕುಂಕುಮ ತಿಲಕವಿಟ್ಟು ಸ್ವಾಗತಿಸುತ್ತಾರೆ. ಈಡುಗಾಯಿ ಇಳಿಸಿ ಹೊಡೆಯಲಾಗುತ್ತದೆ. ಅವರ ಕೈಯ ಕತ್ತಿಯನ್ನು ತೆಗೆದುಕೊಂಡು ಪೂಜಾ ಸ್ಥಳದಲ್ಲಿ ಇಡಲಾಗುತ್ತದೆ. ಈ ಶಾಸ್ತ್ರಗಳು ಮುಗಿದ ಬೆನ್ನಲ್ಲೇ ವಿವಾಹ ವಿಧಿಗಳು ಆರಂಭವಾಗುತ್ತವೆ.

ಮದುವೆಯ ಹಿಂದಿನ ದಿನವೇ ನೆಂಟರಿಷ್ಟರೆಲ್ಲ ಸೇರಿರುತ್ತಾರೆ. ಹೆಣ್ಣಿನ ಮನೆಯಲ್ಲಿ ವಿವಾಹದ ಘೋಷಣೆ ಮಾಡಲಾಗುತ್ತದೆ. ಇದನ್ನು 'ವಾಗ್ದಾನ' ಅಥವಾ 'ವಾಗ್–ನಿಶ್ಚಯ' ವೆಂದು ಕರೆಯುತ್ತಾರೆ. ವರನ ತಂದೆಯು ಹಲವು ಬಂಧುಗಳನ್ನೂ ಮುತ್ತೈದೆಯರನ್ನು ಒಳಗೊಂಡ ಮೆರವಣಿಗೆಯಲ್ಲಿ ಹೆಣ್ಣಿನ ಮನೆಗೆ ದಿಬ್ಬಣ ಹೋಗುತ್ತಾರೆ. ಅವರನ್ನೆಲ್ಲಾ ಸ್ವಾಗತಿಸಿ, ಸತ್ಕರಿಸಿ, ಕುಳ್ಳಿರಿಸಿದ ನಂತರ ವಧುವು ಆಭರಣ ಹಾಗೂ ಬೆಲೆಬಾಳುವ ಸೀರೆಯಲ್ಲಿ ಅಲಂಕಾರವಾಗಿ ಬರುತ್ತಾಳೆ. ವರನ ತಂದೆ ಆಕೆಯ ಕೈಯಲ್ಲಿ ಎಲೆ – ಅಡಿಕೆ, ತೆಂಗಿನ ಕಾಯಿಯನ್ನು ನೀಡಿ ವಧುವಿನ ತಂದೆಯನ್ನು ಕುರಿತು ***"ನಿಮ್ಮ ಕುವರಿಯನ್ನು ನನ್ನ ಕುವರನಿಗೆ ವಧುವಾಗಿ ಸ್ವೀಕರಿಸುತ್ತೇನೆ"*** ಎಂದು ಮೂರು ಬಾರಿ ಘೋಷಿಸುತ್ತಾನೆ. ಅದಕ್ಕೆ ವಧುವಿನ ಪಿತೃ. ***"ದಯಮಾಡಿ ಸ್ವೀಕರಿಸಿ"*** ಎಂದು ಮೂರು ಬಾರಿ ಉತ್ತರಿಸುತ್ತಾನೆ. ನಂತರ ಸುಲಿದ ಬಾಳೆಹಣ್ಣನ್ನು ಸಕ್ಕರೆಯಲ್ಲಿ ಅದ್ದಿ ಮೊದಲು ಗಂಡಿನ ತಂದೆಗೆ ಹೆಣ್ಣಿನ ತಂದೆ ಹಾಗೂ ನಂತರ ಹೆಣ್ಣಿನ ತಂದೆಗೆ ಗಂಡಿನ ತಂದೆ ತಿನ್ನಿಸುತ್ತಾರೆ.

ಗಂಡಿಗೆ ಕಚ್ಚೆ ಪಂಚೆ, ಉದ್ದದ ಗುಜರಾತಿ ಪದ್ಧತಿಯ ನಿಲುವಂಗಿ, ತಲೆಗೆ ರುಮಾಲು ಹಾಗೂ ಸೊಂಟಕ್ಕೆ ಕಠಾರಿಯಿಂದ ಅಲಂಕರಿಸುತ್ತಾರೆ. ಹಣೆಗೆ ದೊಡ್ಡ ಕುಂಕುಮ ತಿಲಕವಿಟ್ಟು, ತಲೆಗ ವಿಶೇಷವಾದ ತ್ರಿಕೋನಾಕಾರದ ಬಾಸಿಂಗವನ್ನು ಕಟ್ಟುತ್ತಾರೆ. ಬಾಸಿಂಗವನ್ನು ಹೂವಿನಿಂದ ಅಲಂಕರಿಸಲಾಗಿರುತ್ತದೆ. ಗಂಡಿನ ಬಾಸಿಂಗ, ಹೆಣ್ಣಿನ ಬಾಸಿಂಗಕ್ಕಿಂತ ತುಸು ದೊಡ್ಡದಾಗಿರುತ್ತದೆ. ಈ ಅಲಂಕಾರದೊಂದಿಗೆ ಮಂಗಳ ವಾದ್ಯಗಳೊಡನೆ ಕುದುರೆಯನ್ನೇರಿ ವಧುವಿನ ಬಿಡಾರದ ಕಡೆಗೆ ಮೆರವಣಿಗೆ ಧಾವಿಸುತ್ತದೆ. ವರನು ಬಿಜಯಂಗೈಯ್ಯುತ್ತಿರುವುದನ್ನು ತಿಳಿಸಲು ಧೂತನೊಬ್ಬನನ್ನು ಮುಂಗಡವಾಗಿ ಕಳುಹಿಸಲಾಗುತ್ತದೆ. ಸಾಮಾನ್ಯವಾಗಿ ಈ ಧೂತನು ವರನ ಸಹೋದರ ಅಥವಾ ಅವನಿಗೆ ಸಮೀಪದ ವ್ಯಕ್ತಿಯಾಗಿರುತ್ತಾನೆ. ಆತನು ಸುದ್ದಿ ನೀಡಿದ ಕೂಡಲೇ ಆತನನ್ನು ಆದರಾತಿಥ್ಯಗಳಿಂದ ಸತ್ಕರಿಸಲಾಗುತ್ತದೆ. ಕೆಲವೊಮ್ಮೆ ಅವನಿಗೆ ಉಡುಗೊರೆ ನೀಡುವುದೂ ಉಂಟು. ಅವನನ್ನು 'ವರಧಾವ' ವರ ಬರುತ್ತಿರುವುದನ್ನು ತಿಳಿಸುವವನು ಎನ್ನುತ್ತಾನೆ.

ಮೆರವಣಿಗೆಯಲ್ಲಿ ಮುಂದೆ ವಾದ್ಯಗಾರನೂ ಅವರ ಹಿಂದೆ ಲಾಡ ಗೃಹಸ್ಥರು ಹಾಗು ಮದುವೆಯ ಗಂಡು ಬರುತ್ತಾರೆ. ಅವರ ಹಿಂದೆ ವರನ ಸಹೋದರಿ 'ಶಕುನದೀಪ'ವನ್ನು

ಹೊತ್ತು ನಡೆಯುತ್ತಾಳೆ. ಅವಳ ಜೊತೆಗೆ ಮತ್ತೊಬ್ಬಳು ಮುತ್ತೈದೆ ಕಳಸ ಹೊತ್ತ ಹರಿವಾಣವನ್ನು ಹಿಡಿದು ನಡೆಯುತ್ತಿರುತ್ತಾಳೆ. ಅವರೊಂದಿಗೆ ಇತರ ಸುವಾಸಿನಿಯರೂ ನಡೆದು ಬರುತ್ತಾರೆ. ದಾರಿಯಲ್ಲಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಅಥವಾ ದೇವಾಲಯದ ಬಳಿ ಎಲ್ಲರೂ 'ಸೀಮಾಪೂಜೆ' ನಡೆಸಲು ಅಂದರೆ ನಿರ್ದಿಷ್ಟ ಗಡಿ ದಾಟುವುದಕ್ಕೆ ಮುಂಚೆ ಪೂಜೆ ನಡೆಸುತ್ತಾರೆ. ವರನನ್ನು ವಧುವಿನ ತಂದೆ ಸ್ವಾಗತಿಸಿ ಸತ್ಕರಿಸುತ್ತಾನೆ. ಒಬ್ಬಿಬ್ಬರು ಸುವಾಸಿನಿಯರು ವರನು ಸವಾರಿ ಮಾಡಿಕೊಂಡು ಬಂದ ಕುದುರೆಯ ಮುಂಗಾಲುಗಳಿಗೆ ನೀರೆಯುತ್ತಾರೆ. ಕುದುರೆಯಿಳಿದು ಬರುವ ವರನಿಗೆ ವಧುಗಿನ ತಾಯಿ, ಅಕ್ಕಿ ಹಿಟ್ಟಿನಿಂದ ಮಾಡಿದ ದೀಪಗಳು, ಅರಸಿನ ಹಚ್ಚಿದ ಅನ್ನದ ಉಂಡೆಗಳು ಮತ್ತು ದೀಪಗಳಿರುವ ಹರಿವಾಣದೊಂದಿಗೆ ಬಂದು ವರನಿಗೆ ಆರತಿ ಮಾಡುತ್ತಾರೆ. ಅದನ್ನು 'ಉತಾರ್‌ಚಡಾವ್' ಎನ್ನುತ್ತಾರೆ. ಮುತ್ತೈದೆಯರು ಆರತಿ ಓಕಳಿ ತಂದು, ಆರತಿ ಮಾಡಿ ಅದನ್ನು ದಾರಿಯಲ್ಲಿ ಹರಡುತ್ತಾರೆ. ವರನು ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಆರಸಿ ತಂದು ಮುತ್ತೈದೆಯವರಿಗೆ ಹಣ/ ದಕ್ಷಿಣೆ ನೀಡುತ್ತಾನೆ. ವಧುವಿನ ತಂದೆ ವರನ ಕೈಗೆ ತಾಂಬೂಲ ಹಾಗೂ ತೆಂಗಿನಕಾಯಿಯನ್ನಿಟ್ಟು ಅವನಿಗೆ ನಿಗಧಿಪಡಿಸಿರುವ ಮಂಟಪಕ್ಕೆ 'ಭೌಲಾ'ದ ಬಳಿ ಮೂರು ಕಾಲಿನ ಟೀಪಾಯಿಯೊಂದರ ಮೇಲೆ ಕೂಡಿಸುತ್ತಾರೆ. ಬಂದ ಅತಿಥಿ, ಬಾಂಧವರನ್ನಲ್ಲಾ ಗೌರವದಿಂದ ಕೂಡಿಸಲಾಗುತ್ತದೆ. ಮಂಗಳ ವಾದ್ಯಗಳು ಮೊಳಗುತ್ತಿರುತ್ತವೆ. ಕುಲಪುರೋಹಿತರು ಜಲಯಂತ್ರ–ಘಟಿಕಾಪಾತ್ರೆಯ ಕಡೆ (ಘಳಿಗೆ ಬಟ್ಟಲು) ಗಮನವಿಟ್ಟು ನೋಡುತ್ತಿರುತ್ತಾರೆ. ವರನಿಗೆ ಮುಂಜಿ ನಡೆಸುವ ಶಾಸ್ತ್ರಗಳನ್ನು ಮಾಡಿ ಯಜ್ಞೋಪವೀತ ಧರಿಸಲಾಗುತ್ತದೆ. ಲಗ್ನ ಪತ್ರಿಕೆಗಳ ಪೂಜೆಯೂ ನಡೆಸಲಾಗುತ್ತದೆ. ವರನ ಪಾದ ಪೂಜೆ ನಡೆಯುತ್ತದೆ. ವಧುವಿನ ತಂದೆ–ತಾಯಿ ವರನ ಪಾದ ಪೂಜೆ ಮಾಡುತ್ತಾರೆ.

ವಧುವು ಗೌರಿವ್ರತ, ಶಿವ, ಪಾರ್ವತಿ ಹಾಗೂ ಇಂದ್ರಾಣಿಯರ ಪೂಜೆ ನಡೆಸುತ್ತಾಳೆ. ವಿವಾಹ ಮಂಟಪದಲ್ಲಿ ಪುರೋಹಿತರು ಎರಡು ಅಕ್ಕಿಯ ರಾಶಿಗಳನ್ನು ಗುಡ್ಡೆಯಾಕಾರದಲ್ಲಿ ಎದುರುಬದುರಾಗಿ ಸಿದ್ಧಪಡಿಸುತ್ತಾರೆ. ಮಧ್ಯದಲ್ಲಿ ಬಿಳಿಯ ವಸ್ತ್ರದ ಅಂತರಪಟ ಹಿಡಿಯಲಾಗುತ್ತದೆ. ಅಂತರ್‌ಪಟದ ಮೇಲೆ ಸೂರ್ಯ–ಚಂದ್ರಾದಿಗಳ ಆಕಾರಗಳನ್ನು ಬರೆಯಲಾಗಿರುತ್ತದೆ. ಒಂದೊಂದು ಅಕ್ಕಿಯ ಗುಡ್ಡೆಯ ಮೇಲೂ ಗಂಡು ಮತ್ತು ಹೆಣ್ಣನ್ನು ಬದುರುಬದುರಾಗಿ ನಿಲ್ಲಸಲಾಗುತ್ತದೆ. ಅಕ್ಕಿ, ಜೀರಿಗೆ ಮತ್ತು ಬೆಲ್ಲವನ್ನು ಮಿಶ್ರ ಮಾಡಿ ಸಿದ್ಧಪಡಿಸಿದ ಅಕ್ಷತೆಯನ್ನು ಹೆಣ್ಣಿನ ಹಾಗೂ ಗಂಡಿಗೆ ನೀಡಲಾಗುತ್ತದೆ. ಹೆಣ್ಣಿನ ಸೋದರಮಾವ, ಗಂಡಿನ ಸೋದರಮಾವ ಮುಂತಾದವರು ಗಂಡು–ಹೆಣ್ಣಿನ ಅಕ್ಕಪಕ್ಕ ನಿಲ್ಲುತ್ತಾರೆ. ಪುರೋಹಿತರು ಅಂತರ್‌ಪಟದ ಮೇಲುಸ್ತುವಾರಿ ನೋಡಿಕೊಳ್ಳುತ್ತಾರೆ. ಪುರೋಹಿತರು ಮಂತ್ರಪಠಣ ಮಾಡುತ್ತಾರೆ. ಎಲ್ಲರಿಗೂ ಅಕ್ಷತೆಕಾಳನ್ನು ನೀಡಲಾಗುತ್ತದೆ. ಶುಭ ಘಳಿಗೆ ಸಮೀಪುಸುತ್ತಿದ್ದಂತೆ ತಾಳ, ವಾದ್ಯಗಳವರು ಸಿದ್ಧವಾಗಿರುತ್ತಾರೆ. ಘಳಿಗೆ ಬಟ್ಟಲಿನ ಕಡೇ ಗಳಿಗೆ ಸಮಯಕ್ಕೆ ಸರಿಯಾಗಿ ಮುಳುಗುವಾಗ ಪುರೋಹಿತರು ಚಪ್ಪಾಳೆ ಸದ್ದು ಮಾಡುವಾಗ ತಾಳಮೇಳಗಳು ಮೊಳಗಿ ಮಂಗಳವಾದ್ಯ ನುಡಿಸಲಾಗುತ್ತದೆ. ಗಂಡು

ಹೆಣ್ಣುಗಳ ಪರಸ್ಪರ ಕೈ ಹಿಡಿಸುವ ಕೆಲಸವನ್ನು ಹಿರಿಯರೊಬ್ಬರು ಮಾಡುತ್ತಾರೆ. ಕುಟುಂಬದ ಮುಖ್ಯಸ್ಥರು ಜನಾಂಗದ ಎಲ್ಲಾ ಹಿರಿಯರು ವಧೂವರರ ಕೈ ಮೇಲೆ ದಕ್ಷಿಣೆಯನ್ನಿಟ್ಟು ಉದ್ದರಣೆಯಿಂದ ಹಾಲೆರೆದು ಅಕ್ಷತೆ ಹಾಕಿ ಹಾರೈಸಿ ಆಶೀರ್ವದಿಸುತ್ತಾರೆ. ಮಂಗಳಸೂತ್ರ ಧಾರಣೆ ನಡೆಯುತ್ತದೆ.

ಪುರೋಹಿತರು ಮೊಸರು, ಬಾಳೆಹಣ್ಣು ಜೇನುತುಪ್ಪ ಸೇರಿಸಿ 'ಮಧುಪರ್ಕ' ತಯಾರಿಸುತ್ತಾರೆ. ಅದನ್ನು ಮೊದಲು ಹಿರಿಯ ಅಳಿಯನಿಗೆ ನೀಡಿ, ನಂತರ ಕ್ರಮವಾಗಿ ವರನಿಗೂ ನೀಡಲಾಗುತ್ತದೆ. ವಧುವಿನ ತಂದೆ ತಾಯಿ ವರನಿಗೆ ಉಡುಗೋರೆಗಳನ್ನು ನೀಡುತ್ತಾರೆ. ಬಂಧುಮಿತ್ರರೂ ಸಹ ವಧೂವರರಿಗೆ ಉಡುಗೊರೆಗಳನ್ನು ನೀಡುತ್ತಾರೆ. ಬಂಧುಮಿತ್ರರಿಗೆಲ್ಲಾ ಫಲತಾಂಬೂಲಗಳನ್ನು ನೀಡಲಾಗುತ್ತದೆ. ನಂತರ ವಿವಾಹ ಭೋಜನವಾಗುತ್ತದೆ. ನಂತರ ವಿವಾಹ ಹೋಮ ಜರುಗುತ್ತದೆ. ಹತ್ತಿರದ ಬಾಂಧುಗಳಲ್ಲಿ ಯುವ ಜೋಡಿಯೊಂದನ್ನು ಆರಿಸಿ ಅವರಿಗೆ ವಿವಿಧ ಅಲಂಕಾರ ಮಾಡಿ ಶಿವಪಾರ್ವತಿಯರಂತೆ ವಿವಾಹಕ್ಕೆ ಆಗಮಿಸಿ ಅರಳು ಹುರಿದು ಕೂಲಿ ಪಡೆದು ಹಿಂತಿರುಗುವ ಅಣಕು ಪದ್ಧತಿ ನಡೆಯುತ್ತದೆ. ಲಾಜಾ ಹೋಮದ ನಂತರ 'ಸಪ್ತಪದಿ'. ವಧೂ–ವರರಿಬ್ಬರೂ ಕೈ ಕೈ ಹಿಡಿದು ಹೋಮಕುಂಡಕ್ಕೆ ಏಳುಬಾರಿ ಸುತ್ತುತ್ತಾರೆ. ಗಂಡುಹೆಣ್ಣಿಗೆ 'ಪಾಣಿಗ್ರಹಣ ಕಂಕಣ' ಕಟ್ಟಲಾಗುತ್ತದೆ. ಇದು ವಿವಾಹ ಸಿಂಧುವಾಯಿತೆಂದು ಸಾರುವ ಕ್ರಿಯೆಯಾಗಿದೆ.

ನಂತರ ವಧುವಿನ ದಿಬ್ಬಣ ವರನ ಮನೆ ಕಡೆ ಸಾಗುತ್ತದೆ. ವಧುವನ್ನು ಗಂಡಿನ ಮನೆಯವರಿಗೆ ಒಪ್ಪಿಸಿ ಭಾರವಾದ ಹೃದಯದಿಂದ ಮಾತಾಪಿತೃಗಳು ತಮ್ಮ ಮನೆಗೆ ತೆರಳುತ್ತಾರೆ. ಕೆಲವೊಂದು ಕಡೆ ಇನ್ನೂ ಅನೇಕ ಶಾಸ್ತ್ರಗಳನ್ನು ನಡೆಸುತ್ತಾರೆ. ಇತ್ತೀಚಿನವರೆಗೆ ಬಾಲ್ಯ ವಿವಾಹಗಳೇ ಹೆಚ್ಚಾಗಿದ್ದುದರಿಂದ ಹೆಣ್ಣು ಋತುಮತಿಯಾದ ನಂತರ ಪ್ರಸ್ತದ ಶಾಸ್ತ್ರ ನಡೆಯುತ್ತಿತ್ತು, ಅದುವರೆಗೂ ವಧುವಿನ ಮನೆಗೆ ವರಮಹಾಶಯ ಅನೇಕ ಬಾರಿ ಠಳಾಯಿಸುತ್ತಿದ್ದ ಪದ್ಧತಿಯಿತ್ತು. ಆದರೆ ಇಂದಿನ ದಿನಗಳಲ್ಲಿ ವಯಸ್ಕರಲ್ಲಿ ವಿವಾಹ ಜರುಗುವುದರಿಂದ ವಿವಾಹದ ಮಾರನೇ ದಿನ ಅಥವಾ ಅತಿ ಸಮೀಪದ ಒಂದು ಪ್ರಶಸ್ತವಾದ ದಿನ ಪ್ರಸ್ತದ ಶಾಸ್ತ್ರ ಜರುಗುತ್ತದೆ.

ಕೆಲವು ಲಾಡ ಪಂಗಡಗಳು ಮಹಾರಾಷ್ಟ್ರದ ಆಚರಣೆಗಳನ್ನೇ ಹೆಚ್ಚಾಗಿ ಪಾಲಿಸುವುದರಿಂದ 'ವಧುವಿನ ಮುಖ ನೋಡುವ ಶಾಸ್ತ್ರ' ವರನ ಮನೆಯಲ್ಲಿ ದಿಬ್ಬಣ ಬಂದ ತಕ್ಷಣ ಜರುಗುತ್ತದೆ. ಮುಸುಕು ಹಾಕಿಕೊಂಡ ಹೆಣ್ಣು ಒಂದೆಡೆ ಕುಳಿತಿರುತ್ತಾಳೆ. ವರನ ತಾಯಿ, ಅಕ್ಕ–ತಂಗಿಯರು, ಮೈದುನರು ಈ 'ಸುಮುಖದರ್ಶನ' ಮಾಡಲು ಬರುತ್ತಾರೆ. ವರನ ತಾಯಿಯು ಸೊಸೆಗೆ ಹೊಸ ಉಡಿಗೆಗಳನ್ನು ನೀಡಿ, ಬಾಯಿಗೆ ಸಕ್ಕರೆ ಹಾಕಿ, ಸೆರಗು ಸರಿಸಿ ಮುಖ ದರ್ಶನ ಮಾಡುತ್ತಾಳೆ. ನಂತರ ಇತರರು ಇಂತಿಷ್ಟೆಂದು ಹಣ ನೀಡಿ ನೂತನ ವಧುವಿನ ಮುಖದರ್ಶನ ಮಾಡುತ್ತಾರೆ. ಕಡೆಯದಾಗಿ, ವಿವಾಹದ ೨ನೇ, ೪ನೇ, ೫ನೇ, ೭ನೇ, ೮ನೇ ಅಥವಾ ೧೧ನೇ ದಿನದಂದು 'ದೇವಕೋತಾಪನ' ನಡೆಯುತ್ತದೆ. ಅಂದರೆ

'ದೇವಕ' ವನ್ನು ಮತ್ತೆ ಕ್ರಿಯಾವಿಧಿಗಳ ನಂತರ ಕೆಳಗಿಳಿಸುವುದು. ದೇವಕವನ್ನು ಪ್ರತಿಷ್ಠಿಸಲು ಅನುಸರಿಸುವ ಕ್ರಮವೇ ಅದರ ವಿಸರ್ಜನ ಕಾರ್ಯದಲ್ಲೂ ನಡೆಯುತ್ತದೆ.

ಲಾಡರಲ್ಲಿ ವಿಧವಾ ವಿವಾಹ, ಬಹುಪತಿತ್ವ, ಬಾಲ್ಯ ವಿವಾಹ ಪದ್ಧತಿಗಳು ಬಳಕೆಯಲ್ಲಿ ಇಲ್ಲ. ಲಾಡರಲ್ಲೇ ಇತರ ಪಂಗಡಗಳೊಡನೆ ಅದರೆ ಲಾಡ ಸೌಧಾಗರ ಕ್ಷತ್ರಿಯ, ಸುಗಂಧಿ, ಎಲೆಗಾರ, ಲಾಡ ಮರಾಠ ಕ್ಷತ್ರಿಯ ಇವರುಗಳು ಪರಸ್ಪರ ವಿವಾಹ ಸಂಬಂಧಗಳನ್ನು ಇತ್ತೀಚೆಗೆ ಪ್ರಾರಂಭಿಸಿದ್ದಾರೆ. ಅಂತರ್ಜಾತೀಯ ವಿವಾಹಗಳೂ ಸಹ ಲಾಡರಲ್ಲಿ ಇಲ್ಲವೆನ್ನುವಷ್ಟು ಕಡಿಮೆ.

**ಉಪನಯನ/ಮುಂಜಿ :**

ಕಳೆದ ೩೦–೪೦ ವರ್ಷಗಳಲ್ಲಿ ಸಾಮಾಜಿಕ ಜೀವನದಲ್ಲಿ ಮಹತ್ತರ ಬದಲಾವಣೆಗಳಾಗಿವೆ. ನಗರಗಳ ದಟ್ಟಣೆ ಹೆಚ್ಚಾಗಿ, ಕೈಗಾರಿಕೀರಣ ಅನೇಕ ಸಮಸ್ಯೆಗಳನ್ನು ತಂದೊಡ್ಡಿದೆ. ಅವಿಭಕ್ತ ಕುಟುಂಬಗಳು ಕಣ್ಮರೆಯಾಗುತ್ತಿವೆ. ಧಾರ್ಮಿಕ ಆಚರಣೆಗಳೂ ಕೆಲವೊಂದು ಬದಲಾಗಿವೆ ಹಾಗೂ ಕಡಿಮೆಯಾಗಿವೆ. ಉಪನಯನವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಆಚರಣೆಯಲ್ಲಿರುವ ಒಂದು ಕ್ರಿಯಾವಿಧಿ. ಇದನ್ನು ಮೌಂಜಿಬಂಧನ, ವ್ರತಬಂಧವೆಂದೂ ಕರೆಯುತ್ತಾರೆ. 'ಮೌಂಜ' ವೆಂದರೆ ಪವಿತ್ರ ಯಜ್ಞೋಪವೀತ. ಗಂಡು ಮಕ್ಕಳಿಗೆ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯರಲ್ಲಿ ಈ ಆಚರಣೆ ಇದೆ. ಮುಖ್ಯವಾಗಿ ಉಪನಯನ ಆಚರಣೆಯ ವಟುವೊಬ್ಬನಿಗೆ ಬ್ರಹ್ಮಚರ್ಯಾಶ್ರಮ ಅಥವಾ ವಿದ್ಯಾರ್ಜನೆಗಾಗಿ ಅಣಿಗೊಳಿಸುವುದು. ಸಾಮಾನ್ಯವಾಗಿ ಒಬ್ಬ ವಟುವಿಗೆ ೮ ರಿಂದ ೧೨ ವರ್ಷದೊಳಗಿನ ವಯಸ್ಸಿನಲ್ಲಿ ಮುಂಜಿ ಮಾಡುವುದು ಪದ್ಧತಿ. ಉಪನಯನ ಕ್ರಿಯೆಯನ್ನು ವರ್ಷದ ಕೇವಲ ೫ ಮಾಸಗಳಲ್ಲಿ ಮಾತ್ರ ಮಾಡುವುದು ರೂಢಿ. ಮಾಘ, ಫಾಲ್ಗುಣ, ಚೈತ್ರ, ವೈಶಾಖ ಮತ್ತು ಜ್ಯೇಷ್ಠ ಮಾಸಗಳಲ್ಲಿ ಮಾತ್ರ ಉಪನಯನವನ್ನು ಮಾಡಲಾಗುತ್ತದೆ. ಇದು ಖಗೋಳ ವಿಜ್ಞಾನದಿಂದ ನಿರ್ಧರಿತವಾದ ನಿಯಮವಾಗಿದೆ.

ಮೌಂಜ ಬಂಧನವೆಂದರೆ "**ಒಬ್ಬ ಬಾಲಕನ ಸೊಂಟವನ್ನು ದರ್ಭೆಯಿಂದ ನೇಯಲ್ಪಟ್ಟ ದಾರದಿಂದ ಸುತ್ತುವರಿಯುವುದು**" ಎಂದರ್ಥ. ಇಂದು ಉಪನಯನದ ಸಾಂಸ್ಕೃತಿಕ ಪ್ರಾಮುಖ್ಯತೆಯು ಮಾಯವಾಗಿ, ಕೇವಲ ಬಂಧು ಮಿತ್ರರಿಗೆ ಒಂದು ಸಾಮಾಜಿಕ ಆಚರಣೆಯಾಗಿ ಸೀಮಿತವಾಗಿದೆ. ಅದು ಧಾರ್ಮಿಕ ವಿಧಿಗಿಂತ ಹೆಚ್ಚಾಗಿ ಕೇವಲ ಒಂದು ಹಬ್ಬದ ಆಚರಣೆಯಿಂದ ಬಳಕೆಯಲ್ಲಿದೆ. ಒಂದು ಮಂಗಳಕರವಾದ ದಿನ ನಿಗಧಿಪಡಿಸಿ, ಅದಕ್ಕೆ ಕೆಲವು ದಿನ ಮುಂಚೆಯೇ ಸಿದ್ಧತೆಗಳು ನಡೆಯುತ್ತವೆ. ಮನೆಗೆ ಹಸಿರು ಚಪ್ಪರ, ತಳಿರು ತೋರಣಗಳಿಂದ ಅಲಂಕರಿಸುತ್ತಾರೆ. ಬಂಧು ಮಿತ್ರರಿಗೆಲ್ಲ ಆಹ್ವಾನ ತಲುಪಿಸಿರುತ್ತಾರೆ. ವಿವಾಹ ಆಚರಣೆಯ ಸಂದರ್ಭದಂತೆಯೇ ಬಂಧುಗಳು ಔತಣವೇರ್ಪಡಿಸುತ್ತಾರೆ. ಮುಂಜಿ ೧–೨ ದಿನ ಮುಂಚೆ ಬಾಲಕ ಹಾಗೂ ಅವನ

ತಂದೆ–ತಾಯಿ ದೇವಲಯಗಳನ್ನು ಸಂದರ್ಶಿಸಿ, ಬಂಧು ಮಿತ್ರರನ್ನು ಖುದ್ದಾಗಿ ಆಮಂತ್ರಿಸಿ ದೇವರನ್ನು ಆವಾಹಿಸುತ್ತಾರೆ. ಇದನ್ನು 'ಅಕ್ಷತಾಹ್ವಾನ' ವೆನ್ನುತ್ತಾರೆ.

ಉಪನಯನದ ದಿನ ಮಂಗಳ ವಾದ್ಯದವರು ಓಲಗ ನುಡಿಸುತ್ತಾರೆ. **'ಘಟಿಕಾ'** ಅಥವಾ ಘಳಿಗೆ ಬಟ್ಟಲನ್ನು ತೇಲಿ ಬಿಡಲಾಗುತ್ತದೆ. ಶುಭ ಘಳಿಗೆ ನಿಶ್ಚಯವಾಗಿದ್ದು ಅದು ಬರುವ ತನಕ ಘಳಿಗೆ ಬಟ್ಟಲು ಮುಳುಗುತ್ತಿರುತ್ತದೆ. ಅನೂಚಾನವಾದ ಪದ್ಧತಿಯಂತೆ ಕ್ರಿಯಾವಿದಿಗಳು ಜರಗುತ್ತವೆ. ಗಣಪತಿ ಹಾಗೂ ಮಾತ್ರಿಕೆಯರ ಅಗ್ರಪೂಜೆ ಜರಗುತ್ತದೆ. ನಂತರ ಪುಣ್ಯಾವಾಚನ ನಡೆಸುತ್ತಾರೆ. ಅಪವಿತ್ರವನ್ನು ಪವಿತ್ರಗೊಳಿಸಿ ಇಡೀ ದಿನ ಕಾರ್ಯವಿಧಿಗಳು ಸುಗಮುಗೊಳ್ಳುವಂತೆ ಪ್ರಾರ್ಥಿಸಲು ಇದನ್ನು ನಡೆಸಲಾಗುತ್ತದೆ. ಬಂಧು ಮಿತ್ರರು ಬಾಲಕನಿಗೆ ಹಾಗೂ ಅವನ ತಂದೆ ತಾಯಿಗಳಿಗೆ ಉಡುಗೊರೆಗಳನ್ನಿತ್ತು ಶುಭ ಹಾರೈಸುತ್ತಾರೆ. ಈ ನಂದಿ ಶ್ರಾದ್ಧದ ಕ್ರಿಯೆಯ ನಂತರ, ಇಪ್ಪತ್ತೇಳು ವೀಳ್ಯದೆಲೆ ಅಡಿಕೆಗಳನ್ನು ಒಂದು ಮೊರದಲ್ಲಿ ಸಾಲಾಗಿ ಜೋಡಿಸಿ, ಅರಸಿನ, ಕುಂಕುಮ ಹೂವುಗಳಿಂದ ಅಲಂಕರಿಸಲಾಗುತ್ತದೆ. ''**ಇದು ಶುಭ ತರುವ ಹಾಗೂ ಸಂತೋಷದ ಹಾರೈಕೆಯ ರಕ್ಷಕರನ್ನು ಆವಾಹಿಸುವ ಕ್ರಿಯೆಯಾಗಿದೆ.**'' ನಂತರ ಇದನ್ನು ದೇವರ ಕೋಣೆಯಲ್ಲಿ ತೆಗೆದಿರಿಸಲಾಗುತ್ತದೆ. ಬ್ರಾಹ್ಮಣರಿಗೆ, ಮುತ್ತೈದೆಯರಿಗೆ, ಬಂಧು–ಬಾಂಧವರಿಗೆ ಭೋಜನವೇರ್ಪಡಿಸಲಾಗಿರುತ್ತದೆ. ನಂತರ ಫಲತಾಂಬೂಲ ದಕ್ಷಿಣೆಗಳನ್ನು ನೀಡುತ್ತಾರೆ. ತಾಯಿ ಮತ್ತು ಬಾಲಕನನ್ನು ಒಟ್ಟಿಗೆ ನೀರೆರೆಯುವ ಶಾಸ್ತ್ರ ನಡೆಸುತ್ತಾರೆ. ನಂತರ ಸಾಂಕೇತಿಕವಾಗಿ ಬಾಲಕನಿಗೆ ಚೌಲ ಮಾಡಿಸಲಾಗುತ್ತದೆ. ನಂತರ ಮತ್ತೆ ಸ್ನಾನ ಮಾಡಿಸಲಾಗುತ್ತದೆ. ಹಾಗೂ ತಾಯಿ ಮತ್ತು ಮಗ ಕಡೆಯ ಬಾರಿಗೆ ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಾರೆ. ಬಾಲಕರ ಸಮವಯಸ್ಕರನ್ನು ಕರೆಸಿ ಅವರಿಗೂ ಸಹಪಂಕ್ತಿ ಭೋಜನ ನಡೆಸಿ, ದಕ್ಷಿಣೆ ನೀಡಲಾಗುತ್ತದೆ. ಬಾಲಕನಿಗೆ ಮತ್ತೆ ಸ್ನಾನ ಮಾಡಿಸಿ ಉಪನಯನಕ್ಕೆ ಸಿದ್ಧಪಡಿಸಲಾಗುತ್ತದೆ.

ಮುಹೂರ್ತ ಸಮೀಪಿಸುತ್ತಿದ್ದಂತೆ ಬಂಧು–ಬಾಂಧವರು, ಮಿತ್ರರು ಎಲ್ಲರೂ ಚಪ್ಪರದಡಿಯಲ್ಲಿ ನಿರ್ಮಿಸಿರುವ ಆಸನಗಳಲ್ಲಿ ವೀಕ್ಷಕರಾಗಿ ಕುಳಿತುಕೊಳ್ಳುತ್ತಾರೆ. ಬಾಲಕನ ತಂದೆ ಮಣೆಯೊಂದರ ಮೇಲೆ ಪೂರ್ವಾಭಿಮುಖವಾಗಿ ಕುಳಿತು, ಅವರ ಮುಂದೆ ಬಾಲಕನು ಪಶ್ಚಿಮಾಭಿಮುಖವಾಗಿ ನಿಲ್ಲುತ್ತಾನೆ. ಅವರಿಬ್ಬರ ನಡುವೆ ಪುರೋಹಿತರು ಅಂತರಪಟವನ್ನು (ಬಿಳಿ ಅಡ್ಡ ವಸ್ತ್ರ – ನಂದೀಮುಖದ ಬಿಳಿ ಬಟ್ಟೆ) ಹಿಡಿಯುತ್ತಾನೆ. ಬಾಲಕನ ಸಹೋದರಿಯು ಕಳಶ, ದೀಪ ಹಾಗೂ ಮಂಗಳಕರ ವಸ್ತುಗಳೊಡನೆ ಬಾಲಕನ ಹಿಂದೆ ನಿಲ್ಲುತ್ತಾಳೆ. ಪುರೋಹಿತರು ಮಂಗಳ ಸ್ತೋತ್ರಗಳನ್ನು ಪಠಿಸುತ್ತಾರೆ. ನೆರೆದಿರುವ ಜನ, ಬಾಲಕ ಹಾಗೂ ಅವನ ತಂದೆಯ ಮೇಲೆ ಅಕ್ಷತೆ ಹಾಕಿ ಹರಸುತ್ತಾರೆ. ನಿರ್ದಿಷ್ಟ ಶುಭ ಘಳಿಗೆಯ ಘಟಿಕಾ ಬಟ್ಟಲು ಮುಳುಗುವ ಸಮಯಕ್ಕೆ ಸರಿಯಾಗಿ ಮಂಗಳವಾದ್ಯ ಮೊಳಗುತ್ತದೆ. ಪುರೋಹಿತರು ಚಪ್ಪಾಳೆ ತಟ್ಟುತ್ತಾರೆ. ಅಂತರ್‌ಪಟ ಜಾರುತ್ತದೆ. ಬಾಲಕನು ತನ್ನ ತಂದೆಯ ಕಾಲಿಗೆ ಪ್ರವರ ಹೇಳಿ ನಮಿಸುತ್ತಾನೆ. ತಂದೆಯು ಅವನನ್ನು ಆದರದಿಂದ

ತನ್ನ ಬಲ ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಾನೆ. ಎಲ್ಲರಿಗೂ ಫಲ ತಾಂಬೂಲ ವಿತರಿಸಲಾಗುತ್ತದೆ. ಅಳಿದುಳಿದ ಕೆಲವು ಬಾಲಕನಿಗೆ ಉಡುಗೊರೆಗಳನ್ನು ನೀಡುತ್ತಾರೆ. ಮುಂದಿನ ಧಾರ್ಮಿಕ ಕ್ರಿಯೆಗಳು ಪ್ರಾರಂಭವಾಗುತ್ತವೆ. ಬಾಲಕನನ್ನು ಅವನ ತಂದೆಯ ಬಲಬದಿಗೆ ಕೂಡಿಸಲಾಗುತ್ತದೆ. ಅವರೆದುರಿಗೆ ಒಂದು ಹೋಮ ಕುಂಡ ಸ್ಥಾಪಿಸಲಾಗುತ್ತದೆ. ದರ್ಭೆಯನ್ನು ಹರಡುತ್ತಾರೆ. ಪುರೋಹಿತರು ಒಂದು ಹತ್ತಿಯ ಬಟ್ಟೆಗೆ ಎಣ್ಣೆ ಹಾಗೂ ಅರಸಿನ ಲೇಪಿಸಿ ಬಾಲಕನ ಸೊಂಟಕ್ಕೆ ಕಟ್ಟಿ ಅವನಿಗೆ ತೊಟ್ಟುಕೊಳ್ಳಲು ಬಟ್ಟೆಯ ಕೌಪೀನ ಒಂದನ್ನು ನೀಡುತ್ತಾರೆ. ನಂತರ ಒಂದು ಅರಸಿನದ ಲೇಪನದ ಪಾಣೀ ಪಂಚೆ ತೊಟ್ಟುಕೊಳ್ಳಲು ಹಾಗೂ ಒಂದು ಬಿಳಿ ಮೇಲ್ವಸ್ತ್ರವನ್ನು ನೀಡಲಾಗುತ್ತದೆ. ಬಾಲಕನು ಅವುಗಳನ್ನು ಧರಿಸಿಕೊಳ್ಳುತ್ತಾನೆ. ನಂತರ ಒಂದು ಬಟ್ಟೆಯ ಚೂರನ್ನು ಎಣ್ಣೆಯಲ್ಲಿ ಅದ್ದಿ, ಅರಸಿನ ಲೇಪಿಸಿ ಅದರೊಡನೆ ಒಂದು ಕೃಷ್ಣಾಜಿನದ ಚೂರನ್ನು ಕಟ್ಟಿ ಯಜ್ಞೋಪವೀತದ ರೀತಿಯಲ್ಲಿ ಬಾಲಕನ ಎಡ ಭುಜದಿಂದ ನೇತು ಹಾಕಲಾಗುತ್ತದೆ. ಬಾಲಕನಿಗೆ ಹೋಮ ಕುಂಡ ಹಾಗೂ ಕುಳಿತಿರುವ ತನ್ನ ತಂದೆಯ ಮಧ್ಯದಿಂದ ಚಲಿಸಿ, ಮೂರು ಬಾರಿ ಆಚಮನ ಮಾಡುವಂತೆ ತಿಳಿಸಲಾಗುತ್ತದೆ. ಇದನ್ನೆಲ್ಲಾ ಶಾಸ್ತ್ರೋಕ್ತ ಹಾಗೂ ಮಂತ್ರೋಕ್ತವಾಗಿ ಮಾಡಲಾಗುತ್ತದೆ. ಹೋಮದ ಅಗ್ನಿಗೆ ತುಪ್ಪ (ಆಜ್ಯ) ಎಳ್ಳು ಹಾಗೂ ಏಳು ಬಗೆಯ ಸಮಿತ್ತುಗಳನ್ನು ಅರ್ಪಿಸಲಾಗುತ್ತದೆ. ನಂತರ ಬಾಲಕನು ತನ್ನ ತಂದೆಗೆ ಹಾಗೂ ಪುರೋಹಿತರಿಗೆ ನಮಸ್ಕರಿಸಿ ತನಗೆ ಉಪನಯನ ನಡೆಸುವಂತೆ ಕೋರುತ್ತಾನೆ. ಇದನ್ನು ಮನ್ನಿಸಿ ಪುರೋಹಿತರು ಬಾಲಕನಿಗೆ ಯಜ್ಞೋಪವೀತವನ್ನು ನೀಡಿ, ಕೈಗೆ ದಂಡವನ್ನು ಹಾಗೂ ಮುತ್ತುಗದ ಕೊಂಬೆಯೊಂದನ್ನು ನೀಡಿ, ಅವನಿಗೆ ಬ್ರಹ್ಮಚರ್ಯಾಶ್ರಮಕ್ಕೆ ಆಹ್ವಾನಿಸಿ ಅದರ ಜ್ಞಾನ ಪ್ರಾಪ್ತಿಗೆ ಅಗತ್ಯವಾದ ಶ್ಲೋಕಗಳನ್ನು ಹೇಳಿಕೊಡುತ್ತಾರೆ. ಬಾಲಕನನ್ನು ಹೊರಗೆ ಕರೆದು ತಂದು ಸೂರ್ಯದೇವನ ದರ್ಶನ ಮಾಡಿಸಿ 'ಗಾಯಿತ್ರಿ' ಮಂತ್ರವನ್ನು ಬೋಧಿಸುತ್ತಾರೆ. ನಂತರ ಹೋಮಕ್ಕೆ ಪೂರ್ಣಾಹುತಿ ಅರ್ಪಿಸಿ ಅಗ್ನಿ, ಇಂದ್ರ, ವರುಣ, ವಾಯು ಹಾಗೂ ಸೂರ್ಯನನ್ನು 'ವಟು'ವಿಗೆ ಬ್ರಹ್ಮಶಕ್ತಿ ಹಾಗೂ ಬ್ರಹ್ಮಜ್ಞಾನ ದೊರಕುವಂತೆ ಪ್ರಾರ್ಥಿಸುತ್ತಾರೆ.

ಉಪನಯನದ ನಂತರದ ೧೮ ವರ್ಷ ವಟುವಿನ ಜ್ಞಾನಾರ್ಜನೆಯ ಕಾಲ. ಅದು ಬ್ರಹ್ಮಚರ್ಯೆ ಪಾಲನೆಯ ಸಮಯವೂ ಹೌದು. ೧೨ ವರ್ಷದ ನಂತರ 'ಸಮಾವರ್ತನ' ವಾಗುತ್ತದೆ. ಆಗ 'ವಟು' ತಾನು ಬ್ರಹ್ಮಚರ್ಯದಿಂದ ಸನ್ಯಾಸಕ್ಕೆ ತೆರಳುವುದಾಗಿ ಪಾಲಿಸುತ್ತಾನೆ. ಆ ಸಮಯಕ್ಕೆ ವಟುವಿನ ಸೋದರಮಾವ ಬಂದು ಸನ್ಯಾಸಕ್ಕೆ ಹೋಗುವ ಅಗತ್ಯವಿಲ್ಲವೆಂದು, ಅವನನ್ನು ಸಂಸಾರಸ್ಥನನ್ನಾಗಿ ಮಾಡಲು ಸೂಕ್ತ ಕನ್ಯೆಯೊಂದಿಗೆ ವಿವಾಹ ಮಾಡುವುದಾಗಿ ನಂಬಿಸಿ, 'ಕಾಶೀಯಾತ್ರೆ'ಯ ಆಚರಣೆಯಲ್ಲಿ ಅವನನ್ನು ವಿವಾಹ ವಿಧಿಗೆ ಎಳೆತರುತ್ತಾನೆ.

ಇತ್ತೀಚಿನ ದಿನಗಳಲ್ಲಿ ಕ್ಷತ್ರಿಯ ಲಾಡರಲ್ಲಿ ವಿವಾಹದ ಹಿಂದಿನ ದಿನ ಅಥವಾ ವಿವಾಹದ ದಿನವೇ ವರನಿಗೆ 'ಮುಂಜಿ' ಮಾಡುವ ಪದ್ಧತಿ ಅನುಸರಿಸಲಾಗುತ್ತಿದೆ. ನಗರೀಕರಣ

ಹಾಗೂ ಇಂದಿನ ಕೈಗಾರಿಕೀರಣದ ದಿನಗಳಲ್ಲಿ ಇಂತಹ ಹೊಂದಾಣಿಕೆ ಅನಿವಾರ್ಯವೆನಿಸಿದೆ.

**ಋತುಮತಿ :**

ಹೆಣ್ಣು ಋತುಮತಿಯಾದಾಗ ಅವಳಿಗೆ ವಿಶೇಷ ಮನ್ನಣೆ ನೀಡಲಾಗುತ್ತದೆ. ಸ್ತ್ರೀ ಜನ್ಮದ ಸಾರ್ಥಕತೆಯೇ ಬಾಲಕಿಯಾಗಿ, ನಂತರ ಹೆಣ್ಣಾಗಿ, ವಿವಾಹಿತ ಸ್ತ್ರೀಯೆನಿಸಿ, ತಾಯಾಗಿ ಸಂತತಿಯನ್ನು ಬೆಳೆಸುವಲ್ಲಿ ಅವಳ ಪಾತ್ರ ಅತ್ಯಂತ ಹಿರಿದು. ಋತುವಾದ ಮೊದಲ ಕ್ಷಣದಲ್ಲೇ ಹಿರಿಯ ಹೆಂಗಸರು ಆ ಸಮಯವನ್ನು ದಾಖಲು ಮಾಡಿಕೊಳ್ಳುತ್ತಾರೆ. ಋತುವಾದ ಘಳಿಗೆ, ನಕ್ಷತ್ರಗಳು ಅವಳ ವಿವಾಹದಲ್ಲಿ ಮುಖ್ಯ ಪಾತ್ರವಹಿಸುತ್ತವೆ.

ಋತುಮತಿಯಾದ ಐದು ದಿನಗಳು ಆ ಹುಡುಗಿಯನ್ನು ಪ್ರತ್ಯೇಕವಾಗಿರಿಸಲಾಗುತ್ತದೆ. ಕೆಟ್ಟ ಶಕ್ತಿಗಳು ಅವಳ ಬಳಿ ಪ್ರವೇಶ ಮಾಡದಂತೆ ಪೊರಕೆ, ಎಕ್ಕಡ ಮುಂತಾದವನ್ನು ಅವಳು ಮಲಗುವ ಚಾಪೆಯಡಿ ಇಟ್ಟಿರಲಾಗುತ್ತದೆ. ಇಡೀ ಗೋತ್ರ ದಾಯಾದಿಗಳಿಗೆ ಹದಿನಾರು ದಿನಗಳ ಪುರುಡು (ಮೈಲಿಗೆ ಆಚರಣೆಯಲ್ಲಿರುತ್ತದೆ. ಆ ದಿನಗಳಲ್ಲಿ ಮನೆಯಲ್ಲಿ ದೇಶದ ಪೂಜೆ ಇನ್ನಿತರ ಮಂಗಳ ಕಾರ್ಯಗಳನ್ನು ನಡೆಸುವುದಿಲ್ಲ. ಹುಡುಗಿಗೆ ಎಳ್ಳಿನ ಚಿಗಳಿ ಉಂಡೆಗಳನ್ನು ಮಾಡಿ ತಿನ್ನಲು ನೀಡಲಾಗುತ್ತದೆ. ಮೈಲಿಗೆ ಕಳೆದ ನಂತರ ೫ ಜನ ಮುತ್ತೈದೆಯರು ಹುಡುಗಿಗೆ ನೀರೆರೆದು, ಸಿಂಗರಿಸಿ ಹಸೆಮಣೆಯ ಮೇಲೆ ಕೂಡಿಸುತ್ತಾರೆ. ಆರತಿ ಮಾಡುತ್ತಾರೆ, ನೆಂಟರಿಷ್ಟರು, ಬಂದು ಬಾಂಧವರುಗಳಿಗೆ ಭೋಜನವೇರ್ಪಡಿಸಲಾಗುತ್ತದೆ. ಹಣ್ಣುಗಳು, ತಾಂಬೂಲ, ರವಿಕೆ ಖಣಗಳಿಂದ ಹುಡುಗಿಗೆ ಮಡಿಲು ತುಂಬುತ್ತಾರೆ. ಮನೆಗೆ ಪುರೋಹಿತರಿಂದ ಪುಣ್ಯಾಹ ಮಾಡಿಸಲಾಗುತ್ತದೆ. ಮೈನೆರೆದ ಹೆಣ್ಣು ಹದಿನಾರು ದಿನಗಳು ತುಂಬುವವರೆಗೆ ದೇವಸ್ಥಾನ ಇತ್ಯಾದಿ ಧಾರ್ಮಿಕ ಕೇಂದ್ರಗಳಿಗೆ ಹಾಗೂ ಶುಭ ಶೋಭನಾದಿಗಳಲ್ಲಿ ಭಾಗವಹಿಸುವುದು ನಿಷಿದ್ಧ. ಬಾಲ್ಯ ವಿವಾಹ ಪದ್ಧತಿ ಈಗ ಲಾಡರಲ್ಲಿ ಆಚರಣೆಯಲ್ಲಿಲ್ಲದಿರುವ ಪ್ರಯುಕ್ತ ಹೆಚ್ಚಾಗಿ ಈ ಶಾಸ್ತ್ರ ಹುಡುಗಿಯ ತೌರುಮನೆಯಲ್ಲೇ ನಡೆಯುತ್ತದೆ.

**ಶಿಕ್ಷಣ :**

ವಿದ್ಯಾಭ್ಯಾಸವು ಜೀವನದ ಅಂತರಾಳವನ್ನು ಹೊಕ್ಕು ನಿತ್ಯ ಆಚರಣೆಗೆ ಅವಶ್ಯಕವಾದ ಸಿದ್ಧಾಂತವನ್ನು ಕಲಿಸುತ್ತದೆ. ವಿದ್ಯೆ ಕಲಿತವನ ಹಾಗೂ ಕಲಿಯದವನ ನಡುವೆ ಅನೇಕ ವ್ಯತ್ಯಾಸಗಳನ್ನು ಕಾಣಬಹುದು. ಹಾಗೆಂದ ಮಾತ್ರಕ್ಕೆ ವಿದ್ಯೆ ಕಲಿಯದವರೆಲ್ಲ ದಡ್ಡರು, ನಿಷ್ಪ್ರಯೋಜಕರೆಂದು ಕರೆಯುವಂತಿಲ್ಲ. ವಿದ್ಯೆಯು ವ್ಯಕ್ತಿಗೆ ಒಂದು ಸಂಸ್ಕಾರವನ್ನು ನೀಡಿ ಅವನಲ್ಲಿ ವಿನಯ, ವಿವೇಚನೆ ಹಾಗೂ ನಾಲ್ಕು ಜನರಲ್ಲಿ ಹೊಂದಿಕೊಂಡು ಹೋಗುವ ಗುಣಗಳನ್ನು ಬೆಳೆಸಿದರೆ, ವಿದ್ಯೆ ಕಲಿತದ್ದಕ್ಕೆ ಸಾರ್ಥಕವಾಗುತ್ತದೆ. ವ್ಯಕ್ತಿಯು ಸಮಾಜ ಸೇವೆಗಾಗಿ ತನ್ನ ಪ್ರಾರಂಭದ ದಿನಗಳಲ್ಲಿ ನಿರ್ದಿಷ್ಟವಾದ ಶಿಕ್ಷಣಾಭ್ಯಾಸವನ್ನು ನಡೆಸಲೇಬೇಕು.

ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಣಗಳಲ್ಲಿ ಜನಿಸಿದ ಬಾಲಕರೆಲ್ಲರೂ ಉಪನಯನ ಸಂಸ್ಕಾರದ ನಂತರ ವಿದ್ಯೆ ಕಲಿಯುವುದು ಅವಶ್ಯಕವಾಗಿತ್ತು. ಈ ಸಂಸ್ಕಾರಗಳನ್ನು ನೆರವೇರಿಸಿದರೆ ಆಯಾ ಕಾರ್ಯಗಳಿಗೆ ಅವಶ್ಯವೆನಿಸಿದ ಗೌರವ, ಗಂಭೀರತೆ ದೊರೆಯುತ್ತಿತ್ತು. ವಿದ್ಯೆಯ ನಿಜವಾದ ಫಲ ಸಂಸ್ಕೃತಿ. ಆದ್ದರಿಂದ, ವಿನಯವುಂಟಾಗಿ ಮನಸ್ಸು ಮೃದುವಾಗಿ ಪರರ ಕಷ್ಟದಲ್ಲಿ ಮರುಗಿ, ಕರಗಿ ಸಹಾನುಭೂತಿ ಕೋರುವಂತಾಗಬೇಕು.

ಲಾಡರಲ್ಲಿ ಮೂಲತಃ ವ್ಯಾಪಾರ ವೃತ್ತಿ ಅಲ್ಲದೆ ಹೆಚ್ಚಾಗಿ ಅಲೆಮಾರಿಗಳಾಗಿ ಪ್ರದೇಶದಿಂದ ಪ್ರದೇಶಗಳಿಗೆ ವಲಸೆ ಹೋಗಲಾರಂಭಿಸಿದುದರಿಂದ, ಅವರ ಮಕ್ಕಳಿಗೆ ನಿಯಮಿತ ವಿದ್ಯಾಭ್ಯಾಸ ದೊರೆಯುವುದು ಕಷ್ಟವಾಯಿತು. ಅಷ್ಟಾದರೂ, ಅವರು ಹೆಚ್ಚಿನ ಸಮಯದಲ್ಲಿ ಅಲೆಮಾರಿ ಜೀವನ ಸಾಗಿಸುವಾಗ ಬದುಕಿನ ಪ್ರಾಪಂಚಿಕ ಸತ್ಯಗಳ, ಕಷ್ಟನಿಷ್ಠುರಗಳ ಅರಿವು ತಾನಾಗಿ ಅವರಿಗೆ ಉಂಟಾಗಿದೆ.

**ಸಾವು :**

ಸಾಮಾನ್ಯವಾಗಿ ಹಿಂದೂಗಳಲ್ಲಿರುವ ನಂಬಿಕೆ ***''ಜಾತಸ್ಯ ಮರಣಂಧ್ರುವಂ.''*** ಹುಟ್ಟಿನಂತೆಯೇ ಸಾವು ಸಹ ನಿಶ್ಚಿತ. ಸಾವಿನ ನಂತರದ ಪ್ರಪಂಚವನ್ನು ಯಾರೂ ಅರಿಯರು. ಸಾವು ಸಮೀಪಿಸುತ್ತಿದ್ದಂತೆ ಮನುಷ್ಯ ಭಗವಂತನ ನಾಮಸ್ಮರಣೆ ಮಾಡುತ್ತಾನೆ. ಅವನು ಪ್ರಜ್ಞಾಹೀನವಾಗಿದ್ದರೆ ಅವನ ಬಂಧುಗಳು ಅವನಿಗಾಗಿ ದೇವರ ಸ್ಮರಣೆ ಮಾಡುತ್ತಾರೆ. ಸಾಯುವ ಹೊತ್ತಿನಲ್ಲಿ ಅವನ ಹೆಂಡತಿ ಅಥವಾ ಮಗ, ಅವನ ತಲೆಯನ್ನು ತಮ್ಮ ತೊಡೆಯ ಮೇಲಿಟ್ಟುಕೊಂಡು ಬಾಯಿಗೆ ಗಂಗಾಜಲ ಹಾಗೂ ತುಳಸೀ ಎಲೆಯನ್ನು ಹಾಕುತ್ತಾರೆ. ಕೆಲವರಲ್ಲಿ ಸಾಯುವವನ ಬಾಯಿಗೆ ಚಿನ್ನ ಅಥವಾ ಮುತ್ತನ್ನು ಹಾಕುವ ಪದ್ಧತಿಯೂ ಉಂಟು. ವ್ಯಕ್ತಿಯ ಸಾವಿನ ನಂತರ, ಸುದ್ದಿಯನ್ನು ಎಲ್ಲರಿಗೂ ತಿಳಿಸಿ, ಬಂಧು–ಬಾಂಧವರು ಸೇರುತ್ತಾರೆ. ಕೆಲವೊಮ್ಮೆ ಅಂತಿಮ ಸಂಸ್ಕಾರವನ್ನು ತೀರಾ ಹತ್ತಿರದ ಸಂಬಂಧಿಗಳು ಬರುವವರೆಗೆ ಇಪ್ಪನ್ನಾಲ್ಕು ಗಂಟೆಗಳ ಕಾಲ ಮುಂದಕ್ಕೆ ಹಾಕುವುದುಂಟು.

ಬಂಧುಗಳೆಲ್ಲ ಬಂದ ನಂತರ ಅಂತಿಮ ಯಾತ್ರೆಗಾಗಿ ಸಿದ್ಧತೆಗಳನ್ನು ನಡೆಸಲಾಗುತ್ತದೆ. ಬೊಂಬು–ಗರಿಗಳಿಂದ ಚಟ್ಟವನ್ನು ನಿರ್ಮಿಸಿ, ಶವಕ್ಕೆ ಸ್ನಾನ ಮಾಡಿಸಿ, ಅದರ ಮೇಲೆ ಮಲಗಿಸಲಾಗುತ್ತದೆ. ಕೆಲವರಲ್ಲಿ ಶವವನ್ನು ಕೂಡಿಸುವುದೂ ಉಂಟು. ಶವಯಾತ್ರೆ ಹೊರಟಾಗ ಮಗನಾದವನು ಅಗ್ನಿ ಹಾಕಿದ ಮಡಕೆಯನ್ನು ತ್ರಿಕೋಣಾಕಾರದಲ್ಲಿ ಕಟ್ಟಿದ ಬೊಂಬಿನ ಜೋತಾಡುವ ನಿಲುವಿನ ಮೇಲಿಟ್ಟುಕೊಂಡು ಚಟ್ಟವನ್ನು ಹೊತ್ತುಕೊಂಡು ಮೆರವಣಿಗೆಯಲ್ಲಿ ಬಂಧುಗಳೊಡನೆ ಸ್ಮಶಾನಕ್ಕೆ ಸಾಗುತ್ತಾರೆ. ಸ್ಮಶಾನದಲ್ಲಿ ಕಟ್ಟಿಗೆಗಳಿಂದ ಸೇರಿಸಿದ ಚಿತೆಯನ್ನು ಸಿದ್ಧಪಡಿಸಲಾಗುತ್ತದೆ. ಸೌದೆ, ಬೆರಣೆಗಳಿಂದ ಸಿದ್ಧಪಡಿಸಿದ ಚಿತೆಯ ಮೇಲೆ ಮಲಗಿಸಿ, ಗಂಧದ ಕೊರಡನ್ನಿಟ್ಟು, ಸಿದ್ಧಪಡಿಸಲಾಗುತ್ತದೆ. ಎಲ್ಲವೂ ಪುರೋಹಿತರೊಬ್ಬರ ಸಮ್ಮುಖದಲ್ಲಿ ಶಾಸ್ತ್ರೋಕ್ತ ಹಾಗೂ ಮಂತ್ರೋಕ್ತವಾಗಿ ನಡೆಯುತ್ತದೆ.

ಪುರೋಹಿತರ ನೆರವಿನಿಂದ ಮಗನಾದವನು ಚಿತೆಗೆ ಅಗ್ನಿ ಸ್ಪರ್ಶ ಮಾಡುತ್ತಾನೆ. ಚಿತೆಯ ಸುತ್ತ ನೀರು ತುಂಬಿದ ಮಣ್ಣಿನ ಕೊಡವನ್ನು ಹೊತ್ತು ಮೂರು ಬಾರಿ ಪ್ರದಕ್ಷಿಣೆಯ ನಂತರ, ಮಡಕೆಗೆ ಒಂದರ ಕೆಳಗೊಂದರಂತೆ ಮೂರು ತೂತುಗಳನ್ನು ಕಲ್ಲಿನಿಂದ ಮಾಡಲಾಗುತ್ತದೆ. ಕೊನೆಯ ಪ್ರದಕ್ಷಿಣೆಯಲ್ಲಿ ಹರವಿಯನ್ನು ಕೆಳಗೆ ಹಾಕಿ ಒಡೆಯಲ್ಪಡುತ್ತದೆ. ಎಲ್ಲರೂ ದುಃಖಿತಪ್ತರಾಗಿ ಶವದ ಬುರುಡೆ ಸಿಡಿಯುವವರೆಗೆ ಸ್ಮಶಾನದಲ್ಲೇ ಕಾಯುತ್ತಾರೆ. ಮಡಕೆ ತೂತು ಮಾಡಲು ಬಳಸಿದ ಕಲ್ಲನ್ನು, ಉಟ್ಟಿದ್ದ ಬಿಳಿವಸ್ತ್ರದಲ್ಲಿ ಜೋಪಾನವಾಗಿ ಕಟ್ಟಿಡಲಾಗುತ್ತದೆ. ಹತ್ತು ದಿನಗಳ ಕಾರ್ಯಗಳು ಮುಗಿಯುವವರೆಗೆ ಅದನ್ನು ರಕ್ಷಿಸಿಡಲಾಗುತ್ತದೆ. ಸತ್ತ ಒಂಭತ್ತನೇ ದಿನದಂದು ಬಂಧುಮಿತ್ರರು ಸತ್ತವನಿಗೆ 'ಧರ್ಮೋದಕ' ನೀಡುತ್ತಾರೆ. ಅಲ್ಲಿಯವರೆಗೆ ಆ ಕಲ್ಲನ್ನು ಸುರಕ್ಷಿತವಾಗಿಟ್ಟಿರುತ್ತಾರೆ. ನಂತರ ವಿಸರ್ಜಿಸಲಾಗುತ್ತದೆ.

ಶವಸಂಸ್ಕಾರದ ನಂತರ ಬಂಧುಗಳು, ಸತ್ತವನ ಮನೆಗೆ ಧಾವಿಸುತ್ತಾರೆ. ಸತ್ತ ಸ್ಥಳದಲ್ಲಿ ಒಂದು ದೀಪ, ಒಂದು ಉಂಡೆ ಅನ್ನ ಹಾಗೂ ಒಂದು ಬಟ್ಟಲು ನೀರನ್ನಿಟ್ಟು ಅದರ ಮೇಲೆ ಮೊರ ಅಥವಾ ಬಿದಿರಿನ ಬುಟ್ಟಿ ಹೊದಿಸಿರಲಾಗುತ್ತದೆ. ಬಂಧುಗಳು ಸ್ವಲ್ಪ ಗರಿಕೆ ಹುಲ್ಲನ್ನು ತಂದು ಬುಟ್ಟಿಯ ಮೇಲೆ ಹಾಕಿ ನಮಸ್ಕರಿಸಿ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗುತ್ತಾರೆ.

ಮೃತನು ಬ್ರಾಹ್ಮಣ ಅಥವಾ ಕ್ಷತ್ರಿಯ ಕುಲದವನಾಗಿದ್ದರೆ, ಅವನ ಅಪರ ಕರ್ಮ ಕ್ರಿಯೆಗಳು ವೈದಿಕ ರೀತಿಯಲ್ಲಿ ನಡೆಯುತ್ತವೆ. ಅದನ್ನು 'ಮಂತ್ರಾಗ್ನಿ' ಎನ್ನುತ್ತಾರೆ. ಇತರ ಜಾತಿಗಳಲ್ಲಿ ಅದು ಇದ್ದರೂ ಸಹ ಸರಳ ಕ್ರಿಯೆಯಾಗಿರುತ್ತದೆ. ಮೃತ್ಯು ಸಂಭವಿಸಿದ ಮೂರನೇ ದಿನ ಮೃತನ ಮಗನು, ಬಂಧುಗಳೊಡಗೂಡಿ, ಸ್ಮಶಾನದಲ್ಲಿ ಅಂತ್ಯಕ್ರಿಯೆ ನಡೆದ ಸ್ಥಳದಲ್ಲಿನ ಸತ್ತವನ ಅವಶೇಷಗಳಾದ ಬೂದಿ, ಮೂಳೆಗಳನ್ನು ಸಂಚಯಿಸಿ, ಒಂದು ಹೊಸ ಮಡಕೆಯಲ್ಲಿ ಅವುಗಳನ್ನು ತುಂಬಿಕೊಂಡು ಪವಿತ್ರ ನದಿ ತೀರ ಅಥವಾ ಸಂಗಮದಲ್ಲಿ ಕ್ರಿಯಾ ವಿಧಿಗಳೊಡನೆ ಶಾಸ್ತ್ರೋಕ್ತವಾಗಿ ವಿಸರ್ಜಿಸುತ್ತಾರೆ. ಸೂತಕದ ಹತ್ತನೇ ದಿನ ಕುಟುಂಬದ ಎಲ್ಲರೂ ತಲೆಗೆ ಸ್ನಾನ ಮಾಡಿ, ಬಟ್ಟೆ ಬರೆಗಳನ್ನೆಲ್ಲಾ ಒಗೆದು ಶುಚಿರ್ಭೂತರಾಗುತ್ತಾರೆ. ಸತ್ತವನ ಮಗನಾದವನು ತನ್ನ ತಲೆ ಹಾಗೂ ಮೀಸೆ–ಗಡ್ಡಗಳನ್ನು ನುಣ್ಣಗೆ ವಪನ ಮಾಡಿಸಿಕೊಳ್ಳುತ್ತಾನೆ. ನಂತರ, ಸಂರಕ್ಷಿಸಿಟ್ಟಿದ್ದಕಲ್ಲು 'ಅಶ್ಮಾ' ವನ್ನು ತಂದು ಸಗಣಿಯಿಂದ ಶುಚಿಗೊಳಿಸಿ, ಅದನ್ನು ಮರಳಿನ ಪೀಠದಲ್ಲಿ ಸ್ಥಾಪಿಸುತ್ತಾರೆ. ಅದಕ್ಕೆ ಅನ್ನ ಮಾಡಿ ನೈವೇದ್ಯ ಮಾಡುತ್ತಾರೆ. ಪುರೋಹಿತರಿಗೆ ಸಂಭಾವನೆ ನೀಡಲಾಗುತ್ತದೆ. ಹಣ ಉಡುಗೋರೆಗಳನ್ನಿತ್ತು ಸಂಪ್ರೀತಗೊಳಿಸಲಾಗುತ್ತದೆ. ಸತ್ತವನ ಆತ್ಮಕ್ಕೆ ಶಾಂತಿ ಸಿಗಲೆಂದು ಇದನ್ನೆಲ್ಲಾ ಮಾಡಲಾಗುತ್ತದೆ. ಪಿತೃವಿಗೆ ಅಡಿಗೆ ಮಾಡಿ 'ಎಡೆ' ಇಡಲಾಗುತ್ತದೆ. ಕಾಗೆಯು 'ವಾಯಸ' ರೂಪದಲ್ಲಿ ಬಂದು ಅದನ್ನು ತಿನ್ನಬೇಕೆಂಬ ನಂಬಿಕೆ ಉಂಟು. ಹಾಗಾಗದಿದ್ದಲ್ಲಿ ಸತ್ತವನ ವಯಸ್ಸಿನ ಯಾವುದೋ ಅಭಿಲಾಷೆ ಹಾಗೆಯೇ ಉಳಿದು ಹೋಗಿರಬಹುದೆಂಬ ಶಂಕೆ ಹುಟ್ಟಿ, ಅದೇನೆಂಬುದರ ಜಿಜ್ಞಾಸೆ ಪ್ರಾರಂಭವಾಗುತ್ತದೆ. ಕಡೆಗೆ, ಅದನ್ನು ನೆರವೇರಿಸುವುದಾಗಿ ಮಾತು ನೀಡುತ್ತಾರೆ. ನಂತರ, ವಾಯಸ ಆಹಾರ ಸ್ವೀಕರಿಸಬಹುದು.

ಹಾಗಾಗದಿದ್ದಲ್ಲಿ, ಅದಕ್ಕಾಗಿ ಇಟ್ಟ 'ಎಡೆ'ಯನ್ನು ಚಲಚರಗಳಿಗೆ ಮತ್ತು ಹಸುವಿಗೆ ತಿನ್ನಲು ನೀಡಲಾಗುತ್ತದೆ. ಈ ಕ್ರಿಯಾ ವಿಧಾನಗಳೆಲ್ಲಾ ಮುಗಿದ ನಂತರ, ಮನೆಗೆ ಹಿಂತಿರುಗಲಾಗುತ್ತದೆ.

ಹೊನ್ನೊಂದನೇ ದಿನ ಪುರೋಹಿತರಿಂದ ಪುಣ್ಯಾವಾಹನೆ ಮಾಡಿಸಿ ಮನೆಗೆಲ್ಲಾ ಪವಿತ್ರ ಜಲವನ್ನು ಚಿಮುಕಿಸಲಾಗುತ್ತದೆ. ಮನೆಯ ಎಲ್ಲ 'ಪಂಚಗವ್ಯ' ಸ್ವೀಕರಿಸುತ್ತಾರೆ. ಪಂಚಗವ್ಯವು ಹಸುವಿನ ಉತ್ಪಾದನೆಗಳಾದ ಹಾಲು, ಮೊಸರು, ಗಂಜಲ, ತುಪ್ಪ ಹಾಗೂ ಸಗಣಿಗಳನ್ನು ಒಳಗೊಂಡಿರುತ್ತದೆ. ಇದು ಒಂದು ಶುದ್ಧಿಕರಣ ಕ್ರಿಯೆ. ಗಂಡಸರೆಲ್ಲಾ ತಮ್ಮ ಯಜ್ಞೋಪವೀತಗಳನ್ನು ಬದಲಾಯಿಸಿಕೊಳ್ಳುತ್ತಾರೆ.

ಹನ್ನೆರಡನೇ ದಿನ ***'ಸಪಿಂಡ ಶ್ರಾದ್ಧ'*** ನಡೆಯುತ್ತದೆ. ಇದರಿಂದ ಸತ್ತವನು ತನ್ನ ಮೂರು ತಲೆಮಾರಿನ ತಂದೆ, ತಾತ, ಮುತ್ತಾತಂದಿರ ಜೊತೆ ಸ್ಥಾನ ಗಳಿಸುತ್ತಾನೆ.

ಹದಿಮೂರನೇ ದಿನ ಶ್ರಾದ್ಧ ಅಥವಾ ವೈಕುಂಠ ಸಮಾರಾಧನೆ ನಡೆಯುತ್ತದೆ. ಬಂಧುಗಳು, ಮಿತ್ರರು, ಹಿತೈಷಿಗಳೆಲ್ಲರನ್ನೂ ಆಹ್ವಾನಿಸಿ ಭೋಜನ ಏರ್ಪಡಿಸಲಾಗುತ್ತದೆ. ಪ್ರತಿ ವರ್ಷ ವ್ಯಕ್ತಿ ಸತ್ತ ದಿನದಂದು ಶ್ರಾದ್ಧ ಮಾಡಲಾಗುತ್ತದೆ.

ಇತ್ತೀಚಿನ ಆಧುನಿಕ ದಿನಗಳಲ್ಲಿ, ಶ್ರಾದ್ಧ ಕ್ರಿಯೆ ನಡೆಸುವ ಬದಲು ಆ ದಿನದಂದು ದಾನ, ಧರ್ಮಗಳನ್ನು ಮಾಡಲಾಗುತ್ತದೆ. ಮತ್ತೆ ಕೆಲವರು ಸತ್ತವರ ಹೆಸರಿನಲ್ಲಿ ಬಡ ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್, ದತ್ತಿ ಹಾಗೂ ಸ್ಮಾರಕವಾಗಿ ಚರ್ಚಾ ಸ್ಪರ್ಧೆ, ಮುಂತಾದವುಗಳಿಗೆ ಪುದುವಟ್ಟು ಹಾಗೂ ಧರ್ಮಾರ್ಥವಾಗಿ ನಿಧಿ ಸ್ಥಾಪಿಸುವುದೂ ಉಂಟು. ಮೃತರ ಹೆಸರಿನಲ್ಲಿ ಸಾಮೂಹಿಕ ಅನ್ನದಾನ ಏರ್ಪಡಿಸುವುದು ಸಾಮಾನ್ಯ ಸಂಗತಿಯಾಗಿದೆ.

**ಪಿತೃಪಕ್ಷ :**

ಪಿತೃ ಪಕ್ಷ ಅಥವಾ ಎಳ್ಳಮಾವಾಸ್ಯೆಯಂದು 'ಹಿರಿಯರ ಹಬ್ಬ' ಆಚರಿಸಲಾಗುತ್ತದೆ. ಪಿತೃ ಪಕ್ಷವು ಆಶ್ವಯುಜಮಾಸ ಪ್ರಾರಂಭದ ನವರಾತ್ರಿಯ ಮೊದಲ ಅಮಾವಾಸ್ಯೆಯಂದು ಆಚರಿಸಲಾಗುತ್ತದೆ. ವಾಸ್ತವವಾಗಿ ಸತ್ತ ಹಿರಿಯರನ್ನು ನೆನಪು ಮಾಡಿಕೊಳ್ಳಲು ಆಚರಿಸುವ ಹಬ್ಬವಿದು. ಹಿಂದುಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಈ ಹಬ್ಬವನ್ನು 'ಮಾಳಕೊ ಅವೌಸ್' ಅಥವಾ 'ಪಿತೃಪಕ್ಷ' ಎಂದು ಕರೆಯುತ್ತಾರೆ.

ಎಲ್ಲರಂತೆ ಲಾಡರಲ್ಲಿಯೂ ಈ ಪಿತೃಪಕ್ಷ ಆಚರಣೆಗೆ ಹೆಚ್ಚಿನ ಮನ್ನಣೆಯಿದೆ. ಆ ದಿನ 'ತಿಲತರ್ಪಣ' ನೀಡುವವರೆಗೂ ಎಲ್ಲರೂ ಉಪವಾಸವಿರುತ್ತಾರೆ. ಆ ದಿನ ಮನೆಯಲ್ಲಿ ಅಥವಾ ನದಿ ತೀರದಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆಯಿಸಿ ಅವರ ಮೂಲಕ ತಮ್ಮ ಕುಲದ, ಸ್ವರ್ಗೀಯ ಹಿರಿಯರಿಗೆ 'ಪಿತೃತರ್ಪಣ' ನೀಡುತ್ತಾರೆ. ಕೆಲವರಲ್ಲಿ ಪಿಂಡ ಪ್ರಧಾನ ಮಾಡುವ ಪದ್ಧತಿಯೂ ಇದೆ. ತಮ್ಮಲ್ಲಿನ ಮೃತರ ಗೋತ್ರದಲ್ಲಿನ ಹಿರಿಯರಿಗೆ, ನಂತರ ಹತ್ತಿರದ ರಕ್ತಸಂಬಂಧಿಗಳಿಗೆ ತರ್ಪಣ ನೀಡಲಾಗುತ್ತದೆ. ಹಿರಿಯರ ಪೂಜೆಯ ನಂತರ

'ಎಡೆ' ಸಲ್ಲಿಸುವ ಕಾರ್ಯಕ್ರಮ ಜರುಗುತ್ತದೆ. ಸಂಪ್ರದಾಯದಂತೆ ವಡೆ, ಪಾಯಸ, ಹೋಳಿಗೆ, ಚಿತ್ರಾನ್ನ ಇತ್ಯಾದಿಗಳನ್ನು ಮಡಿಯಲ್ಲಿ ತಯಾರಿಸಿ, ಹಿರಿಯರಿಗೆ ಎಡೆಯಿಟ್ಟು ಪೂಜಿಸಿ, ಅದನ್ನು ಮನೆಯ ಮಾಳಿಗೆಯ ಮೇಲಿಟ್ಟು 'ವಾಯಸ' ಎಂದರೆ ಕಾಗೆಯನ್ನು ಆಹ್ವಾನಿಸುತ್ತಾರೆ. ಅದು ಎಡೆಯನ್ನು ಮುಟ್ಟಿದ ನಂತರ ಮನೆಯಲ್ಲಿ ಎಲ್ಲರ ಭೋಜನವಾಗುತ್ತದೆ. ತಮ್ಮ ಪೂರ್ವಜರನ್ನು ನೆನೆಯಲು ಇದು ಒಂದ ಮುಖ್ಯ ಸಂದರ್ಭವೆಂದು ಭಾವಿಸಲಾಗುತ್ತದೆ.

**ಕಸಳ ಪೂಜೆ :**

ಲಾಡರಲ್ಲಿ ಈ ಆಚರಣೆಯೂ ಮುಖ್ಯ ಪಾತ್ರವಹಿಸುತ್ತದೆ. ಮನೆಯಲ್ಲಿ ಯಾವುದೇ ಶುಭ ಕಾರ್ಯ ನಡೆದರೂ ಅದಕ್ಕೆ ಮುಂಚೆ ಮನೆಯಲ್ಲಿ 'ಕಳಸಪೂಜೆ' ಅಥವಾ 'ಮುತ್ತೈದೆಪೂಜೆ' ಮಾಡಲಾಗುತ್ತದೆ. ಮನೆಯ ಹಿರಿಯ ಹೆಣ್ಣು ಮಗಳೊಬ್ಬಳು ಸುಮಂಗಲಿಯಾಗಿ ಸ್ವರ್ಗಸ್ಥರಾಗಿದ್ದರೆ, ಅವರ ಹೆಸರಿನಲ್ಲಿ ಆ ಆಚರಣೆ ಜರಗುತ್ತದೆ. ಮನೆಯಲ್ಲಿ ಜರಗಬಹುದಾದ ವಿವಾಹಕ್ಕೆ ಮುಂಚೆ ಅಥವಾ ಗೃಹಪ್ರವೇಶ ಇನ್ನಿತರ ಮಂಗಳ ಕಾರ್ಯಗಳಿಗೆ ಮುಂಚೆ **'ಮುತ್ತೈದೆಪೂಜೆ'** ಮಾಡಲಾಗುತ್ತದೆ.

**ಹಬ್ಬ-ಹರಿದಿನಗಳು :**

ಹಬ್ಬಗಳು ಸಾಮೂಹಿಕ ಆಚರಣೆಗಳಾದರೂ, ಧರ್ಮದಿಂದ ಧರ್ಮಕ್ಕೆ, ಜಾತಿಯಿಂದ ಜಾತಿಗೆ ವ್ಯತ್ಯಾಸಗೊಳ್ಳುತ್ತವೆ. ಮಾನವನ ಅಸಹಾಯಕ ಬದುಕಿನಲ್ಲಿ ಬರುವ ಭಯ, ದೇವರು ಹಾಗೂ ಋತುಮಾನದಲ್ಲಿ ಉಂಟಾಗುವ ಬದಲಾವಣೆಗಳಿಗೆ ಅನುಗುಣವಾಗಿ ಅನೇಕ ಆಚರಣೆಗಳು ಬಳಕೆಗೆ ಬಂದಿವೆ. ಬದುಕಿನ ಏತತಾನ ಹಾಗೂ ಜೀವನದ ದಿನನಿತ್ಯದ ರೀತಿಯಲ್ಲಿ ಬದಲಾವಣೆ ಪಡೆಯಲು ಹಬ್ಬಗಳಿಗೆ ಹಾಗೂ ಆ ಮೂಲಕ ದೇವರಿಗೆ ಮನುಷ್ಯ ಮೊರೆ ಹೋಗುತ್ತಾನೆ. ಅಲ್ಲದೆ ಹಬ್ಬವೆಂದರೆ ಊಟ, ಉಡುಪಿನಿಂದ ಹಿಡಿದು ದೈನಂದಿನ ಎಲ್ಲ ಚಟುವಟಿಕೆಗಳಲ್ಲಿ ವಿಶೇಷತೆ ಇರುತ್ತದೆ. ವೈವಿಧ್ಯತೆ ಕಂಡುಬರುತ್ತದೆ. ಹಾಗಾಗಿ ಹಬ್ಬವೆಂದರೆ ದೇವರಲ್ಲಿ ಭಕ್ತಿ ನಿಷ್ಠೆ, ಕುಟುಂಬಗಳ ಸೌಹಾರ್ದತೆ, ದಿನನಿತ್ಯದ ಜಂಬಡದಿಂದ ನಾವೀನ್ಯತೆಯ ಕಡೆಗೆ ವಾಲಿ ಬದುಕಿನ ಏತತಾನದಿಂದ ನಿವಾರಣೆ ಸಿಗುತ್ತದೆ.

ಹಬ್ಬಗಳು ಸಮಾಜ ಒಪ್ಪಿಕೊಂಡ ಧಾರ್ಮಿಕ ಅಗತ್ಯ ಹಾಗೂ ಪರಂಪರಾನುಗತ ಮೌಲ್ಯಗಳನ್ನು ಸಂರಕ್ಷಿಸುವ ಅವಕಾಶ ಮತ್ತು ಸಾಂಸ್ಕೃತಿಕ ಸಾಮೂಹಿಕ ಆಚರಣೆ. ಬಡವರಿಂದ ಹಿಡಿದು ಶ್ರೀಮಂತರ ವರೆಗೆ ಎಲ್ಲರೂ ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಹಬ್ಬಗಳನ್ನು ಆಚರಿಸುತ್ತಾರೆ. ಇದರಿಂದ ಕುಟುಂಬದಲ್ಲಿ ಸುಖ-ಶಾಂತಿಗಳು ಲಭಿಸುತ್ತವೆ. ಇಂದಿನ ಯಾಂತ್ರಿಕ ಬದುಕಿನಿಂದ ಕ್ಷೋಭೆಗೊಂಡ ಮನುಷ್ಯ ದೈವ-ಧರ್ಮ ಹಾಗೂ ಹಬ್ಬ ಆಚರಣೆಗಳತ್ತ ಹೆಚ್ಚು ಹೆಚ್ಚು ಜೀವನ್ಮುಖಿಯಾಗುತ್ತಿದ್ದಾನೆ.

ಲಾಟ ದೇಶದಿಂದ ವಲಸೆ ಬಂದ ಲಾಡರು ನೇರವಾಗಿ ಪಶ್ಚಿಮ ಭಾಗದಿಂದ ಕರ್ನಾಟಕಕ್ಕೆ ಬರಲಿಲ್ಲ. ಬದಲಾಗಿ, ಲಾಟರು ದಕ್ಷಿಣ ಗುಜರಾತಿನಿಂದ ಮೊದಲು ಮಹಾರಾಷ್ಟ್ರದೆಡೆಗೆ ವಲಸೆ ಬಂದು, ಮಹಾರಾಷ್ಟ್ರದಲ್ಲಿ ಕೆಲಕಾಲ ತಂಗಿದ್ದು, ನಂತರ ಅಲ್ಲಿನ ರಾಜಕೀಯ ಸ್ಥಿತಿಗತಿಗಳು ಬಿಗಡಾಯಿಸಿದ್ದರಿಂದ, ಕರ್ನಾಟಕಕ್ಕೆ ವಲಸೆ ಬಂದರು. ಮಹಾರಾಷ್ಟ್ರದಲ್ಲಿ ನೆಲೆಸಿದ್ದರಿಂದ, ಲಾಡರ ವೇಷ–ಭೂಷಣ, ಆಹಾರ ಪದ್ಧತಿ, ಭಾಷೆ, ಆಚಾರ–ವಿಚಾರಗಳು, ಹಬ್ಬ ಆಚರಣೆಗಳ ಮೇಲೆ ಅಪಾರ ಪ್ರಭಾವ ಬೀರಿದವು. ಹೀಗಾಗಿ ಲಾಟರ ಪದ್ಧತಿ ಆಚಾರಗಳಲ್ಲಿ ಮೂಲ ಗುಜರಾತಿನ ನಂತರ ಮಹಾರಾಷ್ಟ್ರಿಯನ್ನರ ಹಾಗೂ ಈಗ ನೆಲೆಸಿರುವ ಕರ್ನಾಟಕದ ಸಂಸ್ಕೃತಿಗಳ ಪ್ರಭಾವಗಳನ್ನು ಕಾಣಬಹುದು.

ದೀಪಾವಳಿ, ನವರಾತ್ರಿ, ಹೋಳಿ ಹಾಗೂ ವಿನಾಯಕ ಚೌತಿ ಹಬ್ಬಗಳು, ಮೂರೂ ರಾಜ್ಯಗಳಲ್ಲಿ ಆಚರಣೆಯಲ್ಲಿರುವುದರಿಂದ ಲಾಡರಲ್ಲಿ ಈ ಹಬ್ಬಗಳೂ ಆಚರಿಸಲ್ಪಡುತ್ತವೆ. ಜೊತೆಗೆ ಕರ್ನಾಟಕದಲ್ಲಿ ಪ್ರಚಲಿತವಿರುವ ಸಂಕ್ರಾಂತಿ, ಯುಗಾದಿ, ಶ್ರೀರಾಮ ನವಮಿ, ನಾಗಪಂಚಮಿ, ಗೌರಿಹಬ್ಬ ಹಾಗೂ ಪಿತೃಪಕ್ಷವನ್ನು ಆಚರಿಸುತ್ತಾರೆ. ಇವಲ್ಲದೆ ಸತ್ಯನಾರಾಯಣ ಪೂಜೆ, ಏಕಾದಶಿ ಶಿವರಾತ್ರಿ ಹಾಗೂ ಗ್ರಾಮ ದೇವತೆಗಳ ಪೂಜೆಗಳನ್ನೂ ಆಚರಿಸುತ್ತಾರೆ. ಇದಲ್ಲದೆ ಉತ್ಸವ, ರಥೋತ್ಸವಗಳು, ಜಾತ್ರೆಗಳು ಈಗಲೂ ಮುಖ್ಯ.

ದೀಪಾವಳಿಯು ಉತ್ತರ ಭಾರತದಲ್ಲಿ ಹೊಸ ವರ್ಷದ ಆರಂಭ ಸೂಚಿಸುವ ಹಬ್ಬ. ಲಾಡರು ದೀಪಾವಳಿಯನ್ನು ತಮ್ಮ ಮೂಲಕ ಲಾಟ ದೇಶದಿಂದಲೂ ಆಚರಿಸುತ್ತ ಬಂದಿದ್ದಾರೆ. ಅಮಾವಾಸ್ಯೆಯ ದಿನದಿಂದ ಆಚರಣೆಗಳು ಆರಂಭವಾಗುತ್ತವೆ. ಲಾಡ – ಕಾರಾಂಜಾದಲ್ಲಿನ ಲಾಡ ದಿಗಂಬರ ಜೈನರ ಪ್ರಕಾರ ದೀಪಾವಳಿಯು ಮಹಾವೀರನ ನಿರ್ವಾಣದ ಸಮಯದಲ್ಲಿದ್ದ ೧೮ ದೊರೆಗಳು ಹೊತ್ತಿಸಿದ ದೀಪವೆಂತಲೂ, ಹಿಂದೂ ಕಥೆಗಳ ಪ್ರಕಾರ ಶ್ರೀರಾಮನು ವನವಾಸ ಮುಗಿಸಿ ಬಂದ ನಂತರದ ಆರಂಭವೆಂತಲೂ, ಬಲಿಯ ನೆನಪಿಗೆ ಆಚರಣೆಯೆಂತಲೂ ಪ್ರತೀತಿ. ಇವರ ಪಾಲಿಗೆ ದೀಪಾವಳಿ ಅಂಧಕಾರವನ್ನು ದೂರ ಮಾಡಿ ಬೆಳಕನ್ನು ತಂದು ಕೊಡುವ ಹಬ್ಬ. ಈ ಹಬ್ಬದಲ್ಲಿ ಧನಲಕ್ಷ್ಮಿ – ಧಾನ್ಯಲಕ್ಷ್ಮಿ – ಈ ಇಬ್ಬರ ಆರಾಧನೆಗಳನ್ನೂ ನಡೆಸುತ್ತಾರೆ.

**ದೀಪಾವಳಿ :**

ಪಾಡ್ಯದ ದಿನ ಮನೆ ದೇವರಿಗೆ ವಿಶೇಷ ಪೂಜೆ ನಡೆಸುತ್ತಾರೆ. ಎಲ್ಲರೂ ಮಿಂದು ಹೊಸ ಬಟ್ಟೆಯುಟ್ಟು ಸಿಹಿ ತಿನಿಸುಗಳನ್ನು ದೇವರಿಗೆ ನೈವೇದ್ಯ ಮಾಡುತ್ತಾರೆ. ಬೆಳಗಿನ ಜಾವವೇ ಎದ್ದು ಮನೆಯ ಅಂಗಳವನ್ನೆಲ್ಲಾ ಸಾರಿಸಿ, ಸಗಣಿ ಉಂಡೆಗಳಿಗೆ ಚೆಂಡು ಹೂವು ಅಲಂಕರಿಸಿ, ಅಂಗಳದಲ್ಲಿಡುತ್ತಾರೆ. ಸಂಜೆ ದೀಪಗಳನ್ನು ಹೊತ್ತಿಸಿ ಮನೆಯ ಹೊಸ್ತಿಲ ಬಳಿ, ವೃಂದಾವನದ ಬಳಿ ಮುಂತಾದೆಡೆ ಇಟ್ಟು ಅಲಂಕರಿಸುತ್ತಾರೆ. ಪಟಾಕಿ, ಬಾಣ–ಬಿರುಸುಗಳನ್ನು ಹಚ್ಚುವುದೇ ಒಂದು ಮೋಜು.

ಒಕ್ಕಲುತನ ಮಾಡುವವರು ಎತ್ತು, ದನ ಕರುಗಳನ್ನು ಮೈ ತೊಳೆದು, ಕೋಡುಗಳಿಗೆ ಬಣ್ಣ ಲೇಪಿಸಿ ಸಿಂಗಾರ ಮಾಡುತ್ತಾರೆ. ಗೋವುಗಳಿಗೆ ಪಾದಪೂಜೆ ಮಾಡುತ್ತಾರೆ. ಗೋವುಗಳನ್ನು ಕರುಣಿಸಿದ ಶ್ರೀಕೃಷ್ಣನಿಗೂ, ಸಂಪತ್ತನ್ನು ಕರುಣಿಸಿದ ಶ್ರೀ ಲಕ್ಷ್ಮಿಗೂ ವಂದಿಸುವುದು ವಿಶೇಷ. ಲಕ್ಷ್ಮಿಪೂಜೆಯನ್ನು ಸಂಪತ್ತು ಸಮೃದ್ಧಿಯಾಗಲೆಂದು ನಡೆಸುತ್ತಾರೆ.

ದೀಪಾವಳಿಗೆ ಮುಂಚೆ ಬರುವುದೇ ನವರಾತ್ರಿ ಹಬ್ಬ ಅಥವಾ ದಸರೆ. ಇದು ಬಗೆ ಬಗೆಯ ಕಾರ್ಯ ಚಟುವಟಿಕೆಗಳೊಡನೆ ಹತ್ತು ದಿನಗಳ ಕಾಲ ನಡೆಯುವ ಹಬ್ಬ. ಕರ್ನಾಟಕದ ಪರಂಪರೆಗೆ ಒಳಗಾಗಿರುವ ಲಾಡ ಜನಾಂಗವು ದಸರೆಯ ಹಬ್ಬಕ್ಕೆ ಗೊಂಬೆಗಳನ್ನು ಕೂಡಿಸಿ ಅಲಂಕಾರ ಮಾಡುವ ಪದ್ಧತಿಯನ್ನು ಆಚರಣೆಯಲ್ಲಿರಿಸಿ ಕೊಂಡಿದ್ದಾರೆ. ಆದರೆ, ಮೈಸೂರಿನ ಲಾಡರು ಗೊಂಬೆಗಳ ಅಲಂಕಾರ ಕಡ್ಡಾಯವಾಗಿ ಮಾಡುತ್ತಾರೆ. ಒಂಭತ್ತು ದಿನಗಳೂ ಗೊಂಬೆಗಳಿಗೆ ಆರತಿ ಮಾಡಿ ನೆರೆಮನೆಯ ಮುತ್ತೈದೆಯರು ಹಾಗೂ ಮಕ್ಕಳನ್ನು ಕರೆದು ಕುಂಕುಮವಿಟ್ಟು, ತಿನ್ನಲು ತಿನಿಸುಗಳನ್ನು ನೀಡುತ್ತಾರೆ. ನವರಾತ್ರಿಯ ಹತ್ತೂ ದಿನ ಮಾಂಸಾಹಾರ ವ್ಯರ್ಜ್ಯ. ಸರಸ್ವತಿ ಪೂಜೆ, ದುರ್ಗಾಷ್ಟಮಿ, ಆಯುಧಪೂಜೆಯ ಮಹಾನವಮಿ ನಂತರ, ವಿಜಯದಶಮಿಯ ದಿನ ದೇವಿಯ ವಿಶೇಷ ಪೂಜೆ ಜರಗುತ್ತದೆ. ತುಮಕೂರು ಜಿಲ್ಲೆಯ ಶಿರಾ ಪಟ್ಟಣದ ಲಾಡಪುರದಲ್ಲಿರುವ ಶ್ರೀ ಅಂಬಾ ಭವಾನಿ ದೇವಾಲಯದಲ್ಲಿ ಹತ್ತು ದಿನಗಳೂ ದಸರೆಯ ವಿಶೇಷ ಪೂಜೆಗಳು ಹಾಗೂ ವಿಜಯದಶಮಿಯ ದಿನ ಹೋಮ ಹವನಾದಿಗಳು ನಡೆಯುತ್ತವೆ. ಆ ದಿನ ಸಂಜೆ ಭವಾನಿ ಮಾತೆಯ ಮೆರವಣಿಗೆಯ ನಂತರ ಶಮೀ ಪೂಜೆ ನಡೆಯುತ್ತದೆ. ಕುಲದ ಮುಖ್ಯಸ್ಥರು ತಮ್ಮ ಮನೆಯಲ್ಲಿ ಪರಂಪರಾನುಗತವಾಗಿ ಪೂಜಿಸಿಕೊಂಡು ಬಂದಿರುವ 'ತಲವಾರ' ವನ್ನು ಹಿಡಿದು, ಪ್ರದಕ್ಷಿಣೆ–ನಮಸ್ಕಾರಗಳ ನಂತರ 'ಬನ್ನಿ' ಕಡಿಯುವ ಕ್ರಿಯೆ ನಡೆಸುತ್ತಾರೆ. ನಂತರ ಎಲ್ಲರೂ ಬನ್ನಿ ಎಲೆಯನ್ನು ಕಿತ್ತು ತಂದು ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ. ಪ್ರೀತಿಯ ದ್ಯೋತಕವಾಗಿ ಹಿರಿಯರು ಕಿರಿಯರಿಗೆ ಹಣ ಕೊಡುವುದೂ ಉಂಟು.

ನವರಾತ್ರಿಯ ಆಚರಣೆಯ ಮತ್ತೊಂದು ವಿಶೇಷವೆಂದರೆ, ದಸರೆಯ ಮೊದಲನೆಯ ದಿನ ನವಧಾನ್ಯಗಳನ್ನು ಬಿತ್ತುತ್ತಾರೆ. ಗೊಂಬೆಗಳನ್ನು ಒಪ್ಪವಾಗಿ ಅಲಂಕರಿಸಿ, ಕೂಡಿಸಿ ಆರತಿ ಎತ್ತುತ್ತಾರೆ. ನವಧಾನ್ಯ ಬಿತ್ತಲು ಹುತ್ತದ ಮಣ್ಣನ್ನು ತರಲಾಗುತ್ತದೆ. ನವರಾತ್ರಿಯ ಒಂಭತ್ತೂ ದಿನಗಳು ಅಖಂಡವಾಗಿ ಉರಿಯುವಂತೆ ನಂದಾದೀಪವಿಡುತ್ತಾರೆ. ಬೆತ್ತದ ಹರಿವಾಣದಲ್ಲಿ ಬಿತ್ತಿರುವ ಧಾನ್ಯಗಳಿಗೆ ದಿನವೂ ನೀರೆರೆಯಲಾಗುತ್ತದೆ. ಕ್ರಮೇಣ ಇವು ಪೈರಾಗಿ ಬೆಳೆಯುತ್ತವೆ. ದಸರೆಯ ಹತ್ತನೇ ದಿನ ಆ ಪೈರನ್ನು ಹರಿವಾಣ ಸಹಿತ ತೆಗೆದುಕೊಂಡು ಹೋಗಿ ಮಡಿಲಕ್ಕಿಯೊಂದಿಗೆ ಹರಿಯುವ ನೀರಿನಲ್ಲಿ ಅಥವಾ ಬಾವಿಯಲ್ಲಿ ವಿಸರ್ಜಿಸಿ ಹಿಂತಿರುಗುವಾಗ ಬನ್ನಿಮರದ ರೆಂಬೆಯೊಂದನ್ನು ಕತ್ತರಿಸಿಕೊಂಡು ತರುತ್ತಾರೆ. ಮನೆಯ ಹೊಸ್ತಿಲಿನಲ್ಲಿ ಅವರನ್ನು ಆರತಿ ಎತ್ತಿ ಬರಮಾಡಿಕೊಳ್ಳಲಾಗುತ್ತದೆ. ತಂದಿರುವ ಬನ್ನಿಯ ಎಲೆಗಳನ್ನು ಕಿರಿಯರು ಕಿತ್ತು ಹಿರಿಯರ ಕೈಗಿತ್ತು ಆಶೀರ್ವಾದ ಪಡೆಯುತ್ತಾರೆ.

'ಕಾಮನ ಹಬ್ಬ' ಅಥವಾ ಹೋಳಿಹುಣ್ಣಿಮೆ ಲಾಡರಲ್ಲಿ ಇತರ ಹಿಂದೂಗಳಲ್ಲಿರುವಂತೆ ಆಚರಿಸಲ್ಪಡುವ ಹಬ್ಬ. ಕಾಮುದಹನ ಈ ಹಬ್ಬದ ಒಂದು ಮುಖ್ಯ ಆಚರಣೆ. ಇದು ಒಂದು ಸಾಂಕೇತಿಕ ವಿಧಿ ಅಷ್ಟೆ. ಕುಶಾಲಿ, ಮನರಂಜನೆಗೆ ಇಲ್ಲಿ ಹೆಚ್ಚಿನ ಪ್ರಾಮುಖ್ಯತೆ. ಹಟ್ಟಿಯ ಎಲ್ಲ ಇತರ ಜನರೊಟ್ಟಿಗೆ ಕಾಮದಹನದಲ್ಲಿ ಪಾಲ್ಗೊಳ್ಳುವುದು ಒಂದು ಮುಖ್ಯ ಕ್ರಿಯೆ. ದಹಿಸುವ ಬೆಂಕಿಯ ಸುತ್ತಲೂ ಬೊಬ್ಬೆ ಹಾಕಿ ಕುಣಿಸುವುದು ಒಂದು ವಿಶೇಷ ಆಕರ್ಷಣೆ.

ಹೆಚ್ಚು ಕಡಿಮೆ ಎಲ್ಲಾ ಲಾಡರ ಮನೆಗಳಲ್ಲಿ ದೇವರಮನೆ ಅಥವಾ ದೇವರ ಗದ್ದುಗೆಯ ಜಗುಲಿ ಇರುತ್ತದೆ. ಈ ಗದ್ದುಗೆಯು ನೆಲಮಟ್ಟದಿಂದ ಸ್ವಲ್ಪ ಎತ್ತರಕ್ಕಿರುತ್ತದೆ. ಅಲ್ಲಿ ಮನೆದೇವರ ವಿಗ್ರಹ, ಫೋಟೋಗಳು ಇರುತ್ತವೆ. ಕೆಲವೊಂದು ಮನೆಗಳಲ್ಲಿ ಸದಾ ಬೆಳಗುವ ನಂದಾದೀಪವಿರುತ್ತದೆ. ದೇವರನ್ನು ಕೂರಿಸಿರುವ ಜಾಗದ ಸುತ್ತಲು ಸುಣ್ಣ ಕಾರಣೆ ಬಳೆದು ಆಕರ್ಷಕವಾಗಿ ಕಾಣುವಂತೆ ಮಾಡಿರುತ್ತಾರೆ. ಪೂಜಾ ಸಮಯದಲ್ಲಿ ಕೆಲವೊಂದು ಸ್ತೋತ್ರಗಳನ್ನು ಪಠಿಸುವುದು ರೂಢಿ. ಹೋಳಿ ಹುಣ್ಣಿಮೆಯ ದಿನ ಬೆಳಗ್ಗೆ ಮಡಿಯುಟ್ಟು ಸಿಹಿ ಅಡುಗೆ ಮಾಡಿ ದೇವರ ಪೂಜೆಗೆ ಅಣಿ ಮಾಡುತ್ತಾರೆ. ಪೂಜಾ ಸಮಯದಲ್ಲಿ ಜಾಗಟೆ, ಗಂಟೆಗಳ ನಿನಾದ ಮೊಳಗುತ್ತದೆ. ಬೆತ್ತಲೆ ಗಂಡುಮಕ್ಕಳಿಗೆ ಬೇವಿನ ಎಲೆಗಳ ರೆಂಬೆಗಳಿಂದ ಮೈಮುಚ್ಚುವಂತೆ ಸೊಂಟಕ್ಕೆ ಕಟ್ಟಲಾಗುತ್ತದೆ. ಇದರ ಜೊತೆ ಬದನೆ ಕಾಯಿಯನ್ನೂ ಕಟ್ಟುತ್ತಾರೆ. ಈ ಬೇವಿನ ಮುಡಿಯಲ್ಲೇ ಪೂಜೆ ಜರಗುತ್ತದೆ. ಇದನ್ನು 'ನೀಮ್‌ಪೇರಸ್ತೇ' ಎನ್ನುತ್ತಾರೆ. ಪೂಜೆ ನಡೆಯುವಾಗ 'ಯಕ್ಕಳದೇ ಜೋಗ' ಎಂದಾಗ ರಾಗವಾಗಿ ಘೋಷಣೆ ಕೂಗುತ್ತಾ ನಮಸ್ಕರಿಸುತ್ತಾರೆ. ದೇವರ ಗದ್ದುಗೆಯ ಬಳಿ ಹೊಸ ಮಡಕೆಯೊಂದಕ್ಕೆ ಸುಣ್ಣ ಬಳಿದು ನೀರು ತುಂಬಿಡುತ್ತಾರೆ. ಮಡಕೆಯ ಕಂಠದವರೆಗೂ ಸುತ್ತ ಬೇವಿನರೆಂಬೆ ಹಾಗೂ ಬದನೆಕಾಯಿ ಕಟ್ಟಿರುತ್ತರೆ. ಸಿಹಿ ಊಟದ ನಂತರ ಗಂಡುಮಕ್ಕಳೆಲ್ಲ ಬಣ್ಣದ ಓಕುಳಿಯಾಡಲು ಹೊರಗೆ ಹೋಗುತ್ತಾರೆ. ಸಾಮಾನ್ಯವಾಗಿ ಸ್ತ್ರೀಯರು ಓಕುಳಿಯಲ್ಲಿ ಭಾಗವಹಿಸುವುದಿಲ್ಲ.

ಪಶ್ಚಿಮ ಭಾರತದಿಂದ ದಕ್ಷಿಣ ಭಾರತಕ್ಕೆ ವಲಸೆ ಬಂದ ಲಾಡ ಜನಾಂಗದವರು ಕರ್ನಾಟಕದ ಸಾಂಪ್ರದಾಯಿಕ ಹಬ್ಬ ಆಚರಣೆಗಳನ್ನೂ ತಮ್ಮದಾಗಿಸಿಕೊಂಡಿದ್ದಾರೆ. ಶತಶತಮಾನಗಳಿಂದ ಈ ನಾಡಿನಲ್ಲಿ ನೆಲೆಯೂರಿ ಇಲ್ಲಿನ ಪದ್ಧತಿಗಳನ್ನು ಆಚರಿಸಲಾರಂಭಿಸಿದ್ದಾರೆ. ಇಂತಹ ಒಂದು ಸಾಂಪ್ರದಾಯಿಕ ಹಬ್ಬವೆಂದರೆ 'ಯುಗಾದಿ'. ಲಾಡರು ಚಾಂದ್ರಮಾನ ಯುಗಾದಿಯನ್ನು ನೂತನ ವರ್ಷದ ಆರಂಭವೆಂದು ಆಚರಿಸುತ್ತಾರೆ. ಹಿಂದೂ ಪಂಚಾಂಗದಂತೆ ಚೈತ್ರಮಾಸದ ಪ್ರಾರಂಭವನ್ನು ಈ ಹಬ್ಬ ಸೂಚಿಸುತ್ತದೆ. ಹೊಸ ವರ್ಷದ ದಿನ ಎಲ್ಲರೂ ಎಣ್ಣೆ ಹಚ್ಚಿಕೊಂಡು ಮಜ್ಜನ ಮಾಡುತ್ತಾರೆ. ಹೊಸಲಿಗೆ ಪೂಜೆ ಮಾಡಿ ತಳಿರು ತೋರಣಗಳಿಂದ ಅಲಂಕರಿಸುತ್ತಾರೆ. ಪಾಯಸ ಇತ್ಯಾದಿಗಳನ್ನು ನೈವೇದ್ಯ ಮಾಡಿ ಪೂಜೆ ಮಾಡುತ್ತಾರೆ. ಬೇವಿನ ಚಿಗುರೆಲೆ ಬೆಲ್ಲ ಸೇರಿಸಿ ಹುರಿಗಡಲೆ ಸಹಿತ ದೇವರಿಗೆ ಅರ್ಪಿಸಿ, ನಂತರ ಮನೆಯ ಮಂದಿಯೆಲ್ಲಾ ಜೊತೆಗೆ

ಬಂಧುಮಿತ್ರರಿಗೆ ಬೇವು–ಬೆಲ್ಲ ಹಂಚುತ್ತಾರೆ. ಹೋಳಿಗೆ ಊಟ ಯುಗಾದಿಯ ವಿಶೇಷ. ಸಂಜೆ ದೇವಾಲಯಕ್ಕೆ ಪೂಜೆ ಮಾಡಿಸಿಕೊಂಡು ಬರುವುದುಂಟು. ಹೊಸ ವರ್ಷಕ್ಕೆ ಹೊಸ ಬಟ್ಟೆಯುಡುವ ಪದ್ಧತಿಯಿದೆ. ರಾತ್ರಿ ಬಿದಿಗೆ ಚಂದ್ರನ ದರ್ಶನ ಮಾಡಿ ಊಟ ಮಾಡುತ್ತಾರೆ. ಜೀವನದಲ್ಲಿ ಸಿಹಿ–ಕಹಿಗಳನ್ನು ಸಮಾನವಾಗಿ ಸ್ವೀಕರಿಸಬೇಕೆಂಬ ಸಂದೇಶ ಸಾರುವ ಸಂಕೇತ ಈ ಬೇವು–ಬೆಲ್ಲ, ಪಂಚಾಂಗ ಶ್ರವಣವೂ ನಡೆಯುತ್ತದೆ. ಹೊಸ ಪಂಚಾಂಗ ತಂದು ಪೂಜಿಸಿ, ವರ್ಷದ ಆ ಸಂವತ್ಸರದ ಫಲಾಫಲಗಳನ್ನು ಪಂಚಾಂಗ ಶ್ರವಣದ ಮೂಲಕ ಸಾರಲಾಗುತ್ತದೆ.

ಸಂಕ್ರಾಂತಿ ಹಬ್ಬದ ಆಚರಣೆ ಇತರ ಹಿಂದೂಗಳಲ್ಲಿದ್ದಂತೆ ಲಾಡರಲ್ಲಿಯೂ ಒಂದು ಪ್ರಮುಖವಾದ ಹಬ್ಬ. ಸಂಪ್ರದಾಯದಂತೆ ಎಳ್ಳುಬೆಲ್ಲ ಬೀರುವ ಪದ್ಧತಿ ಇವರಲ್ಲೂ ಸಹ ಇದೆ. ಇದಲ್ಲದೆ ಇತರ ವೈದೀಕ ಆಚರಣೆಗಳಲ್ಲಿರುವಂತೆ ವರಮಹಾಲಕ್ಷ್ಮಿ ಹಬ್ಬ ನೂಲುಹುಣ್ಣಿಮೆಯ ಜನಿವಾರದ ಹಬ್ಬ, ಕಾರ್ತಿಕ ಮಾಸದ ಪೂಜೆ, ನಾಗರಪಂಚಮಿ ಹಬ್ಬ, ಅನಂತನ ವ್ರತ, ಶ್ರೀರಾಮ ನವಮಿ, ಗೋಕುಲಾಷ್ಟಮಿ, ಶ್ರಾವಣ ಮಾಸದ ಪೂಜೆ, ಗೌರಿಹಬ್ಬ, ವಿನಾಯಕ ಚೌತಿ, ಇವುಗಳನ್ನು ಆಚರಿಸಲಾಗುತ್ತದೆ. ಇವುಗಳಲ್ಲೆಲ್ಲಾ ಗೌರಿ–ಗಣೇಶ ಹಬ್ಬ ಅತ್ಯಂತ ಸಂಭ್ರಮೋತ್ಸಾಹಗಳಿಂದ ಆಚರಿಸಲ್ಪಡುತ್ತದೆ.

ಸ್ವರ್ಣ ಗೌರಿ ಹಬ್ಬದ ದಿನ ಲಾಡ ಸ್ತ್ರೀಯರ ಸಂಭ್ರಮ ಹೇಳತೀರದು. ಆ ದಿನದಂದು ಯಾವುದಾದರೂ ಮೈಲಿಗೆ, ಪುರುಡು ಇತ್ಯಾದಿಗಳಿಂದ ವರ್ಷದ ಪೂಜೆ ತಪ್ಪಿದರೆ ಹೆಣ್ಣು ಮಕ್ಕಳು ಅತೀ ಹೆಚ್ಚು ದುಃಖಪಡುತ್ತಾರೆ. ಹಬ್ಬದ ಹಿಂದಿನ ದಿನದಿಂದಲೇ ಸಿದ್ಧತೆಗಳು ಆರಂಭವಾಗಿರುತ್ತವೆ. ಹೆಚ್ಚಾಗಿ ಲಾಡರ ಮನೆಗಳಲ್ಲಿ ಗೌರಿಯ ವಿಗ್ರಹ ಕೂಡಿಸುವ ಪದ್ಧತಿಯಿಲ್ಲ, ದೇವಸ್ಥಾನ ಅಥವಾ ಯಾರಾದರೂ ಬ್ರಾಹ್ಮಣರ ಮನೆಯಲ್ಲಿ ಗೌರಿ ಕೂಡಿಸಿದ್ದರೆ, ಅಲ್ಲೇ ಹೋಗಿ ಲಾಡ ಸ್ತ್ರೀಯರು ಪೂಜೆ ಮುಗಿಸಿಕೊಂಡು ಬಾಗಿನ ವಿನಿಮಯ ಮಾಡಿಕೊಂಡು ಬರುತ್ತಾರೆ. ಹೆಣ್ಣು ಮಕ್ಕಳು ಹೊಸ ಬಟ್ಟೆಯುಟ್ಟು ಸಂಭ್ರಮಿಸುತ್ತಾರೆ. ಮನೆದೇವರ ಪೂಜೆಯ ನಂತರ, ಮನೆಯಲ್ಲಿ ಸಿಹಿಯೂಟ ಜರಗುತ್ತದೆ.

ಮರುದಿನ ವಿನಾಯಕ ಚತುರ್ಥಿಯಂದು ಲಾಡರ ಮನೆಗಳಲ್ಲಿ ಸಂಭ್ರಮದ ಆಚರಣೆ ಇರುತ್ತದೆ. ಎಲ್ಲಾ ಲಾಡರ ಮನೆಯಲ್ಲೂ ವಿನಾಯಕನ ಮೂರ್ತಿ ಪ್ರತಿಷ್ಠಾಪಿಸಿ ಪೂಜಿಸುವ ಪದ್ಧತಿ ಇರುವುದಿಲ್ಲ, ಕೆಲವೊಂದು ಮನೆಗಳಲ್ಲಿ ಮಾತ್ರ ಗಣಪತಿ ಮೂರ್ತಿಯನ್ನು ಕೂಡಿಸುವ ಪದ್ಧತಿ ಇದೆ. ಮೈಸೂರಿನ ಮಂಡಿಮೊಹಲ್ಲಾದ ಲಾಡರ ಧಣಿಯಣ್ಣನವರ ಮನೆಯಲ್ಲಿ ಗಣೇಶಮೂರ್ತಿ ಪ್ರತಿಷ್ಠಾಪಿಸಿ ಪೂಜಿಸುವ ಪದ್ಧತಿ ನಿಲ್ಲಲು ಬೇರೆಯದೇ ವಿಶೇಷ ಕಾರಣವಿದೆ. ಪ್ರತಿವರ್ಷ ವಿನಾಯಕ ಚತುರ್ಥಿಯಂದು ಗಣೇಶನ ಮೂರ್ತಿ ಪ್ರತಿಷ್ಠಾಪಿಸಿ ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಪೂಜಿಸಿ ಕಡೆಗೆ ವಿಶೇಷವಾದ ರೀತಿಯಲ್ಲಿ ವೈಭವಯುತ ಮೆರವಣಿಗೆಯಲ್ಲಿ, ದೊಡ್ಡ ಕೆರೆಯಲ್ಲಿ ವಿಸರ್ಜಿಸುವ ಪದ್ಧತಿಯಿತ್ತು, ಆದರೆ, ಒಂದು ವಿನಾಯಕ ಚತುರ್ಥಿಯ ದಿನ ಗಣೇಶಮೂರ್ತಿ ಪೂಜಿಸಿ ಎಲ್ಲರೂ ಊಟ ಮಾಡುತ್ತಿದ್ದ ಸಮಯದಲ್ಲಿ, ಹೊರಗೆ ಅಂಗಳದಲ್ಲಿ ಕಟ್ಟಿಹಾಕಿದ್ದ ಕೆಂಗರುವೊಂದು ಹಗ್ಗ

ಕಿತ್ತುಕೊಂಡು ವೇಗವಾಗಿ ಮನೆಯಲ್ಲಿ ನುಗ್ಗಿ ಪೂಜಿಸಿದ್ದ ವಿನಾಯಕ ಮೂರ್ತಿಯನ್ನು ಕೊಂಬಿನಿಂದ ಹಾಯ್ದು ಕೆಳಗೆ ಬೀಳಿಸಲಾಗಿ, ಆ ಗಣೇಶಮೂರ್ತಿ ಎರಡು ತುಂಡುಗಳಾಗಿ ರಕ್ತವರ್ಣಕ್ಕೆ ತಿರುಗಿತು. ಅಂದು ಅದೊಂದು ಅತ್ಯಂತ ದುರ್ಘಟನೆ ಎಂದು ಬಗೆದು, ಆ ವಿಗ್ರಹದ ತುಂಡುಗಳನ್ನು ಕೆರೆಯಲ್ಲಿ ವಿಸರ್ಜಿಸಿ, ಅಂದಿನಿಂದ ಮನೆಯಲ್ಲಿ ವಿನಾಯಕನ ವಿಗ್ರಹ ತಂದು ಪೂಜಿಸುವುದನ್ನು ನಿಲ್ಲಿಸಿ, ಪ್ರತಿ ವರ್ಷ ಗಣೇಶ ದೇವಸ್ಥಾನಕ್ಕೆ ಹೋಗಿ ಅಲ್ಲೇ ಪೂಜಿಸಿ ಬರುತ್ತಾರೆ.

ಅನೇಕ ಲಾಡರ ಮನೆಗಳಲ್ಲಿ ಗಣಪತಿ ವಿಗ್ರಹವನ್ನು ತಂದು ಚತುರ್ಥಿಯ ಹಬ್ಬದ ದಿನ ಬ್ರಾಹ್ಮಣ ಪುರೋಹಿತರನ್ನು ಕರೆಸಿ ಭಕ್ತಿಪೂರ್ವಕವಾಗಿ ಮೋದಕ, ನೆನೆಸಿದ ಕಡಲೆಕಾಳು, ಕಡಬು ಇತ್ಯಾದಿಗಳನ್ನು ನೈವೇದ್ಯ ಮಾಡಿ ಪೂಜೆಯ ನಂತರ, ನಾಗದೇವತೆಯ ಪೂಜೆಗಾಗಿ ಹುತ್ತಕ್ಕೆ ಪೂಜಿಸಿ ಚಿಗಳಿ, ತಂಬಿಟ್ಟು ನೈವೇದ್ಯ ಮಾಡುತ್ತಾರೆ. ನಂತರವೇ ದೇವರ ಪ್ರಸಾದ ಸ್ವೀಕರಿಸಲಾಗುತ್ತದೆ.

ಕೆಲವರು ಚತುರ್ಥಿಯ ದಿನ ಪೂಜಿಸಿದ ವಿನಾಯಕ ಮೂರ್ತಿಯನ್ನು ಅಂದೇ ವಿಸರ್ಜಿಸುವ ಪದ್ಧತಿ ಅನುಸರಿಸುತ್ತಾರೆ. ಮತ್ತೆ ಕೆಲವು ಮನೆಗಳಲ್ಲಿ ೫ ದಿನ, ೯ ದಿನ ಹೀಗೆ ಆಯಾ ವರ್ಷಗಳಲ್ಲಿನ ತಿಥಿ, ನಕ್ಷತ್ರಗಳಿಗನುಗುಣವಾಗಿ ವಿಸರ್ಜನಾ ಕಾರ್ಯ ಇಟ್ಟುಕೊಳ್ಳುತ್ತಾರೆ. ಮನೆಯಲ್ಲಿಟ್ಟುಕೊಂಡ ದಿನಗಳಲ್ಲಿ, ಪ್ರತಿದಿನ ಮುಂಜಾನೆ, ಮಧ್ಯಾಹ್ನ ಹಾಗೂ ಸಂಜೆ ಮಡಿಯಲ್ಲಿ, ಪದ್ಧತಿಯಂತೆ ನೈವೇದ್ಯ, ಮಂಗಳಾರತಿಗಳು ನಡೆಯಬೇಕು. ಗಣಪತಿ ವಿಸರ್ಜಿಸುವ ಸಮಯದಲ್ಲಿ ಮೊದಲು ನೈವೇದ್ಯಕ್ಕಾಗಿ ೨೧ ವಡೆಯ ಹಾರ ಹಾಕಲಾಗುತ್ತದೆ. ಮೊಸರನ್ನದ ಬುತ್ತಿಯನ್ನು ಸ್ವಾಮಿಯ ವಿಗ್ರಹದ ಬದಿಯಲ್ಲಿ ಇಡಲಾಗುತ್ತದೆ. ಮಹಾಮಂಗಳಾರತಿಯ ನಂತರ ವಿಗ್ರಹ ಕದಲಿಸಿ, ಜಯಘೋಷಣೆಗಳೊಡನೆ ಮೆರವಣಿಗೆಯಲ್ಲಿ ಸ್ವಾಮಿಯನ್ನು ತೆಗೆದುಕೊಂಡು ಹೋಗಿ ನದಿ, ಕೆರೆ ಅಥವಾ ಬಾವಿಯಲ್ಲಿ ವಿಸರ್ಜಿಸಲಾಗುತ್ತದೆ.

ಹುಬ್ಬಳ್ಳಿ – ಧಾರವಾಡದ ಲಾಡರಲ್ಲಿ ಮತ್ತೊಂದು ವಿಶೇಷ ಪದ್ಧತಿ ಆಚರಣೆ ಇದೆ. ಅದೆಂದರೆ, ವಿನಾಯಕ ಚೌತಿಯ ಸಮಯದ ತ್ರಯೋದಶಿಯ ದಿನ 'ರೊಟ್ಟಿ ಪಂಚಮಿ' ಆಚರಿಸುತ್ತಾರೆ. ವಟಸಾವಿತ್ರಿ ವ್ರತವನ್ನೂ ಆಚರಿಸುತ್ತಾರೆ. 'ರೊಟ್ಟಿ ಪಂಚಮಿಯ ದಿನ ಈ ಲಾಡರು ಒಬ್ಬರಮನೆಗೆ ಮತ್ತೊಬ್ಬ ಲಾಡರು ಹೋಗುವುದಿಲ್ಲ. ಪರವೂರಿನಿಂದ ಬಂದವರಿಗೂ ಸಹ ಆ ದಿನ ಅವರ ಮನೆಯಲ್ಲಿ ಊಟದ ವ್ಯವಸ್ಥೆ ಮಾಡುವುದಿಲ್ಲ. ಬದಲಾಗಿ, ಬೇಕಾದರೆ ಹೊರಗಡೆ ಹೋಟೆಲ್ ಅಥವಾ ಖಾನಾವಳಿಯಲ್ಲಿ ಊಟಕ್ಕಾಗಿ ಕರೆದುಕೊಂಡು ಹೋಗುತ್ತಾರೆ. ತೀರಾ ಹತ್ತಿರದ ನೆಂಟರಿಗೆ ಇದೇ ಮಾನದಂಡ ಅನುಸರಿಸಲಾಗುತ್ತದೆ. ವಿನಾಯಕ ಚತುರ್ಥಿಯಂದು ಮನೆಯಲ್ಲಿ ಬೀಸಿದ ಗೋಧಿಹಿಟ್ಟಿನಿಂದ ರೊಟ್ಟಿ ತಯಾರಿಸಲಾಗುತ್ತದೆ. ಅಲ್ಲದೆ ಗೋಧಿ ಹುಗ್ಗಿ, ಕಡ್ಲೆಕಾಳು ಗುಗ್ಗರಿ, ಊಟಕ್ಕಾಗಿ ತಯಾರಿಸಲಾಗುತ್ತದೆ. ಅಂದು ಅಡಿಗೆಯಲ್ಲಿ ಈರುಳ್ಳಿ, ಬೆಳ್ಳುಳ್ಳಿ ನಿಷಿದ್ಧ.

ಲಾಟ ದೇಶದಿಂದ ವಲಸೆ ಬಂದ ಲಾಡರು ನೇರವಾಗಿ ಪಶ್ಚಿಮ ಭಾಗದಿಂದ ಕರ್ನಾಟಕಕ್ಕೆ ಬರಲಿಲ್ಲ. ಬದಲಾಗಿ, ಲಾಟರು ದಕ್ಷಿಣ ಗುಜರಾತಿನಿಂದ ಮೊದಲು ಮಹಾರಾಷ್ಟ್ರದೆಡೆಗೆ ವಲಸೆ ಬಂದು, ಮಹಾರಾಷ್ಟ್ರದಲ್ಲಿ ಕೆಲಕಾಲ ತಂಗಿದ್ದು, ನಂತರ ಅಲ್ಲಿನ ರಾಜಕೀಯ ಸ್ಥಿತಿಗತಿಗಳು ಬಿಗಡಾಯಿಸಿದ್ದರಿಂದ, ಕರ್ನಾಟಕಕ್ಕೆ ವಲಸೆ ಬಂದರು. ಮಹಾರಾಷ್ಟ್ರದಲ್ಲಿ ನೆಲೆಸಿದ್ದರಿಂದ, ಲಾಡರ ವೇಷ-ಭೂಷಣ, ಆಹಾರ ಪದ್ಧತಿ, ಭಾಷೆ, ಆಚಾರ-ವಿಚಾರಗಳು, ಹಬ್ಬ ಆಚರಣೆಗಳ ಮೇಲೆ ಅಪಾರ ಪ್ರಭಾವ ಬೀರಿದವು. ಹೀಗಾಗಿ ಲಾಟರ ಪದ್ಧತಿ ಆಚಾರಗಳಲ್ಲಿ ಮೂಲ ಗುಜರಾತಿನ ನಂತರ ಮಹಾರಾಷ್ಟ್ರಿಯನ್ನರ ಹಾಗೂ ಈಗ ನೆಲೆಸಿರುವ ಕರ್ನಾಟಕದ ಸಂಸ್ಕೃತಿಗಳ ಪ್ರಭಾವಗಳನ್ನು ಕಾಣಬಹುದು.

ದೀಪಾವಳಿ, ನವರಾತ್ರಿ, ಹೋಳಿ ಹಾಗೂ ವಿನಾಯಕ ಚೌತಿ ಹಬ್ಬಗಳು, ಮೂರೂ ರಾಜ್ಯಗಳಲ್ಲಿ ಆಚರಣೆಯಲ್ಲಿರುವುದರಿಂದ ಲಾಡರಲ್ಲಿ ಈ ಹಬ್ಬಗಳೂ ಆಚರಿಸಲ್ಪಡುತ್ತವೆ. ಜೊತೆಗೆ ಕರ್ನಾಟಕದಲ್ಲಿ ಪ್ರಚಲಿತವಿರುವ ಸಂಕ್ರಾಂತಿ, ಯುಗಾದಿ, ಶ್ರೀರಾಮನವಮಿ, ನಾಗಪಂಚಮಿ, ಗೌರಿಹಬ್ಬ ಹಾಗೂ ಪಿತೃಪಕ್ಷವನ್ನು ಆಚರಿಸುತ್ತಾರೆ. ಇವಲ್ಲದೆ ಸತ್ಯನಾರಾಯಣ ಪೂಜೆ, ಏಕಾದಶಿ ಶಿವರಾತ್ರಿ ಹಾಗೂ ಗ್ರಾಮ ದೇವತೆಗಳ ಪೂಜೆಗಳನ್ನೂ ಆಚರಿಸುತ್ತಾರೆ. ಇದಲ್ಲದೆ ಉತ್ಸವ, ರಥೋತ್ಸವಗಳು, ಜಾತ್ರೆಗಳು ಈಗಲೂ ಮುಖ್ಯ.

ದೀಪಾವಳಿಯು ಉತ್ತರ ಭಾರತದಲ್ಲಿ ಹೊಸ ವರ್ಷದ ಆರಂಭ ಸೂಚಿಸುವ ಹಬ್ಬ. ಲಾಡರು ದೀಪಾವಳಿಯನ್ನು ತಮ್ಮ ಮೂಲಕ ಲಾಟ ದೇಶದಿಂದಲೂ ಆಚರಿಸುತ್ತ ಬಂದಿದ್ದಾರೆ. ಅಮಾವಾಸ್ಯೆಯ ದಿನದಿಂದ ಆಚರಣೆಗಳು ಆರಂಭವಾಗುತ್ತವೆ. ಲಾಡ-ಕಾರಾಂಜಾದಲ್ಲಿನ ಲಾಡ ದಿಗಂಬರ ಜೈನರ ಪ್ರಕಾರ ದೀಪಾವಳಿಯು ಮಹಾವೀರನ ನಿರ್ವಾಣದ ಸಮಯದಲ್ಲಿದ್ದ ೧೮ ದೊರೆಗಳು ಹೊತ್ತಿಸಿದ ದೀಪವೆಂತಲೂ, ಹಿಂದೂ ಕಥೆಗಳ ಪ್ರಕಾರ ಶ್ರೀರಾಮನು ವನವಾಸ ಮುಗಿಸಿ ಬಂದ ನಂತರದ ಆರಂಭವೆಂತಲೂ, ಬಲಿಯ ನೆನಪಿಗೆ ಆಚರಣೆಯೆಂತಲೂ ಪ್ರತೀತಿ. ಇವರ ಪಾಲಿಗೆ ದೀಪಾವಳಿ ಅಂಧಕಾರವನ್ನು ದೂರ ಮಾಡಿ ಬೆಳಕನ್ನು ತಂದು ಕೊಡುವ ಹಬ್ಬ. ಈ ಹಬ್ಬದಲ್ಲಿ ಧನಲಕ್ಷ್ಮಿ-ಧಾನ್ಯಲಕ್ಷ್ಮಿ-ಈ ಇಬ್ಬರ ಆರಾಧನೆಗಳನ್ನೂ ನಡೆಸುತ್ತಾರೆ.

**ಬಡಕೋ ಪೂಜಾ:**

ಇದಲ್ಲದೆ, ವರಲಕ್ಷ್ಮೀವ್ರತ, ಶ್ರೀರಾಮನವಮಿ, ಅನಂತಪದ್ಮನಾಭವ್ರತ, ಗೋಕುಲಾಷ್ಟಮಿ, ಕಾರ್ತೀಕ ಮಾಸದ ಪೂಜೆ, ಶ್ರಾವಣ ಮಾಸದ ಪೂಜೆ, ನಾಗರಪಂಚಮಿ, ಭೀಮನ ಅಮಾವಾಸ್ಯೆ ಹೀಗೆ ಹಲವು ಹತ್ತು ಹಬ್ಬಗಳನ್ನು ಲಾಡರು ಸಹ ಆಚರಿಸುತ್ತಾರೆ. ಅದರಲ್ಲಿ ಮುಖ್ಯವಾಗಿ ಆಷಾಢಮಾಸ ಪ್ರಾರಂಭವಾಗ ಪ್ರಥಮ ಅಮಾವಾಸ್ಯೆಯ ದಿನ ನವವಿವಾಹಿತ ದಂಪತಿಗಳಿಗೆ ಮಾಡಿಸುವ **'ಬಡಕೋ ಪೂಜಾ'** ಎಂಬ ಕ್ರಿಯಾವಿಧಾನ ಅತಿ ಮುಖ್ಯ. ಆ ದಿನ ನೂತನ ವಧುವಿನ ಮನೆಯಲ್ಲಿ ಸಂಭ್ರಮದ ವಾತಾವರಣ. ಹೊಸ ಅಳಿಯನನ್ನು ಮನೆಗೆ ಕರೆಸಿಕೊಂಡು, ಆ ದಿನ ಬೆಳಗ್ಗೆ ನವ

ವಧೂ–ವರರಿಗೆ ಅಭ್ಯಂಜನ ಮಾಡಿಸಿ. ಹೊಸ ಪಂಚೆ ಉತ್ತರೀಯನ್ನಿತ್ತು ಆ ದಂಪತಿಗಳನ್ನು ಹತ್ತಿರದ ಒಂದು ಆಲದ ಮರಕ್ಕೆ ಕರೆದುಕೊಂಡು ಹೋಗಿ ಅವರಿಬ್ಬರ ಕೈಯಲ್ಲಿ ಆಲದ ಮರಕ್ಕೆ ಹಸಿ ನೂಲನ್ನು ಸುತ್ತಿಸಿ. ಹಣ್ಣು ಕಾಯಿಗಳೊಂದಿಗೆ ಪೂಜೆ. ಮಂಗಳಾರತಿ ಮಾಡಿಸುತ್ತಾರೆ. ಆಲದ ಮರವು ಹಿಂದೂ ಧರ್ಮದಲ್ಲಿ ಪೂಜ್ಯನೀಯ ಸ್ಥಾನ ಪಡೆದಿದೆ. ಅದು ಹೀಗೆ ತನ್ನ ಬಿಳಲುಗಳಿಂದ ಕೂಡಿ ಅತಿ ಹೆಚ್ಚು ಕಾಲ ಬಾಳಿ ತನ್ನ ಸಂತಾನವನ್ನು ಮುಂದಿನ ಪೀಳಿಗೆಗೆ ಬಿಡುತ್ತದೆಯೋ ಅದೇ ರೀತಿ ನವ ದಂಪತಿಗಳು ದೀರ್ಘಕಾಲ ಬಾಳಿ, ಸಂತಾನಾಭಿವೃದ್ಧಿ ಮಾಡಿ ವಂಶ ಬೆಳಗುವ ಕಾರ್ಯ ಮಾಡಲೆಂದು ಅದರ ಆಶಯವಾಗಿದೆ.

**ಲಾಠ ದೇಶದಿಂದಲಾಡರ ವಲಸೆ:**



ಲಾಟ ದೇಶವು ಅತ್ಯಂತ ಪ್ರಾಚೀನವಾದುದು. ಮಹಾಭಾರತ, ಬಾಲ ರಾಮಾಯಣ, ಸ್ಕಂಧ ಪುರಾಣ ಮುಂತಾದವುಗಳಲ್ಲಿ ಲಾಟ ರಾಜ್ಯದ ಉಲ್ಲೇಖವಿರುವುದನ್ನು ಕಾಣಬಹುದು. ದಕ್ಷಿಣ ಗುಜರಾತ್‌ನ ದಮನಗಂಗಾ ನದಿಯಿಂದ ಉತ್ತರ ನರ್ಮದೆಯವರೆಗೆ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರದವರೆಗೆ ಹಬ್ಬಿತ್ತು. ನಂದಿಪುರವು ಲಾಟರಾಜ್ಯದ ರಾಜಧಾನಿಯಾಗಿತ್ತು. ಮಹಾಭಾರತದ ಕಾಲದಿಂದ ಹಿಡಿದು ಮಧ್ಯಕಾಲೀನ ಯುಗದವರೆಗೆ. ಅಂದರೆ ಸುಮಾರು ೧೨ನೇ ಶತಮಾನದವರೆಗೆ ಲಾಟರಾಜ್ಯವು ವೈಭವದಿಂದ ಮೆರೆದ ಕಾಲ. ಲಾಟದಲ್ಲಿ ದೊರೆಯುತ್ತಿದ್ದ ಜಾತ್ಯಾಶ್ವಗಳು, ಅತ್ಯುತ್ತಮ ದರ್ಜೆಯ ಹತ್ತಿ, ಎಣ್ಣೆ ಬೀಜಗಳು, ಚಾಪೆ, ಸುಗಂಧ ದ್ರವ್ಯಗಳು, ವಜ್ರ ವೈಢೂರ್ಯಗಳು, ಮುತ್ತುರತ್ನ ಹಾಗೂ ರೇಷ್ಮೆ ರಫ್ತು ಮಾಡಲಾಗುತ್ತಿತ್ತು. ಸೂರತ್ ಇಡೀ ಭಾರತದಲ್ಲೇ ಅತಿ ಚುರುಕಿನ ವ್ಯಾಪಾರ ಹಾಗೂ ವಾಣಿಜ್ಯ ಕೇಂದ್ರವಾಗಿತ್ತು. ವಸ್ತುಗಳು ಹಾಗೂ ಸರಂಜಾಮುಗಳನ್ನು ತುಂಬಿಕೊಂಡ ಹಡಗುಗಳು ಭರೂಚ್, ಸೋಪಾರಾ ಮತ್ತು ಕಲ್ಯಾಣದ ಬಂದರುಗಳನ್ನು ತಲುಪುತ್ತಿದ್ದವು. ತಗರ ಮತ್ತು ಪೈಠಣ ಒಳನಾಡು ಜಲಮಾರ್ಗಗಳ ಕೇಂದ್ರಗಳಾಗಿದ್ದವು. ***''ಇಮ್ಮಡಿ ಕೃಷ್ಣನು ಗುರ್ಜರರಲ್ಲಿ ಭೀತಿಯನ್ನುಂಟು ಮಾಡಿದನೆಂದೂ ರಾಷ್ಟ್ರಕೂಟರ ದಾಖಲೆಗಳಲ್ಲಿ ವರ್ಣಿಸಲಾಗಿದೆ''*** ಎಂದು ಇತಿಹಾಸಕಾರ ಎ.ಎಸ್. ನಂಜುಂಡಸ್ವಾಮಿ ತಿಳಿಸುತ್ತಾರೆ. ಈಗಿನ ಆಧುನಿಕ ಭಡೋಜ್ ಜಿಲ್ಲೆಯ ಶ್ರೀ ಭವನ ಎಂಬಲ್ಲಿ ತಂಗಿದ್ದನು. ಅವನಿಗೆ ಅಮೋಘವರ್ಷವೆಂಬ ಮಗನು ಜನಿಸಿದ್ದು ಈ ನಗರದಲ್ಲೇ ಎನ್ನಲಾಗಿದೆ.

ವಾಕಾಟಕರು, ಬಾದಾಮಿ ಚಾಲುಕ್ಯರು, ನಂತರದಲ್ಲಿ ರಾಷ್ಟ್ರಕೂಟರು ೯ನೇ ಶತಮಾನದವರೆಗೆ ಲಾಟವನ್ನಾಳಿದ ರಾಜವಂಶಗಳು. ಪಾರಮಾರರ ದೊರೆ ಸುಭತವರ್ಮನು ಹಾಗೂ ಅವನ ಉತ್ತರಾಧಿಕಾರಿಯಾಗಿ ೧೨೩೩ರಲ್ಲಿ ಬಂದ ಅರ್ಜುನವರ್ಮ ಭರೂಚ್‌ನಿಂದ ಒಂದು ದತ್ತಿ ಶಾಸನ ಹೊರಡಿಸಿದನು. ಆದರೂ ಸಹ ಪಾರಮಾರರು ಲಾಟದ ಮೇಲೆ ಸಂಪೂರ್ಣ ಹತೋಟಿ ಹೊಂದಲಾಗಲಿಲ್ಲ. ೧೩ನೇ ಶತಮಾನದಲ್ಲಿ ದೇವಗಿರಿಯ ಯಾದವರೂ ಸಹ ಲಾಟದ ಮೇಲೆ ಕಣ್ಣಿಟ್ಟಿದ್ದರು.

ಕಲ್ಯಾಣಿ ಚಾಲುಕ್ಯರ ಅವನತಿಯ ನಂತರ ಗುಜರಾತ್‌ನ ರಾಜಕೀಯ ಸ್ಥಿತಿಗಳು ಅಲ್ಲೋಲ–ಕಲ್ಲೋಲ ಆಗತೊಡಗಿದವು. ದೆಹಲಿಯ ಸುಲ್ತಾನರಲ್ಲಿ ಖಿಲ್ಜಿಗಳು, ನಂತರ ತುಘಲಕರು ದಖ್ಖನ್ನಿನ ಮೇಲೆ ಧಾಳಿಗಳನ್ನು ತೀವ್ರಗೊಳಿಸಿದರು. ದೇವಗಿರಿಯ ಯಾದವರು ಗುಜರಾತ್‌ನ ಮೇಲೆ ಹತೋಟಿ ಹೊಂದಲು ಹೆಣಗುತ್ತಿದ್ದರು. ವಿದೇಶೀಯರ ಆಕ್ರಮಣಗಳು ಹೆಚ್ಚಾಗತೊಡಗಿದವು. ಗುಜರಾತ್‌ನ ಆರ್ಥಿಕ ಹಾಗೂ ವಾಣಿಜ್ಯ ವ್ಯವಹಾರಗಳು ಅಧಃಪತನ ಕಾಣತೊಡಗಿದವು. ಈ ನಡುವೆ ಕ್ಷಾಮಗಳಿಗೆ ರಾಜ್ಯ ತುತ್ತಾಗತೊಡಗಿತು. ೧೪ನೇ ಶತಮಾನದ ಹೊತ್ತಿಗೆ ಲಾಟರು ತಮ್ಮ ವ್ಯಾಪಾರ ವ್ಯವಹಾರಗಳನ್ನು ಮಹಾರಾಷ್ಟ್ರ, ರಾಜಸ್ಥಾನ, ಕರ್ನಾಟಕಗಳಲ್ಲಿ ಬಲಪಡಿಸಿಕೊಂಡು ವಲಸೆ ಹೋಗಲಾರಂಭಿಸಿದರು. ಸೂರತ್‌ನಂತಹ ಅತಿ ಚುರುಕಿನ ವಾಣಿಜ್ಯ ಕೇಂದ್ರ

ಮರಾಠರ ಮತ್ತು ಮೊಘಲರ ಶೀತಲ ಸಮರದ ಕೇಂದ್ರ ಬಿಂದುವಾಗಿ ಲಾಟ ರಾಜ್ಯ ಸಂಪೂರ್ಣವಾಗಿ ಛಿದ್ರಗೊಳ್ಳಲು ಕಾರಣವಾಯಿತು. ಸೂರತ್‌ನಲ್ಲಿ ಪೋರ್ಚುಗೀಸರು, ಡಚ್ಚರು, ಆಂಗ್ಲರು ಬೀಡುಬಿಡತೊಡಗಿದರು. ಈ ಐರೊಪ್ಯರೊಂದಿಗೆ ಸರಿಸಾಟಿಯಾಗಿ ಲಾಠ ವ್ಯಾಪಾರಿಗಳು ನಿಲ್ಲದಾದರು. ಹೀಗಾಗಿ ವಲಸೆ ಹೋಗುವುದು ಲಾಟರಿಗೆ ಅನಿವಾರ್ಯವಾಯಿತು. ಮುಂಬಯಿಯನ್ನು ಪಶ್ಚಿಮ ತೀರದ ಮುಖ್ಯ ವಾಣಿಜ್ಯ ಕೇಂದ್ರವನ್ನಾಗಿಸಿಕೊಂಡು ಬ್ರಿಟೀಷರು ಕ್ರಮೇಣ ಗುಜರಾತ್‌ನ ಪ್ರಮುಖ ವ್ಯಾಪಾರಿ ಪಟ್ಟಣಗಳಾದ ಸೂರತ್‌ಷ ಭಡೋಚ್, ನವಸಾರಿ, ವಲ್‌ಸಾಡ್ ಪ್ರದೇಶಗಳಲ್ಲಿ ತಮ್ಮ ಹಿಡಿತ ಬಿಗಿಗೊಳಿಸಿದರು. ಇದು ಲಾಟರಿಗೆ ಉಸಿರು ಕಟ್ಟಿಸುವ ಸ್ಥಿತಿ ತಂದೊಡ್ಡಿ ಅವರು ವಲಸೆ ಹೋಗುವುದು ಅಗತ್ಯವೆನಿಸಿದ್ದು ಆಶ್ಚರ್ಯವೆನಿಸಿದು.

ಈ ಮುಂಚೆಯೇ ಚರ್ಚಿಸಿರುವಂತೆ ಶಾತವಾಹನರು ಮತ್ತು ಸತ್ರಪರ ನಡುವೆ ಲಾಡ ದೇಶದ ಮೇಲಿನ ಹತೋಟಿಗಾಗಿ ಘರ್ಷಣೆಗಳು ಆರಂಭವಾದಾಗ, ನಾಸಿಕದ ಪಂಡರ್‌ಲೇನ್‌ನ ಶಾಸನ ತಿಳಿಸುವಂತೆ, ಲಾಟ–ಬ್ರಾಹ್ಮಣರನ್ನು ಸತ್ರಪರ ಕೈಸೆರೆಯಿಂದ ಬಿಡಿಸಿ ಶಾತವಾಹನರ ದೊರೆ ಗೌತಮೀ ಪುತ್ರ ಸಾತಕರ್ಣಿಯ ತನ್ನ ರಾಜಧಾನಿಯಾಗಿದ್ದ ಪೈಠಣದಲ್ಲಿ ಲಾಡ ಬ್ರಾಹ್ಮಣರಿಗೆ ಆಶ್ರಯ ನೀಡಿದನೆಂದು ತಿಳಿದುಬರುತ್ತದೆ. ಹೀಗಾಗಿ ಕ್ರಿ.ಶ. ೨ನೇ ಶತಮಾನದ ಸಮಯದಲ್ಲೇ ಲಾಟ ಬ್ರಾಹ್ಮಣರು ಗುಜರಾತಿನ ಭಾಗಗಳಿಂದ ಈಗಿನ ಒಸ್ಮಾನಾಬಾದ್ ಜಿಲ್ಲೆಯ ತಗರ ಹಾಗೂ ಲಾತೂರ್‌ಗಳಲ್ಲಿ ನೆಲೆಸಿ. ತದನಂತರ ಧಾರಾಶಿವ್ ಹಾಗೂ ವಿಧರ್ಭದ ಕಡೆ ಸಾಗಿದರೆಂದು ತಿಳಿಯಬಹುದು.

ಆದರೆ, ಜೈನಧರ್ಮಕ್ಕೆ ಪರಿವರ್ತನೆ ಹೊಂದಿದ ಲಾಡರು ಕಲ್ಯಾಣಿ ಚಾಲುಕ್ಯರ ಸಮಯದಲ್ಲಿ ಗುಜರಾತಿನಿಂದ ವಲಸೆ ಬಂದು ರಾಜಸ್ಥಾನ, ಮಹಾರಾಷ್ಟ್ರಗಳಲ್ಲಿ ನೆಲೆಸಿದರೆಂದು ತಿಳಿದುಬರುತ್ತದೆ.

### ಕಾರಂಜಾ ಲಾಡ್

ದಕ್ಷಿಣ ಗುಜರಾತ್‌ನ ಲಾಟ ದೇಶದಿಂದ ಲಾಟ ಜನಾಂಗದವರು ಸುಮಾರು ೧೪ನೇ ಶತಮಾನದಲ್ಲಿ 'ದುರ್ಗಾಕ್ಷಾಮ' ತಲೆದೋರಿದಾಗ ಮಹಾರಾಷ್ಟ್ರಕ್ಕೆ ವಲಸೆ ಬಂದರು. ಹೀಗೆ ವಲಸೆ ಬಂದವರಲ್ಲಿ ಬ್ರಾಹ್ಮಣ ಲಾಡರು. ಕ್ಷತ್ರಿಯ ಲಾಡರು ಹಾಗೂ ಜೈನ ಪಂಗಡದ ಲಾಡರಿದ್ದರು. ಕ್ರಮೇಣ ಕ್ಷತ್ರಿಯ ಹಾಗೂ ಬ್ರಾಹ್ಮಣ ಲಾಡರು ಕರ್ನಾಟಕ ಹಾಗೂ ಮಹಾರಾಷ್ಟ್ರದ ಇತರೆಡೆಗಳಿಗೆ ವಲಸೆ ಹೋದರು. ಆದರೆ ಜೈನಲಾಡರು ವಾಷಿಂ ಜಿಲ್ಲೆಯ ಕಾರಂಜಾದಲ್ಲಿ ನೆಲೆಸಿದರು. ಅವರ ಪಂಗಡದವರು ರಾಜಸ್ತಾನದ ಕೋಟ ಮುಂತಾದೆಡೆ ನೆಲೆಸಿದ್ದಾರೆ.ಕಾರಂಜಾದಲ್ಲಿ ದಿಗಂಬರ ಜೈನ ಬಸದಿಗಳನ್ನು ಸಹ ನಿರ್ಮಾಣ ಮಾಡಿದ್ದಾರೆ. ಹೀಗಾಗಿ ಕಾರಂಜಾಲಾಡರ ಒಂದು ಮುಖ್ಯ ನೆಲೆಯಾಗಿದೆ. ಅವರ ಸಂಖ್ಯೆಯೇ ಇಲ್ಲಿ ಹೆಚ್ಚಾಗಿ ನೆಲೆಸಿದ್ದರಿಂದ ಇದನ್ನು 'ಕಾರಂಜಾ ಲಾಡ' ಎಂದು ಕರೆಯಲಾಗಿದೆ.

ಕಾರಂಜಾ ನಗರವು ಮಹಾರಾಷ್ಟ್ರದ ವಾಷಿಂ ಜಿಲ್ಲೆಯಲ್ಲಿದೆ. ಇದು **ಮುರ್ತುಜಾಪುರ್ ತೆಹಸಿಲ್‌ಗೆ ಸೇರುತ್ತದೆ. ಕಾರಂಜಾದ ರೈಲ್ವೆ ನಿಲ್ದಾಣವು ಮುರ್ತಿಜಾಪುರ–ಯವತ್‌ಮಾಲ್‌ನ ನ್ಯಾರೋಗೇಜ್‌ನ ಸಣ್ಣ ಹಳಿಗಳ ರೈಲ್ವೆ ವ್ಯವಸ್ಥೆಯಾಗಿದೆ. ಸಾಕಷ್ಟು ಸಮತಟ್ಟಾದ ಪ್ರದೇಶದಲ್ಲಿರುವ 'ಕಾರಂಜಾ' ನಗರದ ಹೆಸರು ಪ್ರಾಚೀನ ಋಷಿ 'ಕರಂಜ' ಮುನಿಗಳಿಂದ ಪಡೆದಿದೆ. ಕಾರಂಜಾನಗರ ಒಂದು ಪ್ರಾಚೀನ ಐತಿಹಾಸಿಕ ಪಟ್ಟಣವಾಗಿದ್ದು ನಾಲ್ಕೂ ದಿಕ್ಕುಗಳಿಂದ ಭದ್ರವಾದ ಕೋಟೆಗಳಿಂದ ಸುತ್ತುವರೆದಿದೆ.** ಕಾರಂಜಾವು ಚಾರಿತ್ರಿಕವಾಗಿ ಮಹತ್ವ ಹೊಂದಿದ್ದು ಅಪಾರ ಐಶ್ವರ್ಯವನ್ನು ಹೊಂದಿತ್ತು. ಇಂದಿಗೂ ಸಹ ಅದು ಒಂದು ಸಂಪದ್ಭರಿತ ನಾಡಾಗಿದೆ. 'ಪುರಂಧರಘಡ ಒಪ್ಪಂದ'ದ ನಂತರ ಔರಂಗಜೇಬನು ಶಿವಾಜಿಗೆ ಅವನ ಆಗ್ರಾ ಪ್ರವಾಸದ ಬಾಬ್ತು ಖರ್ಚು ಹಣ ಒಂದು ಲಕ್ಷ ರೂಪಾಯಿಗಳನ್ನು ನೀಡಿದ್ದನು. ಆ ಹಣದ ಮೊಬಲಗನ್ನು ಹಿಂತಿರುಗಿ ಪಡೆಯಲು **ಶಿವಾಜಿಯ ಬೇರಾರ್‌ನ ಜಹಗೀರನ್ನು ಔರಂಗಜೇಬನು ಆಕ್ರಮಿಸಿದನು.** ಶಿವಾಜಿಯು ಒಬ್ಬ ಚಾಣಾಕ್ಯ ರಾಜಕೀಯ ಮುತ್ಸದ್ದಿಯಾಗಿದ್ದು. ದೆಹಲಿ ಚಕ್ರವರ್ತಿಯ ಅಂತಹ ವರ್ತನೆಯನ್ನು ನಿರೀಕ್ಷಿಸಿದ್ದು ತನ್ನ ಸೇನಾಪತಿಗಳಲ್ಲೊಬ್ಬನಾದ ಪ್ರತಾಪರಾವ್ ಗುಜ್ಜರ್‌ನನ್ನು ಸೈನ್ಯ ಸಮೇತ ಸಿದ್ದವಾಗಿರಲು ಸೂಚಿಸಿದನು. ಡಿಸೆಂಬರ್‌ನ ೧೬೭೦ರಲ್ಲಿ ಪ್ರತಾಪರಾವ್ ಗುಜ್ಜರ್ ಕಾರಂಜಾವನ್ನು ಮುತ್ತಿಗೆ ಹಾಕಿ ಅಲ್ಲಿನ ಸಂಪತ್ತನ್ನು ಲೂಟಿ ಮಾಡಿದನು. ಒಂದು ಅಂದಾಜಿನ ಪ್ರಕಾರ ಗುಜ್ಜರನು ಸುಮಾರು ೪೦೦೦ ಎತ್ತಿನ ಬಂಡಿ ಹಾಗೂ ಕುದುರೆಗಳ ಮೇಲೆ ಬಂಗಾರ, ಬೆಳ್ಳಿ ಹಾಗೂ ಹತ್ತಿ ಬಟ್ಟೆಯನ್ನು ಕೊಳ್ಳೆ ರೂಪದಲ್ಲಿ ಸಾಗಿಸಿದನೆಂದು ಹೇಳಲಾಗಿದೆ.

ಶಿವಾಜಿಯ ಕಾರಂಜಾವನ್ನು ಕೊಳ್ಳೆ ಹೊಡೆಯಲು ಕಾರಣ ಅಲ್ಲಿನ ಅಪಾರ ಸಂಪತ್ತು ಕಾರಂಜಾ ಎಷ್ಟು ಸಂಪದ್ಭರಿತವಾಗಿತ್ತೆಂಬುದನ್ನು ಈ ಕೆಳಗಿನ ಘಟನೆಯಿಂದ ತಿಳಿಯಬಹುದು.

**ಕಸ್ತೂರಿ ಮಹಲ್‌ನ ಐತಿಹ್ಯ:**

**ಕಸ್ತೂರಿ ಮಹಲ್‌ನ ಕಥೆಯು ಲೇಕೂರ್ ಸಾಂಗಾಯ್ ಎಂಬ ಒಬ್ಬ ಲಾಡ ಶ್ರೀಮಂತನ ಬಗೆಗಿನ ವಿವರಣೆ. ಲೇಕೂರ್ ಸಾಂಗಾಯ್ ಇಡೀ ವಿದರ್ಭ ರಾಜ್ಯದಲ್ಲೇ ಅತ್ಯಂತ ಶ್ರೀಮಂತ ವರ್ತಕನಾಗಿದ್ದನು.** ಆದರೂ ಸಹ ಅವನು ಅತಿ ಬಡತನದ ಜೀವನ ಸಾಗಿಸುತ್ತಿದ್ದ ಜಗ್ಗುನಾಗಿದ್ದನು. ನೋಡಲು ತೀರಾ ಸಾಮಾನ್ಯನಂತೆ ಉಡುಪು ಧರಿಸುತ್ತಿದ್ದನು. ಕಾರಂಜಾ ಪಟ್ಟಣದ ವಿದರ್ಭ ರಾಜ್ಯದ ದೊರೆಗೆ ಒಮ್ಮೆ ತನ್ನ ರಾಜ್ಯದಲ್ಲಿ ಶ್ರೀಮಂತರು ಯಾರಾದರೂ ಇದ್ದಾರೆಯೇ ಹೇಗೆ ಎಂಬ ಸಂಶಯ ಬಂದಿತು. ಅದನ್ನು ಪರೀಕ್ಷಿಸಲು ದೊರೆಗೆ ಒಂದು ಉಪಾಯ ಹೊಳೆಯಿತು. ತನ್ನ ಸೇನಾಪತಿಯೊಬ್ಬನನ್ನು ಕರೆದು ಭಂಡಾರದಲ್ಲಿರುವ ಬೆಲೆಬಾಳುವ ಕಸ್ತೂರಿಯನ್ನು ಒಂಟೆಗಳ ಮೇಲೆ ಹೇರಲು ಆಜ್ಞಾಪಿಸಿದನು. ಅದೆಲ್ಲಾ ಸೇರಿ ಒಟ್ಟು ಅರವತ್ತು ಒಂಟೆಗಳ ಹೊರೆಯಾಯಿತು. ಆ ಇಡೀ

ಕಸ್ತೂರಿ ಹೊರೆಯನ್ನು ಒಂದೇ ಸ್ವರೂಪದ ನಾಣ್ಯಗಳಲ್ಲಿ ಕಂಡುಕೊಳ್ಳುವವನು ರಾಜ್ಯದಲ್ಲಿ ಯಾರಿದ್ದಾನೆ ಎಂಬುದನ್ನು ತಿಳಿದುಕೊಳ್ಳಲು, ಈ ಒಂಟೆಗಳ ಹೊರೆಯ ಜೊತೆ ಸೇನಾಪತಿ ೬೦೦ ಸೈನಿಕರೊಡನೆ ಇಡೀ ರಾಜ್ಯದಲ್ಲಿ ಸಂಚರಿಸಿ. ಅಂತಹ ಶ್ರೀಮಂತ ಅಥವಾ ಸಾಮಂತನನ್ನು ಪತ್ತೆಹಚ್ಚಬೇಕೆಂದು ಆಜ್ಞಾಪಿಸಿದನು. ದೊರೆಯ ಅಪ್ಪಣೆಯಂತೆ ಸೇನಾಪತಿಯ ತನ್ನ ತಂಡದೊಡನೆ ಹೊರಬಿದ್ದನು. ದಾರಿಯಲ್ಲಿ ರಾಜನ ಸಂದೇಶವನ್ನು ಭಟರು ಸಾರುತ್ತಾ ಸಾಗಿದರು. ರಾಜ್ಯದ ಅನೇಕ ಪ್ರಾಂತ್ಯಗಳಲ್ಲಿ ಕೆಲವು ಸಾಮಂತರಿದ್ದರೂ ಸಹ ಅವರುಗಳು ಅಷ್ಟೊಂದು ಕಸ್ತೂರಿಯನ್ನು ಒಂದೇ ಸ್ವರೂಪದ ಅಂದರೆ, ಅಕ್ಬರನ, ಷಹಜಹಾನನ ಅಥವಾ ಔರಂಗಜೇಬನ ಕಾಲದ ನಾಣ್ಯಗಳಾದ ಮೊಹರ್, ದಿನಾರ್ ಅಥವಾ ಪಗೋಡಾ ಎಂಬ ಚಿನ್ನದ ನಾಣ್ಯಗಳಲ್ಲಿ ಇಡೀ ಕಸ್ತೂರಿಯ ಬೆಲೆಯನ್ನು ಯಾವುದಾದರೂ ಒಂದುಜಾತಿ ನಾಣ್ಯದಲ್ಲೇ ಪಾವತಿ ಮಾಡಬೇಕೆಂಬ ಷರತನ್ನು ಪಾಲಿಸಲು ಅಸಮರ್ಥರಾದರು. ಎಲ್ಲಾ ಪ್ರಾಂತ್ಯಗಳನ್ನು ಸುತ್ತುಹಾಕುತ್ತಾ, ಕಾರಂಜಾ ಲಾಡನ ಪ್ರದೇಶಕ್ಕೆ ಬಂದಾಗ, ಅಲ್ಲಿನ ಶ್ರೀಮಂತ ಲೇಕೂರ್ ಸಾಂಗಯ್ ತನ್ನ ಸಾಮಾನ್ಯ ಉಡುಪಾದ ದಟ್ಟಿ ಪಂಚೆ ಹಾಗೂ ಮಾಸಲು ಅಂಗಿತೊಟ್ಟು ತನ್ನ ಪ್ರಾತರ್‌ವಿಧಿಗಳನ್ನು ತೀರಿಸಲು ತಂಬಿಗೆ ನೀರಿನೊಂದೊಗೆ ಬಯಲು ಕಡೆಗೆ ಸಾಗುತ್ತಿದ್ದನು. ರಾಜನ ಪಡೆ ಹಾಗೂ ಒಂಟೆಗಳ ಮೆರವಣಿಗೆ ಕಂಡು ಕುತೂಹಲವುಂಟಾಗಿ, ಸೇನಾಪತಿಯನ್ನು ವಿಚಾರಿಸಲಾಗಿ, ಇವನ ಅತಿ ಸಾಧಾರಣ ಉಡುಪನ್ನು, ಕೈಯಲ್ಲಿನ ತಂಬಿಗೆ ಕಂಡು, ಸೇನಾಪತಿಯ ವ್ಯಂಗ್ಯವಾಗಿ ತಿರಸ್ಕಾರದ ನಗೆನಕ್ಕು ***''ಈ ವಸ್ತುಗಳು ನಿನ್ನ ಯೋಗ್ಯತೆಗೆ ಮೀರಿದ್ದು, ಸುಮ್ಮನೆ ನಿನ್ನ ದಾರಿ ಹಿಡಿದು ನಡೆ''*** ಎಂದು ಗದರಿದನು. ಲೇಕೂರ್ ಸಾಂಗಯ್ ಮರುಮಾತನಾಡದೆ ತನ್ನ ಹಾದಿ ಹಿಡಿದ. ಪ್ರಾಂತ್ಯಗಳನ್ನು ದಾಟುತ್ತಾ ಶ್ರೀಮಂತನನ್ನು ಹುಡುಕುತ್ತಾ ಸೇನಾಪತಿ ಮತ್ತವನ ತಂಡ ಕಡೆಗೆ ಮಿತ್ರ ರಾಜ್ಯವಾದ ರತ್ನಗಿರಿಗೆ ಬಂದಿತು. ಆ ದೊರೆಯು ಸೇನಾಪತಿಯನ್ನು ಬರಮಾಡಿಕೊಂಡು ಅವರ ರಾಜನ ಯೋಗಕ್ಷೇಮ ವಿಚಾರಿಸಿ. ಕಡೆಗೆ ಬಂದ ಸಮಾಚಾರ ತಿಳಿದು, ಇಂತಹ ಸಂಪತ್ತನ್ನು ಖರೀದಿಸುವ ಸಾಮರ್ಥ್ಯವಿರುವುದು ಕೇವಲ ಕಾರಂಜಾದ ಲಾಡನಿಗೆ ಮಾತ್ರವೆಂದು ತಿಳಿಸಿದ.




ಕಸ್ತೂರಿ ಮಹಲ್

ತಮ್ಮ ರಾಜ್ಯಕ್ಕೆ ಮರಳುವ ಮಾರ್ಗದಲ್ಲಿ ಸೇನಾಪತಿಯು ಮತ್ತೊಮ್ಮೆ ರತ್ನಗಿರಿ ರಾಜನ ಮಾತಿನಂತೆ ಲಾಡ ಲೋಕೂರ್ ಸಂಗಯ್‌ನನ್ನು ಭೇಟಿ ಮಾಡಿದ. ಲಾಡನು ಹೊಸ ಮನೆಯೊಂದನ್ನು ಕಟ್ಟಿಸುವ ಕೆಲಸದಲ್ಲಿ ತನ್ಮಯನಾಗಿದ್ದನು. ಸ್ವತಃ ಸೇನಾಪತಿಯೇ ಬಂದು ತನ್ನನ್ನು ಮಾತನಾಡಿಸಿದ್ದನ್ನು ಕಂಡು ಲಾಡನು ಆಶ್ಚರ್ಯಚಕಿತನಾದನು. ಸೇನಾಪತಿಯು ತಾನು ತಂದಿರುವ ಕಸ್ತೂರಿಯ ಬಗ್ಗೆ ತಿಳಿಸಿ ಅದನ್ನು ಕೊಳ್ಳಲು ನೀಡಬೇಕಾದ ಹಣದ ಬಗ್ಗೆ ಷರತ್ತನ್ನು ತಿಳಿಸಿದನು. ಲಾಡನು ಮರುಮಾತನಾಡದೆ ಸೇನಾಪತಿಯನ್ನು ತನ್ನ ನೆಲಮಾಳಿಗೆಗೆ ಕರೆದುಕೊಂಡು ಹೋಗಿ ದೊಡ್ಡ ಸಂದೂಕಗಳಲ್ಲಿ ತುಂಬಿದ ವಿವಿಧ ರಾಜರ ಕಾಲದ ನಾಣ್ಯಗಳನ್ನು ತೋರಿಸಿ, ತನಗೆ ಬೇಕಾದ್ದನ್ನು ಆಯ್ದುಕೊಳ್ಳಲು ಹೇಳಿದ. ಸೇನಾಪತಿಯು, ಕೇವಲ ವ್ಯಕ್ತಿಯ ಬಟ್ಟೆಯಿಂದ ಅವನ ವ್ಯಕ್ತಿತ್ವ ಅಳೆಯಲು ಪ್ರಯತ್ನಿಸಿದ್ದನ್ನು ನೆನೆದು ನಾಚಿಕೆಪಟ್ಟುಕೊಂಡನು. ಅಕ್ಬರನ ಕಾಲದ ನಾಣ್ಯಗಳನ್ನು ಕಸ್ತೂರಿಯ ತೂಕಕ್ಕೆ ಸಮನಾಗಿ ನೀಡಿದ ನಂತರ ಸೇನಾಪತಿಯು, ಅಷ್ಟೊಂದು ಕಸ್ತೂರಿಯನ್ನು ಲಾಡನು ಏನು ಮಾಡುವನೆಂದು ಕೇಳಿದ್ದಕ್ಕೆ, ಲಾಡನು ತಾನು ಅದಕ್ಕೆ ಹಣ ನೀಡಿ ಕೊಂಡುಕೊಂಡ ನಂತರ ಅದನ್ನು ಬೇಕಾದ ರೀತಿ ಉಪಯೋಗಿಸಲು ಅಧಿಕಾರ ಹೊಂದಿರುವುದಾಗಿ ತಿಳಿಸಿದನು. ಆದರೆ, ಸೇನಾಪತಿಯು ಮತ್ತೆ ಮತ್ತೆ ಕೇಳಲು ಲಾಡನು ಅದನ್ನು ಮಣ್ಣಿನಲ್ಲಿ ಹಾಕುವುದಾಗಿ ತಿಳಿಸಿದನು. ಅದರಂತೆ ತನ್ನ ಆಳುಗಳನ್ನು ಕರೆದು ಇಡೀ ಕಸ್ತೂರಿಯ ಮೂಟೆಗಳನ್ನು ಹೊಸದಾಗಿ ಕಟ್ಟುತ್ತಿರುವ ಮನೆಯ ಕೆಲಸದ ಮಣ್ಣು ಗಾರೆಗಳಲ್ಲಿ ಹಾಕು ಕಲೆಸುವಂತೆ ಆಜ್ಞಾಪಿಸಿದನು. ಅವನ ಅಪ್ಪಣೆಯಂತೆ ಇಡೀ ಕಸ್ತೂರಿಯ ಹೊರೆಗಳನ್ನು ಮಣ್ಣಲ್ಲಿ ಕಲೆಸಲಾಯಿತು. ಅದನ್ನು ಬಳಸಿ ಕಸ್ತೂರಿ ಹವೇಲಿಯನ್ನು ಲೇಕೂರ್ ಸಾಂಗಾಯ್ ನಿರ್ಮಿಸಿದನು. ಅದು 'ಕಸ್ತೂರಿ ಮಹಲ್' ಎಂದು ಪ್ರಸಿದ್ಧಿಯಾಯಿತು. ಸೇನಾಪತಿಯು ರಾಜ್ಯಕ್ಕೆ ಹಿಂತಿರುಗಿ ರಾಜನಿಗೆ ಕಾರಂಜಾದ ಲಾಡನ ಸಂಪತ್ತಿನ ಬಗ್ಗೆ ವಿವರಿಸಿದನು. ರಾಜನು ಆನಂದದಿಂದ ತಲೆದೂಗಿ, ಲಾಡನನ್ನು ತನ್ನರಾಜ್ಯಕ್ಕೆ ಕರೆಸಿ ಸನ್ಮಾನಿಸಿದನು. ಅನೇಕ ವರ್ಷಗಳ ಕಾ ಆ ಕಸ್ತೂರಿ ಮಹಲ್‌ನ ಪರಿಮಳ ದೂರ ಪ್ರದೇಶಕ್ಕೂ ಪಸರಿಸಿತ್ತು. ಆ ಮಹಲ್‌ನ ಮಣ್ಣನ್ನು ಕೆರೆದು ತೆಗೆದುಕೊಂಡು. ಹೋಗಿ ಅದನ್ನು ಔಷಧಿಯಾಗಿ, ಹಾಲಿನಲ್ಲಿ ಬೆರೆಸಿ ಖಾಯಿಲೆಗಳಿಗೆ, ಮಕ್ಕಳಿಗೆ ಮತ್ತಿತರರಿಗೆ ನೀಡಲಾಗುತ್ತಿತ್ತು. ಇಂದು ಕಸ್ತರಿ ಮಹಲ್ ಪಾಳುಬಿದ್ದು ನೋಡಿಕೊಳ್ಳುವವರಿಲ್ಲದೆ ಹಾಳಾಗುತ್ತಿದೆ.

**ದೇವಾಲಯಗಳು:**

ಮರಾಠರ ಭೋಸ್ಲೆಗಳ ಸೇನಾಪತಿಯಾಗಿದ್ದ ಭಾವನರಾವ್ ಕಾಳು ಎಂಬಾತನು ಕಾರಂಜಾದ ಜಿಲ್ಲ ವಾಷಿಂನಲ್ಲಿ ಬಾಲಾಜಿ ಮಂದಿರವೊಂದನ್ನು ನಿರ್ಮಿಸಿದ್ದಾರೆ.

ಶ್ರೀ ಭಗವಾನ್ ದತ್ತಾತ್ರೇಯರ ಎರಡನೇ ಅವತಾರವೆಂದು ಪರಿಗಣಿಸಲಾಗಿರುವ ಶ್ರೀನೃಸಿಂಹ ಸರಸ್ವತಿಯವರು ಕಾರಂಜಾ ಲಾಡ್ ಪಟ್ಟಣದಲ್ಲಿ ಅಂಬಾ ಭವಾನಿ ಹಾಗೂ

ಮಾಧವರ ಮಗನಾಗಿ ಜನ್ಮತಾಳಿದರು. ವೇದಾಧ್ಯಯನ ಮಾಡಿ, ನಂತರ ಕಾಶಿಯಲ್ಲಿ ಶ್ರೀಕೃಷ್ಣ ಸರಸ್ವತಿಯವರ ಬಳಿ ಶಿಷ್ಯರಾಗಿ 'ನೃಸಿಂಹಸರಸ್ವತಿ' ಎಂಬ ಹೆಸರು ಪಡೆದು ಸನ್ಯಾಸಾಶ್ರಮ ಸ್ವೀಕರಿಸಿದರು. ನಂತರ ಗಾಣಗಾಪುರದಲ್ಲಿ ದತ್ತಾತ್ರೇಯ ಪೀಠ ಸ್ಥಾಪಿಸಿದರು. ಅದಕ್ಕೆ ಮುಂಚೆ ನರಸೋಬಾವಾಡಿ, ಔದುಂಬರ ಹಾಗೂ ಭೀತವಾಡಿಗಳನ್ನು ಸಂದರ್ಶಿಸಿದರು. ಅನೇಕ ಪವಾಡಗಳನ್ನು ಮಾಡಿ ರೋಗ–ರುಜಿನಗಳನ್ನು ವಾಸಮಾಡಿದರು. ಪ್ರಾಪಂಚಿಕ ಸಮಸ್ಯೆಗಳಿಗೆ ಅನೇಕ ಪರಿಹಾರಗಳನ್ನು ಸೂಚಿಸಿದರು. **೧೯೩೩ರ ಡಿಸೆಂಬರ್ ೩ ರಂದು ಕಾರಂಜದಲ್ಲಿ ನರಸಿಂಹ ಸರಸ್ವತಿಯವರ ಪಾದುಕೆಗಳನ್ನು ಸ್ಥಾಪಿಸಿ ದತ್ತ ಮಂದಿರ ನಿರ್ಮಿಸಿ ಮಹರ್ಷಿ ಅಣ್ಣಾಸಾಹೇಬ್ ಪಟವರ್ಧನರ ನೇತೃತ್ವದಲ್ಲಿ ದೇವಳದ ನಿರ್ಮಾಣ ಕೈಗೊಳ್ಳಲಾಯಿತು.**



ಪದ್ಮಾವತಿ – ನೃಸಿಂಹ ಸರಸ್ವತಿ (ಲಾಡ ಕಾರಂಜಾ, ಮಹಾರಾಷ್ಟ್ರ)

ಇದಲ್ಲದೆ ಕಾರಂಜಾದಲ್ಲಿ ಮೂರು ಜೈನ ದೇವಾಲಯಗಳನ್ನು ಲಾಡರು ನಿರ್ಮಿಸಿದ್ದಾರೆ. ಇವರು ಜೈನ ದಿಗಂಬರ ಶ್ರಾವೊಕ ಲಾಡರೆಂದು ಹೆಸರುವಾಸಿಯಾಗಿದ್ದಾರೆ. ಜೈನ ದೇವಲಾಯಗಳಲ್ಲಿ ಮೊದಲನೆಯದು ಪಾರ್ಶ್ವನಾಥ ಮಂದಿರ. ಇದನ್ನು ಅಪಾರವಾದ ಕಟ್ಟಿಗೆಯಿಂದ ಕೆತ್ತಿದ ಅಪೂರ್ವ ಕಲೆಯಿಂದ ನಿರ್ಮಿಸಿದ್ದಾರೆ. ಇದಲ್ಲದೆ ಪದ್ಮಾವತಿ ಬಸದಿ ಹಾಗೂ ಬಲತ್ಕರ್ ಎಂಬ ದೇವಳ ಮುಖ್ಯವಾದವು. ಈ ದೇವಾಲಯಗಳಲ್ಲಿ ಪ್ರಾಚೀನ ಪ್ರಾಕೃತ ಹಾಗೂ ಅಪಭ್ರಂಶ ಭಾಷೆಗಳ ಅತಿಹಳೆಯ ಹಸ್ತಪ್ರತಿಗಳು, ಶಾಸನಗಳು, ಓಲೆಗರಿಗಳು ಸುರಕ್ಷಿತವಾಗಿ ಒಪ್ಪ

ಓರಣಗಳೊಂದಿಗೆ ಸಂರಕ್ಷಿಸಲಾಗಿದೆ. ಭಾದ್ರಪದಮಾಸದಲ್ಲಿ ಇಲ್ಲಿ ಜೈನರ ಉತ್ಸವ ಸಮಾರಂಭಗಳು ಜರಗುತ್ತವೆ.

ತುಕಾರಾಮ್ ಭಗವಾನ್ ಕನ್ನಾವಾ ಎಂಬುವರು ೧೮೭೬ರಲ್ಲಿ ಒಂದು ಲಕ್ಷ ರೂಪಾಯಿ ವೆಚ್ಚ ಮಾಡಿ ಶ್ರೀರಾಮದೇವರ ದೇವಸ್ಥಾನ ಕಟ್ಟಿಸಿದರು. ಸ್ವತಃ ಶ್ರೀರಾಮಚಂದ್ರನು ಕಾಮಾಕ್ಷಿದೇವಿ ದೇವಾಲಯ ಏಕಾಕ್ಷಿದೇವಿ ದೇವಾಲಯ ಹಾಗೂ ಕೋಟೇಶ್ವರ ಮಹಾದೇವ ದೇವಾಲಯಗಳನ್ನು ಕಟ್ಟಿಸಿದನೆಂದು ಪ್ರತೀತಿ ಇದೆ. ಔರಂಗಜೇಬನು ಕಾರಂಜಾದಲ್ಲಿನ ಹೇಮದ್‌ಪೌಳಿ ದೇವಾಲಯವನ್ನು ನಿರ್ನಾಮಗೊಳಿಸಿ ಆ ದೇವಾಲಯದ ಸಾಮಗ್ರಿ ಬಳಸಿ ಮಸೀದಿಯೊಂದನ್ನು ಕಟ್ಟಿಸಿದ್ದಾನೆ.

ಹಳೆಯ ಅಕೋಲಾ ಗೆಝೆಟಿಯರ್‌ನಲ್ಲಿ ಶ್ರೀ ಸದಾರಾಂ ಮಹಾರಾಜರ ಆಶ್ರಮವೊಂದಿದೆ ಎಂಬುದರ ಬಗ್ಗೆ ಉಲ್ಲೇಖವಿದೆ. ಅವರು ತಮ್ಮ ಗುರುಗಳ ಸೇವೆಯಿಂದ ಪುನೀತರಾಗಿ, ಪಂಡರಾಪುರದಲ್ಲಿ ತಮ್ಮ ಆಪ್ತರಿಗೆ ದರ್ಶನವಿತ್ತರೆಂಬುದನ್ನು ತಿಳಿಸುತ್ತದೆ.

ವ್ಯಾಪಾರೀ ಜನಾಂಗದವರಾದ ಲಾಡರು, ಗುಜರಾತಿನಲ್ಲಿ ಮುಸಲ್ಮಾನರ ಆಕ್ರಮಣಗಳ ಸಂದರ್ಭದಲ್ಲಿ ತಮ್ಮ ವ್ಯಾಪಾರ ವ್ಯವಹಾರಗಳು ಧೂಳೀಪಟವಾದಾಗ, ಅಲ್ಲದೆ ಸೂರತ್ ಮುಂತಾದೆಡೆ ಪೋರ್ಚುಗೀಸರು, ಡಚ್ಚರು, ಇಂಗ್ಲೀಷರು ತಮ್ಮ ವ್ಯಾಪಾರೀ ನೆಲೆಗಳನ್ನು ಸ್ಥಾಪಿಸಿದಾಗ ಲಾಟರ ವ್ಯಾಪಾರ ವಾಣಿಜ್ಯಗಳು ಕುಸಿದು, ಲಾಡರು ಗುಜರಾತನ್ನು ಬಿಟ್ಟು ವಲಸೆ ಹೋಗುವುದು ಅನಿವಾರ್ಯವಾಯಿತು. ಕ್ರಿ.ಶ. ೧೭೯೬ ರಿಂದ ೧೮೦೭ ರವರೆಗೆ ಕಾಡಿದ ಭೀಕರ ದುರ್ಗಾಕ್ಷಾಮವೂ ಲಾಡರ ವಲಸೆಗೆ ಮುಖ್ಯ ಕಾರಣ. ಹೀಗೆ ವಲಸೆ ಹೊರಟ ಲಾಡಜನಾಂಗಗಳು ಪೂರ್ವರಾಜಸ್ಥಾನ, ಮಹಾರಾಷ್ಟ್ರದ ವಿದರ್ಭ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ನೆಲೆಸಿದರು. ರಾಜಾಸ್ಥಾನದಲ್ಲಿ ರಾಜಪುತರು, ಮಹಾರಾಷ್ಟ್ರದಲ್ಲಿ ಮರಾಠರು ಹಾಗೂ ಕರ್ನಾಟಕದಲ್ಲಿ ವಿಜಯನಗರದ ಅರಸರು ಪ್ರಬಲರಾಗಿದ್ದ ಕಾಲವದು. ಹೀಗಾಗಿ ಲಾಟರು ತಮ್ಮ ವ್ಯಾಪಾರ ಚಟುವಟಿಕೆಗಳನ್ನು ಸಾಗಿಸಲು ಇವು ಸಹಕಾರಿಯಾದವು. ಕಿಷನ್‌ಘಡದಿಂದ ಕೋಟಾದವರೆಗೆ ರಾಜಾಸ್ಥಾನದಲ್ಲಿ , ಗುಜರಾತಿನ ಅಹಮದಾಬಾದ್, ಅಂಕಲೇಶ್ವರ್ ಹಾಗೂ ಸೂರತ್‌ನಲ್ಲಿ ಅಹಮದ್‌ನಗರ, ಔರಂಗಾಬಾದ್, ಓಸ್ಮಾನಾಬಾದ್, ಪುಣೆ, ಬುಲ್ಡಾನಾ, ಮುಂಬಯಿ, ವಾಷಿಂ, ನಾಗಪುರ, ಅಮರಾವತಿ, ಅಚಲಪುರ, ಮಧ್ಯಪ್ರದೇಶದ ಇಂದೋರ್, ಗ್ವಾಲಿಯರ್‌ಗಳಲ್ಲೂ ಹೀಗೆ ಮಹಾರಾಷ್ಟ್ರದ ಅನೇಕ ಕಡೆಗಳಲ್ಲಿ, ಬೀದರ್, ಗುಲ್ಬರ್ಗಾ, ಬಿಜಾಪುರ, ಬೆಳಗಾಂ, ಹುಬ್ಬಳ್ಳಿ–ಧಾರವಾಡ, ಚಿತ್ರದುರ್ಗ, ತುಮಕೂರು, ಬೆಂಗಳೂರು ಹಾಗೂ ಮೈಸೂರಿನ ಕರ್ನಾಟಕ ರಾಜ್ಯದಲ್ಲಿ ಲಾಡರು ನೆಲೆಸಿದ್ದಾರೆ.

ಪ್ರಾರಂಭದಲ್ಲಿ ಮಹಾರಾಷ್ಟ್ರದ ವಾಷಿಂ ಜಿಲ್ಲೆಯ ಕಾರಂಜ ಎಂಬ ಪ್ರದೇಶದಲ್ಲಿ ನೆಲೆಸಿ. ಅವರ ಸಂಖ್ಯೆಯೇ ಹೆಚ್ಚಾಗಿದ್ದುದರಿಂದ ಅದನ್ನು ಲಾಡಕಾರಂಜ ಎಂದು ಇಂದಿಗೂ

ಕರೆಯುತ್ತಾರೆ. ಕ್ರಮೇಣ ಅಲ್ಲಿದ್ದ ಲಾಡರನೇಕರು ಜೈನಧರ್ಮಕ್ಕೆ ಮತಾಂತರ ಹೊಂದಿದ್ದರಿಂದ ಉಳಿದವರು ಅಲ್ಲಿಂದ ಕರ್ನಾಟಕದ ಕಡೆಗೆ ವಲಸೆ ಬಂದು ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಯ ಸಿರಾ ಎಂಬ ಪಟ್ಟಣದಲ್ಲಿ ನೆಲೆಸಿದರು. ದುರ್ಗ ಹಾಗೂ ಸಿರಾವನ್ನು ವಶಪಡಿಸಿಕೊಂಡ ಹೈದರಾಲಿ ಹಾಗೂ ಟಿಪ್ಪು ಸುಲ್ತಾನ, ಸಿರಾದ ಲಾಡಪುರದಲ್ಲಿ ನೆಲೆಸಿದ್ದ ಲಾಡ ರಾಹುತರನ್ನು ನೋಡಿದ ಸುಲ್ತಾನ, ತನ್ನ ನೂತನ ಪಟ್ಟಣ **'ಷಹರ್ ಗಂಜಾಂ'**ದಲ್ಲಿ ನೆಲೆಸಿ. ಬ್ರಿಟೀಷರ ವಿರುದ್ಧ ಸೆಣೆಸಲು ಇವರೇ ಸಮರ್ಥರೆಂದು ಭಾವಿಸಿ. ಸುಮಾರು ಹದಿಮೂರು ಸಾವಿರ ರಾಹುತ್ ಕುಟುಂಬಗಳನ್ನು ಸಿರಾದಿಂದ ಒಕ್ಕಲೆಬ್ಬಿಸಿ, ಶ್ರೀರಂಗಪಟ್ಟಣದ ಗಂಜಾಂನಲ್ಲಿ ನೆಲೆಗೊಳಿಸಿದನು. ನಂತರ ಕಾಲದಲ್ಲಿ ಟಿಪ್ಪುವಿನ ಅವನತಿಯ ನಂತರ ಲಾಡರಾಹುತರು ಮೈಸೂರಿನ ಅರಸರಲ್ಲಿ ಆಶ್ರಯ ಅರಸಿ ವಲಸೆ ಹೋದರು. ಇಂದಿಗೂ ಮೈಸೂರು, ಶ್ರೀರಂಗಪಟ್ಟಣ, ಗಂಜಾಂ, ಮಂಡ್ಯಗಳಲ್ಲಿ ಲಾಡ ಮನೆತನಗಳಿರುವುದನ್ನು ಕಾಣಬಹುದು.

## ಲಾಡರಲ್ಲಿನ ವಿವಿಧ ಉಪ ಪಂಗಡಗಳು

ಈ ಮೊದಲೇ ಚರ್ಚಿಸಿರುವಂತೆ 'ಲಾಡ' ಎಂಬುದು ಒಂದು ಜಾತಿ ಸೂಚಕ ಪದವಲ್ಲ. ಲಾಟ ದೇಶದಲ್ಲಿ ನೆಲೆಸಿದ್ದವರೆಲ್ಲರೂ ಲಾಟ ಅಥವಾ ಲಾಡರು ಎಂದು ಕರೆಯಲ್ಪಟ್ಟಿದ್ದಾರೆ. ಅವರಲ್ಲಿ ಚತುರ್‌ವರ್ಣ ಪದ್ಧತಿ ಕಾಣಬಹುದು. ಲಾಡ ಬ್ರಾಹ್ಮಣರು ಕೇವಲ ಮಹಾರಾಷ್ಟ್ರ, ಮಧ್ಯಪ್ರದೇಶ ಹಾಗೂ ಬಂಗಾಳದ ಪ್ರದೇಶಗಳಲ್ಲಿ ನೆಲೆಸಿದ್ದಾರೆ.ಲಾಡ ಕ್ಷತ್ರಿಯರಲ್ಲಿ –ಸೌಧಾಗರ್ ಕ್ಷತ್ರಿಯ, ಸುಗಂಧಿ, ಎಲಿಗಾರ್, ಮರಾಠಾ ಕ್ಷತ್ರಿಯ, ಬ್ರಹ್ಮಕ್ಷತ್ರಿಯ, ಸೂರ್ಯವಂಶಿ ಕ್ಷತ್ರಿಯ ಹಾಗೂ ಲಾಡ ಕ್ಷತ್ರಿಯ ಎಂಬ ಏಳು ಪಂಡಗಳಿವೆ. ಈ ಎಲ್ಲ ಕ್ಷತ್ರಿಯ ಪಂಗಡಗಳೂ ಮಹಾರಾಷ್ಟ್ರ ಹಾಗೂ ಕರ್ನಾಟಕಗಳಲ್ಲಿ ನೆಲೆಸಿದ್ದಾರೆ. ಇವರೆಲ್ಲರ ದೊರೆಗಳಲ್ಲಿ ಕ್ಷತ್ರಿಯ ಸೈನಿಕರಾಗಿ ಮತ್ತು ಸರಂಜಾಮುಗಳನ್ನು ರಾಜರ ಆಸ್ಥಾನಗಳಿಗೆ ಸರಬರಾಜು ಮಾಡುವ ಉದ್ಯೋಗದಲ್ಲಿದ್ದರು. ಈಗ ಮುಖ್ಯವಾಗಿ ವ್ಯಾಪಾರೀ ವೃತ್ತಿಯನ್ನು ಕೈಗೊಂಡಿದ್ದಾರೆ. ಕರ್ನಾಟಕದಲ್ಲಿ ಬೀದರ್, ಗುಲ್ಬರ್ಗಾ, ಬಿಜಾಪುರ, ಬೆಳಗಾಂ, ಹುಬ್ಬಳ್ಳಿ–ಧಾರವಾಡ, ಚಿತ್ರದುರ್ಗ, ತುಮಕೂರು, ಬೆಂಗಳೂರು, ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಇವರ ಒಟ್ಟು ಸಂಖ್ಯೆ ಅಂದಾಜು ಹತ್ತರಿಂದ ಹದಿನೈದು ಸಾವಿರ ಮಾತ್ರ. ಇವರಲ್ಲಿ ೨೦೦೦–೨೫೦೦ ಸಂಖ್ಯೆಯಷ್ಟು ಜನ ತಮ್ಮ ಮೂಲ ಭಾಷೆ 'ಚೌರಾಸಿ'ಯನ್ನು ಮಾತನಾಡುತ್ತಾರೆ. ಆದರೆ, ಮಹಾರಾಷ್ಟ್ರದಲ್ಲಿ ನೆಲೆಸಿರುವ ಕ್ಷತ್ರಿಯರು ಕೇವಲ ಮರಾಠಿ ಭಾಷೆಯನ್ನು ಮಾತ್ರ ಮಾತನಾಡುತ್ತಾರೆ.

ವೈಶ್ಯ ಲಾಡರು ಗುಜರಾತಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಅವರು ವೈಷ್ಣವರು, 'ಬನಿಯಾ' ಎಂದು ಕರೆಯಲ್ಪಡುವರು. ಇವರು ವ್ಯಾಪಾರದಲ್ಲಿ ಹೆಚ್ಚಿನ ಅಭಿವೃದ್ಧಿ ಪಡೆದಿದ್ದಾರೆ. ಅಹಮದಾಬಾದ್, ಅಂಕಲೇಶ್ವರ್, ಭಾವನಗರ ಹಾಗೂ ಮುಂಬೈಗಳಲ್ಲಿ ಇವರ ವ್ಯವಹಾರ ಹರಡಿದೆ. ಅನೇಕ ವೈಷ್ಣವೀ ಲಾಡ ಇವರೂ ಸಹ ದಕ್ಷಿಣ

ಆಫ್ರಿಕಾ, ಅಮೇರಿಕಾ ಮುಂತಾದ ವಿದೇಶಗಳಲ್ಲಿಯೂ ನೆಲೆಸಿದ್ದಾರೆ. ಅಲ್ಲಿಯೂ ಅವರ ವೃತ್ತಿ ವ್ಯಾಪಾರ.

ಗುಜರಾತಿನ ಹಾಗೂ ಇತರ ರಾಜ್ಯಗಳಲ್ಲಿ ವಿಸ್ತರಿಸಿರುವ ಸಿಂದಿ ಕ್ಷತ್ರಿಯ ಲೋಹಾಣಾ ಲಾಡರು ಮತ್ತೊಂದು ಪಂಗಡ. ಇವರೂ ಸಹ ವ್ಯಾಪಾರದಲ್ಲಿ ತೊಡಗಿರುವ ಜನಾಂಗ. ಪಾಕಿಸ್ತಾನದ ಲಾಡಖಾನದಿಂದ ವಲಸೆ ಬಂದಿರುವ ಇವರು ತಮ್ಮ ಜನಾಂಗವನ್ನು ಅತ್ಯುತ್ತಮವಾಗಿ ಸಂಘಟಿಸಿದ್ದಾರೆ.

ಲಾಜ ಗುಜರಾತಿ ಶಿಪ್ಪಿವಾಣಿ ಎಂಬ ಲಾಡ ವೈಶ್ಯರ ಗುಂಪು ಮಹಾರಾಷ್ಟ್ರ, ಮಧ್ಯಪ್ರದೇಶ ಮುಂತಾದೆಡೆಗೆ ವಿಸ್ತರಿಸಿದ್ದಾರೆ.

ಮಹಾರಾಷ್ಟ್ರದ ರಾಧಾನಗರಿ ಹಾಗೂ ಕೊಲ್ಲಾಪುರಗಳಲ್ಲಿ ಬನಿಯಾ ಲಾಡರಿದ್ದಾರೆ. ಆದರೆ, ಅವರು ಮರಾಠಿ ಮನೆಮಾತನ್ನು ಹೊಂದಿದ್ದಾರೆ. ಇವರು ವೈಶ್ಯರಲ್ಲಿ ಸಸ್ಯಾಹಾರಿ ಹಾಗೂ ಮಾಂಸಾಹಾರಿಗಳಾಗಿರುವ ಏಕಮಾತ್ರ ಲಾಡ ವೈಶ್ಯ ಪಂಗಡವಾಗಿದೆ.

ಪ್ರಜಾಪತಿ ಅಥವಾ ಕುಂಬಾರ ಲಾಡರೂ ಸಹ ಗುಜರಾತಿನಲ್ಲೇ ನೆಲೆಸಿದ್ದಾರೆ. ನವಸಾರಿ, ಸೂರತ್ ಮುಂತಾದೆಡೆ ಇವರ ಸಂಖ್ಯೆ ಹೆಚ್ಚಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿರುವವರು ಕುಲಕಸುಬನ್ನು ಮುಂದುವರೆಸಿದ್ದಾರೆ. ವಿದ್ಯಾವಂತರು ಅನೇಕ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಎಲ್ಲಾ ಕುಂಬಾರರಂತೆಯೇ ಇವರ ಆಚಾರ–ವಿಚಾರಗಳೂ ಸಹ.

ಜೈನಲಾಡರು, ಗುಜರಾತ್, ರಾಜಸ್ಥಾನ ಹಾಗೂ ಮಹಾರಾಷ್ಟ್ರಗಳಲ್ಲಿ ನೆಲೆಸಿದ್ದಾರೆ. ಇವರು ನೆಲೆಸಿರುವ ಕಡೆಗಳಲ್ಲೆಲ್ಲಾ ತಮ್ಮದೇ ಸಂಘ ಸಂಸ್ಥೆಗಳನ್ನು ರಚಿಸಿಕೊಂಡು ಉತ್ತಮ ಒಗ್ಗಟ್ಟು, ಸೌಹಾರ್ದತೆಗಳನ್ನು ಮುಂದುವರೆಸಿದ್ದಾರೆ. ಗುಜರಾತ್‌ನ ಭಾವನಗರ, ರಾಜಸ್ಥಾನದ ಕೋಟಾ ಹಾಗೂ ಮಹಾರಾಷ್ಟ್ರದ ಕಾರಂಜಾಲಾಡ್ ಇವರ ಪ್ರಮುಖ ಸ್ಥಳಗಳು. ಮುಖ್ಯವಾಗಿ ಇವರು ದಿಗಂಬರ ಜೈನರು.

ಲಾಡ್ ಸೋನಾರ್ ಅಥವಾ ಅಕ್ಕಸಾಲಿಗಳು ಮತ್ತೊಂದು ಲಾಡರ ಪಂಗಡವಾಗಿದೆ. ಇವರು ಮಹಾರಾಷ್ಟ್ರದ ಅಹಮದ್‌ನಗರ, ಪುಣೆ, ಪೈಠಣ್ ಮುಂತಾದೆಡೆ ಹರಡಿದ್ದಾರೆ. ಅಹಮದ್‌ನಗರ, ಔರಂಗಾಬಾದ್ ಪ್ರದೇಶಗಳಲ್ಲಿ ಲಾಡ್ ಬೋವಿಗಳು ಸಹ ಸೀಮಿತಿ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಇವರು ಅಲೆಮಾರಿ ಜನಾಂಗ.

ಔರಂಗಾಬಾದ್, ಬೀಡ್, ಯವತ್‌ಮಾಲ್, ಬುಲ್ಡಾನಾ, ಅಹಮದ್‌ನಗರ ಜಿಲ್ಲೆಗಳಲ್ಲಿ ವ್ಯಾಪಕವಾಗಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವವರು ವಂಜಾರಾ ಲಾಡರು, ದನಕರು, ಕುರಿಗಳನ್ನು ಮೇಯಿಸಿಕೊಂಡು ಅಲೆಮಾರಿ ಜನಾಂಗವಾಗಿದ್ದ ವಂಜಾರರು ಇದೀಗ ಒಂದೆಡೆ ಸ್ಥಿರವಾಗಿ ನೆಲೆಸಲಾರಂಭಿಸಿದ್ದಾರೆ.

ಔರಂಗಾಬಾದ್‌ನ ಪ್ರದೇಶದಲ್ಲಿ ನೆಲೆಸಿರುವ ಮತ್ತೊಂದು ಪಂಗಡ ಗೌಳಿಲಾಡರು. ಇವರುಗಳು ಗೋಜನ್ಯ ಪದಾರ್ಥಗಳಾದ ಹಾಲು, ಮೊಸರು, ಬೆಣ್ಣೆ ಮುಂತಾದ

ಹೈನುಗಾರಿಕೆಯ ವಸ್ತುಗಳ ಮಾರಾಟ ಮಾಡಿ ಜೀವಿಸುತ್ತಾರೆ. ಹೆಚ್ಚು ಕಡಿಮೆ ವಂಜಾರ ಲಾಡರಂತೆಯೇ ಇವರೂ ಸಹ ತಮ್ಮದೇ ಆಚಾರ–ವಿಚಾರಗಳನ್ನು ಹೊಂದಿದ್ದಾರೆ.

ಒಕ್ಕಲಿಗ ಅಥವಾ ಪಾಟೀಲ್ ಲಾಡ್‌ಗಳು ಮತ್ತೊಂದು ಮುಖ್ಯ ಪಂಗಡ. ಇವರುಗಳು ವ್ಯವಸಾಯ ವೃತ್ತಿಯನ್ನು ಅನುಸರಿಸುತ್ತಾರೆ. ಕಬ್ಬು, ಭತ್ತ ಮುಂತಾದವನ್ನು ಬೆಳೆದು ತಮ್ಮದೇ ಆದ ಆಲೆಮನೆ ಮುಂತಾದವುಗಳನ್ನು ಹೊಂದಿರುತ್ತಾರೆ. ಲಾಡ್‌ಪಾಟೀಲ್ ಎಂದೇ ಕರೆಯಲ್ಪಡುವ ಇವರ ಸಂಖ್ಯೆ ಹೆಚ್ಚಾಗಿ, ಕೊಲ್ಹಾಪುರ, ಸತಾರಾ, ಸಾಂಗ್ಲಿ ಮುಂತಾದೆಡೆ ಹರಡಿದ್ದಾರೆ. ಭೈರೋನಾಥ್ ಹಾಗೂ ನಾಯಕ್ ಬಾ ಎಂಬ ಶಕ್ತಿ ದೇವತೆಗಳನ್ನು ಪೂಜಿಸುತ್ತಾರೆ. ಸಾಹುಮಹಾರಾಜರ ಬಳಿ ಸೈನಿಕ ವೃತ್ತಿ ಮಾಡುತ್ತಿದ್ದ ಇವರ ಮೂಲದವರು, ನಂತರದ ಕಾಲದಲ್ಲಿ ತಮ್ಮ ಶೌರ್ಯ–ಸಾಹಸಗಳಿಗೆ ದೊರೆ ಸಾಹುವಿನಿಂದ ಜಮೀನು ದತ್ತಿಯಾಗಿ ಪಡೆದು ವ್ಯವಸಾಯ ಆರಂಭಿಸಿದರೆನ್ನಲಾಗಿದೆ. ಸಸ್ಯಾಹಾರ ಮಾಂಸಾಹಾರಗಳೆರಡೂ ಇವರ ಆಹಾರ ಪದ್ಧತಿಯಾಗಿದೆ. ಮದುವೆಯ ೩–೪ ದಿನಗಳ ನಂತರ ಮಾಡುವ 'ಗೋಂದಳ್' ಎಂಬ ಶಾಸ್ತ್ರದಲ್ಲಿ ಮಾಂಸಾಹಾರದ ಅಡಿಗೆಯೇ ಪ್ರಧಾನ. ಪಾಟೀಲ್ ಲಾಡರ ಸಂಖ್ಯೆ ತುಂಬಾ ಕಡಿಮೆ. ಹೀಗಾಗಿ ಇವರು ಇತರ ಮರಾಠಾ ಒಕ್ಕಲಿಗರ ಗುಂಪುಗಳಾದ ಧನಗರ್, ಕುರುಬ ಜನಾಂಗಗಳ ಜೊತೆಯಲ್ಲಿ ವಿವಾಹ ಸಂಬಂಧಗಳನ್ನು ರೂಢಿಸಿಕೊಂಡಿದ್ದಾರೆ.

ಬೆಳಗಾಂ ಹಾಗೂ ಕೊಲ್ಹಾಪುರ, ಸಾಂಗ್ಲಿ ಪ್ರದೇಶಗಳಲ್ಲಿ ಲಾಡ ಮಲ್ಹಾರರೆಂಬ ಮತ್ತೊಂದು ಪಂಗಡದ ಲಾಡರು ವಾಸಿಸುತ್ತಾರೆ. ಇವರು ಮಚ್ಚಿಗಾಂವ್‌ನಿಂದ ವಲಸೆ ಬಂದು ಈ ಭಾಗಗಳಲ್ಲಿ ನೆಲೆಸಿದ್ದಾರೆ. ಇವರನ್ನು ಸ್ವಕುಳಿ ಮರಾಠಾ ಲಾಡರೆಂದು ಕರೆಯುತ್ತಾರೆ. ಮಹಾರಾಷ್ಟ್ರದ ಜೆಜೂರಿ ಎಂಬಲ್ಲಿರುವ 'ಖಂಡೋಬಾ' ಅಥವಾ ಮೈಲಾರಲಿಂಗ ಇವರ ಆರಾಧ್ಯದೈವ. ಸಸ್ಯಾಹಾರ ಹಾಗೂ ಮಾಂಸಾಹಾರಗಳೆರಡೂ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ. ಮಿಕ್ಕಂತೆ ಇವರು ಇತರ ಮಹಾರಾಷ್ಟ್ರೀಯ ಪಂಗಡಗಳಂತೆಯೇ ಆ ಪ್ರದೇಶದ ಆಚಾರ–ವಿಚಾರಗಳನ್ನು ರೂಢಿಸಿಕೊಂಡಿದ್ದಾರೆ ಇವರ ಮನೆಮಾತು ಸಹ ಮರಾಠಿ ಭಾಷೆಯೇ ಆಗಿದೆ. ಪತ್ರಕರ್ತ ಹಾಗೂ ಶಿಕ್ಷಕರಾಗಿರುವ ಅನಂತ್ ಸಿ. ಲಾಡ್ ಹಾಗೂ ವೈದ್ಯಕೀಯ ವೃತ್ತಿಯಲ್ಲಿ ಹೆಸರುಗಳಿಸಿ ಆಸ್ಪತ್ರೆ ಸ್ಥಾಪಿಸಿರುವ ಡಾ|| ಪುರೊಷೋತ್ತಮ ಲಾಡ್ ಈ ಜನಾಂಗದ ಇಬ್ಬರು ಪ್ರಸಿದ್ಧ ವ್ಯಕ್ತಿಗಳಾಗಿದ್ದಾರೆ.

ಮರಾಠಾ ಲಾಡರಲ್ಲಿ ಗೋಸಾವಿ ಲಾಡರು ಮತ್ತೊಂದು ಪಂಗಡ. ಇವರು ಹೆಚ್ಚಾಗಿ ಮಹಾರಾಷ್ಟ್ರದ ಸತಾರಾ ಜಿಲ್ಲೆಯಲ್ಲಿ ಹರಡಿದ್ದಾರೆ. ಹಿಂದೂ ಸಂಪ್ರದಾಯದಲ್ಲಿ ವಿವಾಹ. ಮುಂಜಿ ಮುಂತಾದ ಶುಭಕಾರ್ಯಗಳಿಗೆ ಮುಂಚೆ ದಾಸಯ್ಯ, ಗೊರವಯ್ಯಗಳನ್ನು ಕರೆಸಿ ಅವರಿಂದ ಪೂಜೆ–ಪುನಸ್ಕಾರ ಮಾಡಿಸಿ, ಅವರಿಗೆ ಊಟ, ದಕ್ಷಿಣೆ ಫಲ–ತಾಂಬೂಲಗಣನ್ನು ಕೊಟ್ಟು ಕಳುಹಿಸುವುದು ಪದ್ಧತಿ. ಅಂತೆಯೇ ಲಾಡರಲ್ಲಿ ದಾಸಯ್ಯ, ಗೊರವಯ್ಯಗಳೊಟ್ಟಿಗೆ ಗೋಸಾವಿಗಳನ್ನೂ ಕರೆಸಿ ಸತ್ಕರಿಸುವುದು ಅನೂಚಾನ

ಪದ್ಧತಿ. ಈ ಪರಂಪರೆಯ ಗೋಸಾವಿಗಳು ಕರ್ನಾಟಕದಲ್ಲಿ ಇತ್ತೀಚೆಗೆ ಕಂಡುಬರುತ್ತಿಲ್ಲ. ಆದರೆ, ಮಹಾರಾಷ್ಟ್ರದಲ್ಲಿ ಇವರ ಸಂಖ್ಯೆ ಇನ್ನೂ ಉಳಿದಿದೆ. ''ಗೋಸಾವಿ'' ಎಂಬ ಪದವು 'ಗೋಸ್ವಾ', ಎಂದರೆ, ಗೋವುಗಳ ಒಡೆಯ ಎಂಬ ಅರ್ಥದಲ್ಲಿ ಕೂಡಿದೆ. ಲಾಡ ಭಾಷೆಯಲ್ಲಿ 'ಗುಸ್ಯೆ' ಎಂದರೆ ಗಂಡ, ಅದರರ್ಥ, ಗೋವು ಎಂದರೆ ಹೆಣ್ಣಿಗೆ 'ಸ್ವಾಮಿ' ಅಥವಾ 'ಒಡೆಯ', 'ಯಜಮಾನ, ಎಂಬುದಾಗಿದೆ. ಮಹಾರಾಷ್ಟ್ರೀಯನ್ನರಲ್ಲಿ ಈ ಗೋಸಾವಿಗಳನ್ನು ಮಂಗಳ ಕಾರ್ಯಗಳಿಗೆ ಆಹ್ವಾನಿಸಿ, ಪೂಜೆ–ಪುನಸ್ಕಾರ ಮಾಡಿಸಿ, ಅವರಿಗೆ ಕಿವಿ ಚುಚ್ಚಿಸಿ ಚಿನ್ನದ ಕರ್ಣಕುಂಡಲಗಳನ್ನು ತೊಡಿಸಿ ಊಟ–ಉಪಚಾರಗಳೊಂದಿಗೆ ದಕ್ಷಿಣೆ, ವಸ್ತ್ರ, ಫಲ–ತಾಂಬೂಲಗಳನ್ನಿತ್ತು ಕಳುಹಿಸುತ್ತಾರೆ. (ಮುಖ ಪುಟ ಚಿತ್ರ)





ಲಾಡ ಗೋಸಾವಿಗಳ ಆಚರಣೆ

ಗೋಸಾವಿ ಲಾಡರ ಕುಲದೇವತೆ ಜ್ಯೋತಿಬಾ ಹಾಗೂ ತುಳಜಾ ಭವಾನಿ. ಗೋಸಾವಿಗಳನ್ನು 'ಡೌರಿ' ಲಾಡರೆಂದೂ ಕರೆಯುತ್ತಾರೆ. ಇವರು ಗೌಳಿಗರೂ ಹೌದು. ಸತಾರಾ ನಗರ ಒಂದರಲ್ಲೇ ಸುಮಾರು ೫೦–೬೦ ಕುಟುಂಬಗಳು ವಾಸಿಸುತ್ತಿವೆ. ಗೋಸಾವಿಗಳು ಅನೇಕ ವಾದ್ಯಗಳನ್ನು ನುಡಿಸುವುದರಲ್ಲಿ ನುರಿತವರು. ಇವುಗಳಲ್ಲಿ ಮುಖ್ಯವಾಗಿ ಏಕನಾದ, ಢಕ್ಕೆ ಹಾಗೂ ಡಮರುಗ ಮುಖ್ಯವಾದವು. ಸತಾರಾ ಬಳಿ ನಾಗಠಾಣಾ ರಸ್ತೆಯಲ್ಲಿರುವ 'ಸಾಸ್ ಪಡೆ' ಎಂಬಲ್ಲಿರುವ ಭೈರವ್ ಭವಾನಿ ದೇವಾಲಯದಲ್ಲಿ ಜರಗುವ ಪ್ರತಿವರ್ಷದ ಉತ್ಸವದಲ್ಲಿ ಗೋಸಾವಿಗಳು ತಪ್ಪದೆ ಪಾಲ್ಗೊಳ್ಳುತ್ತಾರೆ.

**ಲಾಡ ಬ್ರಾಹ್ಮಣರು :**

ಲಾಡ ಬ್ರಾಹ್ಮಣ ಲಾಡರು ಚತುರ್ವರ್ಣಗಳಲ್ಲಿ ಮೊದಲಿಗರು. ಇವರ ಬಗ್ಗೆ ಮಾಹಿತಿ ನೀಡುವ ಏಕೈಕ ಗ್ರಂಥವೆಂದರೆ 'ಲಾಟ್ಯಾಯಿನಿ' ಎಂಬ ಸೂತ್ರೀಕೃತ ಕೃತಿ. ಇದರಲ್ಲಿ ಲಾಡ ಬ್ರಾಹ್ಮಣರ ಮೂಲಸ್ಥಳ. ಅವರ ಆಚಾರ–ವಿಚಾರಗಳು, ಅವರುಗುಜರಾತಿನಿಂದ ವಲಸೆ ಹೋದ ಕಾರಣ ಇವೆಲ್ಲವೂ ವಿವರಿಸಲಾಗಿದೆ. ಇತಿಹಾಸಕಾರರಾದ ಆರ್.ಸಿ. ಮಜುಂದಾರ್ ಮತ್ತು ಅಲ್ತೇಕರ್ ರಚಿಸಿರುವ 'ವಾಕಾಟಕ–ಗುಪ್ತರ ಕಾಲ' ಎಂಬ ಕೃತಿಯಲ್ಲಿ ಉಲ್ಲೇಖಿಸಿರುವಂತೆ, ಕಾಠೇವಾಡ (ಗುಜರಾತ್) ಸಾಮವೇದದ ತವರಾಗಿತ್ತು. ಅಲ್ಲಿನವರು ಸಾಮವೇದೀ ಲಾಡ ಬ್ರಾಹ್ಮಣರು'' ಎಂದು ತಿಳಿಸಿದ್ದಾರೆ.

ಗುಜರಾತಿನ ಮೂಲದ ಲಾಡಬ್ರಾಹ್ಮಣರು ಹಣಕಾಸಿನ ಯಜಮಾನಿಕೆ ಮುತ್ತುರತ್ನಗಳ ವ್ಯಾಪಾರ ಹಾಗೂ ಲೆಕ್ಕಾಧಿಕಾರಿಗಳಾಗಿ ರಾಜರ ಬಳಿ ಸೇವೆ ಸಲ್ಲಿಸುತ್ತಿದ್ದರು. ಗುಜರಾತಿನಿಂದ ವಲಸೆ ಬಂದು ಮಹಾರಾಷ್ಟ್ರದಲ್ಲಿ ನೆಲೆಸುವ ಸಂದರ್ಭ ಬಂತು. ಮುಖ್ಯವಾಗಿ ಅತಿ ದೀರ್ಘಕಾಲವಾದ ರಾಷ್ಟ್ರಕೂಟರ ಆಳ್ವಿಕೆಯ ಕಾಲ ೨೫೦ ವರ್ಷಗಳು ಉಸ್ಮಾನಾಬಾದ್‌ನ ಲಾತೂರ್ (ಲಾಟಲೂರು) ತೇರ್ ಹಾಗೂ ಧಾರಾಶಿವ್ ಮುಂತಾ ಪ್ರದೇಶಗಳಲ್ಲಿ ನೆಲೆಸಿದರು. ನಂತರದ ಕಲ್ಯಾಣೀ ಚಾಲುಕ್ಯರ ಆಳ್ವಿಕೆ ಹಾಗೂ ಬಸವ–ಬಿಜ್ಜಳರ ರಾಜಕೀಯ ವಿಪ್ಲವಗಳ ಕಾಲದಲ್ಲಿ ಮಹಾರಾಷ್ಟ್ರದ ಬುಲ್ಡಾನಾ ಜಿಲ್ಲೆಯ ಸಾಕರ್ ಖೇರ್ಡಾಕ್ಕೆ ವಲಸೆ ಹೋದರು. ಇದರಲ್ಲಿ ಕೆಲವು ಲಾಡ ಪಂಗಡಗಳು ತಮಿಳುನಾಡಿನ ತಿರುಚಿನಾಪಳ್ಳಿ, ಮಧುರೈ ಹಾಗೂ ಕರ್ನಾಟಕದ ಬೀದರ್, ಗುಲ್ಬರ್ಗಾ, ಬಿಜಾಪುರ ಮತ್ತು ಇತರ ಪ್ರದೇಶಗಳಿಗೆ ಮತ್ತು ಆಂಧ್ರದ ಹೈದರಾಬಾದ್‌ಗೆ ವಲಸೆ ಹೋದರು.

ಮಹಾರಾಷ್ಟ್ರದ ಭಾಗಗಳಲ್ಲಿ ನೆಲೆಸಿದ ಲಾಡ ಬ್ರಾಹ್ಮಣರು ಹಣಕಾಸಿನ ಲೇವಾದೇವಿ, ವ್ಯವಸಾಯ, ವ್ಯಾಪಾರ ಮುಂತಾದ ವೃತ್ತಿಗಳಲ್ಲಿ ತೊಡಗಿದರು. ಆದರೆ, ಇದನ್ನು ಇತರೆ ಬ್ರಾಹ್ಮಣರು ವಿರೋಧಿಸಿ ವಿಪ್ರರು ಕೇವಲ ಪೌರೋಹಿತ್ಯ ಹಾಗೂ ಯಾಚನೆ, ವಿದ್ವತ್ತು ಇವುಗಳ ಮೂಲಕ ಮಾತ್ರ ಜೀವನ ನಿರ್ವಹಣೆ ಮಾಡಬೇಕೇ ಹೊರತು ವೈಶ್ಯರಂತೆ ವ್ಯಾಪಾರ, ವ್ಯವಸಾಯ ಮಾಡುವುದು ನಿಷಿದ್ಧವೆಂದರು.

ಆದರೆ, ರಾಜಸ್ಥಾನದ ನಂದವನ್, ಪಾಲವಾಲ್ ಹಾಗೂ ಬೊಹ್ರಾಗಳೆಂಬ ವರ್ತಕ ಜನ ಬ್ರಾಹ್ಮಣರೆಂದು ವಿಶ್ವಮಾನ್ಯರಾಗಿದ್ದಾರೆ. (''ಭಾರತೀಯ ಜಾತಿ''– ವಿಲ್ಸನ್ ಹಾಗೂ 'ಪಾಲಿವಾಲ್ ಇತಿಹಾಸ'– ಶಿವನಾರಾಯಣ್ ಪಾಲಿವಾಲ್ ರವರ ಕೃತಿಗಳು).

***''ಮಧ್ಯಯುಗೀನ ಭಾರತ್''*** ಎಂಬ ಇತಿಹಾಸ ಪುಸ್ತಕದ ಲೇಖಕ ಶ್ರೀ ಸಿ.ವಿ. ವೈದ್ಯರವರು ತಿಳಿಸುವಂತೆ : ಮಾರ್ಕೋಪೋಲೋ ವರ್ಣನೆ ಮಾಡುವಂತೆ ***''ಲಾಡಬ್ರಾಹ್ಮಣರು ಪಶ್ಚಿಮ ತೀರದಲ್ಲಿನ ಅತ್ಯುತ್ತಮ ಮುತ್ತು ರತ್ನಗಳ***

***ವ್ಯಾಪಾರಿಗಳಾಗಿದ್ದು ಅವರ ದೊರೆ ಅತ್ಯಂತ ಶಕ್ತಿಶಾಲಿಯೂ, ಸಂಪತ್ತುಳ್ಳವನೂ ಆಗಿದ್ದು ಲಾಡ ಬ್ರಾಹ್ಮಣರು ಉತ್ತಮ ವಣಿಕರಾಗಿದ್ದರೆಂದು''*** ತಿಳಿಸುತ್ತಾರೆ. ಕ್ರಮೇಣ ತಮ್ಮ ಸಂಪತ್ತಿನ ಸಾಮರ್ಥ್ಯದಿಂದ ಅವರು ಜ್ಞಾನಾರ್ಜನೆ ಮಾಡಿ ಬೌದ್ಧಿಕ ಸಂಪತ್ತನ್ನು ಗಳಿಸಿ, ತನ್ಮೂಲಕ ಪೌರೋಹಿತ್ಯದಲ್ಲೂ ಪ್ರಸಿದ್ಧ ಪಡೆದರು. ಹೀಗೆ ಈ ಗುರ್ಜರ ಲಾಡ ಬ್ರಾಹ್ಮಣರು ತಮ್ಮ ಕೊರತೆಗಳನ್ನು ನೀಗಿಸಿಕೊಂಡು ಸಂಪೂರ್ಣ ಸಾಮರ್ಥ್ಯ ಪಡೆದರು.

**ಜಾನ್ಹವೇ ಪಾಂಡರಿ :**

ಲಾಡ ಬ್ರಾಹ್ಮಣರು ನೆಲೆಸಿದ್ದ ತೇರ್, ಧಾರಾಶಿವ್ ಲಾಥೂರ್ ಪ್ರದೇಶಗಳಲ್ಲಿ ಕಲಚೂರಿ ದೊರೆ ಬಿಜ್ಜಳನ ಆಡಳಿತವಿದ್ದ ಕಾಲದಲ್ಲಿ ಜೈನರ ಪ್ರಭಾವ ಹೆಚ್ಚಾಗಿತ್ತು ನಂತರದ ಸಮಯದಲ್ಲಿ ಬಸವೇಶ್ವರರು ಶೈವಧರ್ಮ ಪ್ರತಿಪಾದಿಸಿದರು. ಲಾಡ ಬ್ರಾಹ್ಮಣರು ವೈಷ್ಣವ ಧರ್ಮೀಯರಾಗಿದ್ದರು. ಆದರೂ ಸಹ ಶೈವಧರ್ಮೀಯರ ಜೊತೆ ಸ್ನೇಹದಿಂದಿದ್ದರು. ಕ್ರಮೇಣ ವೀರಶೈವ ಅಥವಾ ಲಿಂಗಾಯಿತ ಧರ್ಮ ಪ್ರಾಬಲ್ಯ ಹೊಂದಿ ಅದರ ಕಾರಣ ಪುರುಷ ಬಸವೇಶ್ವರ ಸ್ವತಃ ತಾನು ಧರಿಸಿದ್ದ ಜನಿವಾರವನ್ನು ಕಿತ್ತೆಸೆದು ವೈದೀಕ ಧರ್ಮ ತ್ಯಾಗ ಮಾಡಿದರು.

ಈ ಸಂದರ್ಭದಲ್ಲಿ ಲಾಡ ಬ್ರಾಹ್ಮಣರ ಮೇಲೆ ಜೈನ, ವೀರಶೈವರಿಂದ ಅನೇಕ ದಾಳಿಗಳೂ ನಡೆದು ಲಾಡರ ಸಂಪತ್ತನ್ನೆಲ್ಲಾ ಕೊಳ್ಳೆ ಹೊಡೆಯಲ್ಪಟ್ಟಿತು. ಈ ವೈದೀಕರು ತಾವು ಧರಿಸಿದ್ದ ಜನಿವಾರಗಳನ್ನು ತೆಗೆದು ಸುಟ್ಟು ಹಾಕಲಾಯಿತು. ಅವರು ದಬ್ಬಾಳಿಕೆಯ ಕೈಕೆಳಗೆ ಜೀವಿಸುವಂತಾಯಿತು. ಹೀಗೆ ಯಜ್ಞೋಪವೀತ ರಹಿತ ಬ್ರಾಹ್ಮಣ ಲಾಡರು ವಾಸಿಸುತ್ತಿದ್ದ ಪ್ರದೇಶವನ್ನು **'ಜಾನ್ಹವೇ ಪಾಂಡರಿ'** ಎಂದು ಇಂದಿಗೂ ಕರೆಯಲಾಗುತ್ತದೆ. **'ಜಾನವೇ'** ಎಂದರೆ ಜನಿವಾರ, **'ಪಾಂಡರಿ'** ಎಂದರೆ ವಾಸಿಸುವ ಒಂದು ಜಾಗ ಎಂದು ಕರೆಯಲಾಗುತ್ತದೆ. ಹೀಗಾಗಿ ಆ ಪ್ರದೇಶದ ಲಾಡಬ್ರಾಹ್ಮಣರು 'ಜಾನವೇ ಪಾಂಡರಿ'ಗಳಾದರು. ಕ್ರಮೇಣ ಈ ಬ್ರಾಹ್ಮಣ ಲಾಡರು ಅಲ್ಲಿನವರಿಂದ ಹಿಂಸೆ ಹಾಗೂ ತುಳಿತಕ್ಕೆ ಒಳಗಾಗುವುದನ್ನು ಸಹಿಸಲಾಗದೆ ಬುಲ್ಡಾನಾ ಜಿಲ್ಲೆಯ ಕೇಶವ ಶಿವಾನಿ, ಸಾಕರಖೇರ್ಡಾ ಪ್ರದೇಶಗಳಿಗೆ ವಸಲೆಹೋದರು. ಈ ಪ್ರದೇಶದಲ್ಲಿ ಖಡಕಪೂರ್ಣ ನದಿಯು ಹರಿಯುತ್ತದೆ. ಇದೇ ಭಾಗದಲ್ಲಿರುವ ಮಲ್ಕಾಪುರ ಈ ಜ್ಞಾನ್ಹವೇಪಾಂಡರಿ ಲಾಡರ ನೆಲೆಯಾಗಿ ಮಾರ್ಪಟ್ಟಿತು.

ಕೇಶವಶಿವಾನಿ ಪಟ್ಟಣವು ಖಡಕ್‌ಪೂರ್ಣಾ ನದಿಯ ಬಳಿಯಲ್ಲಿದೆ. 'ಫಲಸಿದ್ಧ ಮಹಾರಾಜರ ಮಠವೂ ಇದ್ದು, ಅವರು ಅಭಯಹಸ್ತ ಚಾಚಿದ್ದರಿಂದ ಬ್ರಾಹ್ಮಣ ಲಾಡರು ಕೇಶವ ಶಿವಾನಿಯಿಂದ ಸಾಕರ್ ಖೇರ್ಡಾ ಪ್ರದೇಶಕ್ಕೆ ಕಾಲಿಟ್ಟರು. ಸಾಕರಖೇರ್ಡಾದ ಬಳಿ ಪೇಣ್ ಗಂಗಾನದಿಯ ಉಪನದಿ ಭೋಗಾವತಿ ಹರಿಯುತ್ತದೆ. ಈ ಸಾಕರಖೇರ್ಡಾ

ಲಾಡಬ್ರಾಹ್ಮಣರ ಗಟ್ಟಿನೆಲೆಯಾಗಿ ಬೆಳೆಯಿತು. ಭೋಗಾವತಿ ನದಿಯ ಬಳಿಯ ಇನ್ನೊಂದು ಮುಖ್ಯ ಲಾಡಬ್ರಾಹ್ಮಣರ ಪಟ್ಟಣವೆಂದರೆ ಧಾರಾಶಿವ್. ಹೀಗಾಗಿ ಲಾಡಬ್ರಾಹ್ಮಣ ಜನಾಂಗವು ಶೇಕಡಾ ತೊಂಭತ್ತೈದರಷ್ಟು ಮಹಾರಾಷ್ಟ್ರದಲ್ಲೇ ನೆಲೆಸಿದೆ. ಇದರಲ್ಲಿ ಬುಲ್ಡಾನಾ ಜಿಲ್ಲೆಯಲ್ಲಿ ಶೇ. ೭೦ ರಷ್ಟು ನಾಗಪುರದಲ್ಲಿ ಶೇ. ೧೦ ರಷ್ಟು ಉಳಿದವರು ಮಹಾರಾಷ್ಟ್ರದ ಇತರ ಕಡೆಗಳಲ್ಲಿ ನೆಲೆಸಿದ್ದಾರೆ.

ಲಾಡಬ್ರಾಹ್ಮಣದಲ್ಲಿ ಅನೇಕ ಗೋತ್ರಗಳಿವೆ. ಅವುಗಳಲ್ಲಿ ಮುಖ್ಯವಾದವು ಕಾಶ್ಯಪ, ಕೌಂಡಿಣ್ಯ, ಕೌಶಿಕ, ದಮ, ದೌಮ್ಯ, ಪರಾಶರ, ಭಾರ್ಗವ, ಭಾರದ್ವಾಜ, ಲೋಹಿತಾಕ್ಷ ಹಾಗೂ ಸೌಮ್ಯ. ಇತ್ಯಾದಿ. ಇವರಲ್ಲಿ ಅನೇಕ ಅಡ್ಡ ಹೆಸರುಗಳಿವೆ. ಅವುಗಳಲ್ಲಿ ಮುಖ್ಯವಾದವು. ಅಮರಾವತೀಕರ, ಅಲೇಗಾಂವ್‌ಕರ್, ಕಾಶೀಕರ, ಕಾರಂಜೇಕರ್, ಚಿಕಳೀಕರ್, ಜಲಗಾಂವ್‌ಕರ್, ಮಹಾಜನ್, ಸಾವ್‌ಜಿ, ಸರಾಫ್, ದಲಾಲ್, ಪಂಡಿತ್, ಲಾಡ್, ಸದಾವರ್ತೆ ಇತ್ಯಾದಿ. ಗುಜುರಾತಿನಿಂದ ವಲಸೆ ಬಂದರೂ ಸಹ ಅವರು ಮರಾಠಿ ಭಾಷೆಯನ್ನು ತಮ್ಮ ಮಾತೃಭಾಷೆಯನ್ನಾಗಿ ಹೊಂದಿದ್ದಾರೆ. ಈ ಲಾಡರು ಆಚರಿಸುವ ಮುಖ್ಯ ಹಬ್ಬಹರಿದಿನಗಳೆಂದರೆ, ಗುಡಪಾಡವಾ (ಯುಗಾದಿ) ಚೈತ್ರಗೌರಿ, ಅಕ್ಷಯತೃತೀಯ, ವಟಸಾವಿತ್ರಿ, ನಾಗಪಂಚಮಿ, ಶ್ರಾವಣ, ಗಣೇಶ ಚತುರ್ಥಿ, ಅನಂರ ಚತುರ್ದಶಿ, ಘಟಸ್ಥಾಪನಾ, ನವರಾತ್ರಿ, ವಿಜಯದಶಮಿ, ಲಕ್ಷ್ಮೀಪೂಜೆ, ಸರಸ್ವತಿ ಪೂಜೆ, ಮಕರ ಸಂಕ್ರಾಂತಿ ಹಾಗೂ ಹೋಳಿಹಬ್ಬ. ಇವರು ಮಹಾಶಿವರಾತ್ರಿ ಆಶಾಢ ಏಕಾದಶಿ, ಕಾರ್ತೀಕ ಏಕಾದಶಿ ಮತ್ತು ಶ್ರಾವಣ ಸೋವಾರಗಳಂದು ಉಪವಾಸ ನಡೆಸುತ್ತಾರೆ.

ಚೌಲ, ಉಪನಯನ, ವಿವಾಹ, ಗರ್ಭದಾನ, ಅಂತ್ಯ ಸಂಸ್ಕಾರಗಳು ಇವರಲ್ಲಿ ಮುಖ್ಯ ಸಂಸ್ಕಾರ ವಿಧಿಗಳು. ಸಾಮೂಹಿಕ ಉಪನಯನವನ್ನು ಆಚರಿಸುವ ಕ್ರಮ ಜಾರಿಯಲ್ಲಿದೆ.



ಲಾಡ ಬ್ರಾಹ್ಮಣರಲ್ಲಿ ವಿವಾಹ ಪದ್ಧತಿ

ಲಾಡಬ್ರಾಹ್ಮಣರು ಮೂಲತಃ ಗುಜರಾತಿನವರು. ಇವರು **'ಲಾಠ್ಯಾಯನ ಬ್ರಾಹ್ಮಣ'**ರೆಂದು ಖ್ಯಾತಿ ಹೊಂದಿದ್ದಾರೆ. ಇವರು ಸಾಮವೇದಿಗಳು. ಇವರದು ಕೌಥುಮೀ ಶಾಖೆ, ಲಾಠ್ಯಾಯನ ಸೂತ್ರ. ಶಾತವಾಹನರ ಹಾಗೂ ಸತ್ರಪರ ನಡುವೆ ಪರಸ್ಪರ ಘರ್ಷಣೆಗಳು ಪ್ರಾರಂಭವಾದಾಗ ಗುಜರಾತಿನಿಂದ ಮಹಾರಾಷ್ಟ್ರಕ್ಕೆ ವಲಸೆ ಬಂದರು. ಆದರೂ ಸಹ ಇವರ ಹೆಚ್ಚಿನ ಆಚಾರ. ಸಂಪ್ರದಾಯಗಳು ಮಹಾರಾಷ್ಟ್ರದವೇ ಆಗಿವೆ. ವಿವಾಹ ಸಂದರ್ಭದಲ್ಲಿ ಒಂದು ಪರಂಪರಾನುಗತ ಪದ್ಧತಿ ಮಾತ್ರ ಗುಜರಾತಿನಿಂದ ಬಂದುದಾಗಿದೆ. ಅದೆಂದರೆ, ವಿವಾಹ ಸಂದರ್ಭದಲ್ಲಿ ಹೆಣ್ಣಿನ ಸೋದರ ಮಾವನ ಕಡೆಯಿಂದ ಹೆಣ್ಣಿನ ಮತ್ತು ಅವರ ತಂದೆ ತಾಯಿಯವರಿಗೆ ಉಡುಗೊರೆಗಳನ್ನು ತಲೆಯಮೇಲೆ ಹೊತ್ತು ಮೆರವಣಿಗೆಯಲ್ಲಿ ಸೋದರ ಮಾವನ ಹೆಂಡತಿ ಅಥವಾ ಅವರ ಕಡೆಯವರು ತಂದು ತಲ್ಪಿಸುತ್ತಾರೆ. ಇದನ್ನು 'ಮೊಸಾಳು' ಎಂದರೆ ಮಾವನ ಮನೆಯ ಪದ್ಧತಿ ಎಂದು ಕರೆಯುತ್ತಾರೆ (ಭರೂಜ್ ಜಿಲ್ಲಾ ಗೆಝೆಟಿಯರ್ ೧೯೬೧, ಪುಟ ೧೧೨).

**ದೇವೀ ಪೂಜೆ :**

ಆಶ್ವಯುಜ ಅಥವಾ ಚೈತ್ರ ಮಾಸದ ಶುದ್ಧ ಅಷ್ಟಮೀ ದಿನ ದೇವಿ ಪೂಜೆ ಆಚರಿಸುವುದು ಲಾಡ ಬ್ರಾಹ್ಮಣರ ಒಂದು ವಿಶೇಷತೆ. ಆ ದಿನ ರೇಖಾಕೃತಿಯಲ್ಲಿ ಮಂಟಪ ಆಕಾರವನ್ನು. ಅರಸಿನದ ಕೊಂಬನ್ನು ತೇಯ್ದು ಅದರಿಂದ ಗೋಡೆ ಅಥವಾ ಮಣೆಯ ಮೇಲೆ ಬರೆಯುತ್ತಾರೆ. ನಂತರ ನೆನೆಸಿದ ಕಡಲೇ ಕಾಳು ಹಾಗೂ ಅನೇಕ ಬಗೆಯ ಸಿಹಿ ತಿನಿಸುಗಳನ್ನು, ಗೋಧಿ ಹುಗ್ಗಿಯನ್ನೂ ಮಾಡಿ ದೇವಿಗೆ ನೈವೇದ್ಯ ಮಾಡಿ ಸಾಮೂಹಿಕ ಭೋಜನ ಮಾಡುತ್ತಾರೆ.

**ದೇವಾಲಯಗಳು :**

ಲಾಡಬ್ರಾಹ್ಮಣರು ಮಹಾರಾಷ್ಟ್ರದ ಅನೇಕ ಕಡೆಗಳಲ್ಲಿ ದೇವಾಲಯಗಳ ನಿರ್ಮಾಣ ಸಹ ಮಾಡಿದ್ದಾರೆ. ಅವುಗಳಲ್ಲಿ ಮಲ್ಕಾಪುರದ (ಬುಲ್ದಾನ ಜಿಲ್ಲಾ) ಗಂಗಾವರತಣ ದೇವಾಲಯ, ಸಾಕರ್‌ಖೇರ್ಡದ ಅಮೃತೇಶ್ವರ, ಅಕೋಲಾದ ಬಾಳಾಪುರದ ತ್ರ್ಯಯಂಬಕೇಶ್ವರ ದೇವಾಲಯ, ಅಕೋಲಾ ಜಿಲ್ಲೆಯ ಪಿಂಜರ್‌ದಲ್ಲಿನ ಶ್ರೀ ಪಾಂಡುರಂಗ ಮಂದಿರ, ಡೋಣಗಾಂವ್‌ನ (ಬುಲ್ಡಾನಾ ಜಿಲ್ಲೆ) ವಿಠ್ಠಲ ಮಂದಿರ, ಚಿಕಲಿಯ ಗಣಪತಿ ಮಂದಿರ, **ದೇವುಳಗಾಂವ್‌ರಾಜಾ** ದಲ್ಲಿನ ಗ್ರಾಮದೇವತೆ ಗುಗಳಾಯಿ, ಮೆಹಕರ್‌ನ ಜುನಾಬಾಯಿ ಮಂದಿರಗಳು, ಸಾಕರಖೇರ್ಡಾದ ಅಸರಾದೇವಿ ಮಂದಿರ ಮುಖ್ಯವಾದವು.

**ಶಿಕ್ಷಣ :**

ಲಾಡಬ್ರಾಹ್ಮಣರಲ್ಲಿ ಸಾಕ್ಷರತೆ ಹೆಚ್ಚಾಗಿದೆ. ಎಲ್ಲಾ ಕುಟುಂಬದಲ್ಲೂ ಅತಿ ಹೆಚ್ಚಿನ ಸುಶಿಕ್ಷಿತರಿದ್ದಾರೆ. ಒಟ್ಟಾರೆ ಐವರಲ್ಲಿ ಶೇ. ೯೮ ರಷ್ಟು ಸಾಕ್ಷರತೆ ಇದೆ. ಸ್ತ್ರೀ ಸಾಕ್ಷರತೆಯೂ

ಶೇ. ೯೦ ಕ್ಕಿಂತಲೂ ಹೆಚ್ಚಾಗಿದೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಆರ್ಥಿಕವಾಗಿಯೂ ಈ ಜನಾಂಗ ಪ್ರಬಲವಾಗಿರುವುದರಿಂದ ಮಹಾರಾಷ್ಟ್ರ ಸರ್ಕಾರ ಇವರನ್ನು ಅತ್ಯಂತ ಮುಂದುವರೆದ ಜನಾಂಗವೆಂದು ಗುರ್ತಿಸಲೇಬೇಕಾಗಿದೆ.

ಹೀಗೆ ಲಾಡಬ್ರಾಹ್ಮಣರು ಸಂಪೂರ್ಣ ಮಹಾರಾಷ್ಟ್ರೀಯ ರಾಗಿದ್ದಾರೆ. ಜಾತಕರ್ಮಾದಿ ಸಂಸ್ಕಾರಗಳಿಂದ, ಸುಸಂಸ್ಕೃತ ರಾಗಿ, ಪರಮ ಮಿತ್ರರಾಗಿ ವೇದಾಧ್ಯಯನ ಅನುರಕ್ತರೂ, ಸಂಪನ್ನರೂ, ಪ್ರತಿದಿನ ಶೌಚ, ಸ್ನಾನ ಸಂಧ್ಯಾವಂದನೆ ಜಪತಪ ಮೊದಲಾದ ವಿಹಿತವಾದ ಸತ್ಕರ್ಮಗಳನ್ನು ಆಚರಿಸುತ್ತಾ ನಿತ್ಯ ಬ್ರಹ್ಮನಿಷ್ಠರೂ, ಗುರುಪ್ರಿಯರೂ, ಸತ್ಯನಿರತರೂ, ದೇವಬ್ರಾಹ್ಮಣರ, ಅತಿಥಿ ಅಭ್ಯಾಗತರ ಸತ್ಕಾರ ಪೂಜಾದಿಗಳಲ್ಲಿ ನಿರತರೂ ಆದವರಾಗಿದ್ದಾರೆ. ಇವರ ವಿದರ್ಭ ಲಾಡಬ್ರಾಹ್ಮಣ ಮಂಡಲಿಯು ತುಂಬಾ ಚಟುವಟಿಕೆಗಳನ್ನು ಹಮ್ಮಿಕೊಂಡು ಪ್ರಗತಿಯತ್ತ ಸಾಗಿದೆ.



ಮಹಾರಾಷ್ಟ್ರದ ವಿದರ್ಭದಲ್ಲಿ **ನಾಗಪುರದ ಅಭಯವೆಂಕಟೇಶ ಸಾವಜಿ** ಪ್ರಸಿದ್ಧ ವೈದ್ಯರಾಗಿದ್ದಾರೆ. ಅವರು ಲಾಡಬ್ರಾಹ್ಮಣರ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲ ಪ್ರಕಾಂಡ ಪಂಡಿತರಾಗಿದ್ದಾರೆ. ಇವರು ವೃತ್ತಿಯಿಂದ ವೈದ್ಯರು. **ಇವರು ರಚಿಸಿರುವ ಪಾಂಡಿತ್ಯಪೂರ್ಣ ಕೃತಿ ''ಲಾಡ ಬ್ರಾಹ್ಮಣ್–ಏಕ್ ಐತಿಹಾಸಿಕ ವ ಸಮಾಜಶಾಸ್ತ್ರ ದೃಷ್ಟ್ಯಾ ಅಧ್ಯಯನ'' ಕೃತಿಯಲ್ಲಿ ಲಾಡಬ್ರಾಹ್ಮಣರ ಬಗ್ಗೆ ಅಧಿಕೃತ ಮಾಹಿತಿ ಸಿಗುತ್ತದೆ.**

**ಮಹಾನುಭಾವ ಲಾಡ್:**

ರಾಷ್ಟ್ರಕೂಟರ ಆಡಳಿತ ಕಾಲದಲ್ಲಿ ಲಾಟದೇಶವು ಅವರ ವಶದಲ್ಲಿತ್ತು. ಅವರ ಆಡಳಿತ ವ್ಯವಸ್ಥೆಯಲ್ಲಿ ಗ್ರಾಮ ಸಲಹಾ ಸಭೆಯ ಸದಸ್ಯರಿಗೆ 'ಮಹಾಜನ' ರೆಂಬ ಹೆಸರಿತ್ತು. ಸ್ಮೃತಿಯ ಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೋನಾನುಷ್ಠಾಣ ಪರಾಯಣ ಜಪ ಸಮಾಧಿಶೀಳ ಸಂಪನ್ನರ್...... ವಿಧಿತ ವೇದಾರ್ಥ ಪಾರಗರ್ ಷಟ್ಕರ್ಮ ನಿರತರ್, ಸಪ್ತ ಸೋಮ ಸಂಸ್ಥಾವಭೃತಾವಗಾಹನ ಪವಿತ್ರೀಕೃತ ಶರೀರರ್... ಶ್ರೀ ದಾಶರಥಿ ನಿರ್ಮಿತ ಮಹಾಗ್ರಾಮಂ.... ಪ್ರಮುಖ **'ಮಹಾಜನ ಸಾಸಿರ್ವರ್'** ಎಂಬ ಶಾಸನಾಧಾರದಂತೆ 'ಮಹಾಜನ' ರು ಬ್ರಾಹ್ಮಣರೇ ಆಗಿದ್ದರು ಎಂದು ತಿಳಿದುಬರುತ್ತದೆ. ಅಗ್ರಹಾರವನ್ನು ದಾನವಾಗಿ ಪಡೆದಿದ್ದ ಬ್ರಾಹ್ಮಣರೇ 'ಮಹಾಜನ' ರೆನಿಸಿದ್ದರು. ಮುಖ್ಯವಾದ ಸಂದರ್ಭಗಳಲ್ಲಿ 'ಮಹಾಜನ'ರು ಸಮಾವೇಶಗೊಂಡು 'ಗ್ರಾಮಪತಿ'ಗೆ ಮಾರ್ಗದರ್ಶನ ನೀಡುವಂಥ ಸಲಹೆಗಳನ್ನು ಕೊಡುತ್ತಿದ್ದರೆಂದು ತಿಳಿದುಬರುತ್ತದೆ. ಇವರು ಧರ್ಮದರ್ಶಿಗಳಾಗಿದ್ದುದಲ್ಲದೆ, ಲೇವಾದೇವಿಕಾರರೂ ಆಗಿದ್ದರು.

ಈಗಲೂ ಮಹಾರಾಷ್ಟ್ರದಲ್ಲಿ ನೆಲೆಸಿರುವ ವಿದರ್ಭದ ನಾಗಪುರ, ಅಮರಾವತಿ, ಬುಲ್ಡಾನಾ, ಪುಣೆ, ಮುಂಬಯಿ ಕಡೆಗಳಲ್ಲಿ 'ಮಹಾಜನ' ಅಡ್ಡ ಹೆಸರಿನ ಲಾಡ ಬ್ರಾಹ್ಮಣರಿದ್ದಾರೆ. ಇವರಲ್ಲದೆ, ಲಾಡ ಸರಾಫ್, ದಲಾಲ್, ಜವಾಹಿರಿ, ಪಾಪಡೆ, ವ್ಯವಹಾರೆ ಮುಂತಾದವರೂ ಇವರಲ್ಲಿ ಸಂಬಂಧವಿರಿಸಿಕೊಂಡಿದ್ದಾರೆ. ಕೇಂದ್ರ ಮಂತ್ರಿಗಳಾಗಿದ್ದ ದಿವಂಗತ ಪ್ರಮೋದ್ ಮಹಾಜನ್‌ರವರು ಸಹ ಲಾಡಬ್ರಾಹ್ಮಣರು.

## ಮಹಾನುಭಾವ ಪಂಥ್ ಲಾಡರು:

ಲಾಡರಲ್ಲಿ ಮಹಾನುಭಾವರೆಂಬ ವಿಶಿಷ್ಠ ಪಂಗಡವಿದೆ. ಇವರು ಪ್ರಮುಖವಾಗಿ ಮಹಾರಾಷ್ಟ್ರದ ಪೈಠಣ, ಬೀಡ್, ಯವತ್‌ಮಾಲ್ ಹಾಗೂ ಬುಲ್ಡಾನಾ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಇತರ ಲಾಡರಂತೆ ಇವರೂ ಸಹ ವ್ಯವಸಾಯ, ವ್ಯಾಪಾರ, ಉದ್ಯೋಗಗಳಲ್ಲಿ ತೊಡಗಿದ್ದಾರೆ. ಇವರ ಆಚಾರ–ವಿಚಾರಗಳೂ ಸಹ ಇತರ ಮಾಹಾರಾಷ್ಟ್ರೀಯರಂತೆಯೇ ಇವೆ. ಇವರು ತಮ್ಮನ್ನು ತಾವು ಬ್ರಾಹ್ಮಣರೆಂದು ಕರೆದುಕೊಳ್ಳುತ್ತಾರೆ. ಕ್ರಿ.ಶ. ೧೨ನೇ ಶತಮಾನದಲ್ಲಿ ಬಸವಣ್ಣನವರ ಪ್ರಭಾವದಿಂದಾಗಿ ಬೇರೆ ಬೇರೆ ಜನಾಂಗದವರು, ಜಾತಿಗಳವರು ಲಿಂಗಾಯತ ಧರ್ಮಕ್ಕೆ ಸೇರಿ ವೀರಶೈವರೆನಿಸಿದರೋ ಅದೇ ರೀತಿಯಲ್ಲಿ ಗುಜರಾತಿನ ಶ್ರೀ ಚಕ್ರಧರ ಸ್ವಾಮಿಗಳು ಅನೇಕ ಮಹಾರಾಷ್ಟ್ರೀಯನ್ನರ ಜಾತಿಗಳನ್ನು ತಮ್ಮ ಪ್ರಭಾವದಿಂದ ಮಹಾನುಭಾವ ಪಂಥಕ್ಕೆ ಸೇರಿಸಿಕೊಂಡು ತಮ್ಮ ಅನುಯಾಯಿಗಳನ್ನಾಗಿಸಿಕೊಂಡರು. ಅವರು ಕ್ರಿ.ಶ. ೧೨೬೩ರಲ್ಲಿ ಮಹಾನುಭಾವ ಪಂಥವನ್ನು ಸ್ಥಾಪಿಸಿದರು. ಈ ಕಾರಣದಿಂದ ಲಾಡ ಬ್ರಾಹ್ಮಣರು ಮಹಾನುಭಾವ ಪಂಥದವರನ್ನು ಬ್ರಾಹ್ಮಣರೆಂದು ಸ್ವೀಕರಿಸು ವುದಿಲ್ಲ. ಕೇವಲ ಚಕ್ರಧರಸ್ವಾಮಿಗಳನ್ನು **ಹುಟ್ಟಿನಿಂದ ಬ್ರಾಹ್ಮಣರಾದ್ದರಿಂದ ಅವರನ್ನು ಮಾತ್ರ ಬ್ರಾಹ್ಮಣರೆಂದು ಒಪ್ಪಿಕೊಳ್ಳುತ್ತಾರೆ.**



ಜಾತಿರಹಿತ ಸಮಾಜ ನಿರ್ಮಾಣದ ಗುರಿ ಹೊಂದಿದ್ದ ಶ್ರೀ ಚಕ್ರಧರಸ್ವಾಮಿಗಳು ಮಹಾರಾಷ್ಟ್ರದ ಪೈಠಣದಲ್ಲಿ ಸಮಾಧಿ ಹೊಂದಿದರು. ಅವರನ್ನು ಭಗವಂತನ ಸ್ವರೂಪವೆಂದು ಬಗೆದು ಪೂಜಿಸಿ ಪೈಠಣದಲ್ಲಿ ಬೃಂದಾವನಸ್ಥರಾದ ಅವರ ದೇವಾಲಯವೊಂದನ್ನು ನಿರ್ಮಿಸಲಾಗಿದೆ. ಅಲ್ಲದೆ ಮಹಾನುಭಾವ ಪಂಥದ ಲಾಡರು ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯ ಮಾಹುರ್‌ಘಡ್ ಎಂಬ ಪವಿತ್ರ ಗಿರಿಧಾಮದಲ್ಲಿ ಶ್ರೀ ದತ್ತಾತ್ರೇಯ ಪೀಠವೊಂದನ್ನು ಸ್ಥಾಪಿಸಿದ್ದಾರೆ. ಇದರ ಉಸ್ತುವಾರಿಗಾಗಿ ಪಂಚ ಕಮಿಟಿ ಸಂಸ್ಥಾನವೊಂದನ್ನು

ನಿರ್ಮಿಸಲಾಗಿದೆ. ಇಲ್ಲಿನ ಪ್ರಸಿದ್ಧ ಲೇಖಕರೂ, ಉದ್ದಾಮ ಪಂಡಿತರೂ ಆಗಿರುವ ಶ್ರೀ ಬಾಲಕೃಷ್ಣಶಾಸ್ತ್ರಿ ಮಹಾನುಭಾವ್‌ರವರು 'ಮಹಾನುಭಾವ ಪಂಥ್' ಎಂಬ ಕೃತಿಯನ್ನು ರಚಿಸಿದ್ದಾರೆ. ಅದರಲ್ಲಿ ಮಹಾನುಭಾವ ಲಾಡರ ಎಲ್ಲಾ ವಿವರಗಳು ಅಡಕವಾಗಿದೆ.

ವಿದರ್ಭದ ಲಾಡ ಬ್ರಾಹ್ಮಣರೂ ಸಹ ಈ ಮಹುರ್‌ಘಡದಲ್ಲಿರುವ ಪ್ರಸಿದ್ಧ ಶ್ರೀ ರೇಣುಕಾದೇವಿಯ ಮಂದಿರಕ್ಕೆ ಪೂಜೆಗಾಗಿ ಬರುತ್ತಾರೆ. ಅವರಲ್ಲಿ ನವವಿವಾಹಿತ ಜೋಡಿಗಳು ಬಂದು ಅಲ್ಲಿರುವ ಕಲ್ಯಾಣಿಯಲ್ಲಿ ಮಿಂದು ದೇವೀ ದರ್ಶನ ಮಾಡಿಕೊಂಡು ಹೋಗುವ ಅನೂಚಾನ ಪದ್ಧತಿ ಜಾರಿಯಲ್ಲಿದೆ. ಮಹಾನುಭಾವ ಪಂಥೀಯ ಲಾಡರು ಮಹಾರಾಷ್ಟ್ರದ ಪರಂಪರೆಯ ಉತ್ತಮ ಕುಲದವರ ಆಚರಣೆಗಳೆಲ್ಲವನ್ನೂ ತಾವು ಪಾಲನೆ ಮಾಡುತ್ತಾರೆ.

## ಲಾಡರಲ್ಲಿ ವೈಶ್ಯರು :

ಲಾಠ ದೇಶದ ಚತುವರ್ಣಗಳಲ್ಲಿ ವೈಶ್ಯರೂ ಸಹ ಪ್ರಮುಖರಾಗಿದ್ದಾರೆ. ಮೂಲತಃ ಗುಜರಾತಿನವರಾದ ಈ ಲಾಡರುಜಗತ್ತಿನ ಎಲ್ಲೆಡೆ ಪಸರಿಸಿದ್ದಾರೆ. 'ಲಾಡ; ಎಂಬುದು ವೈಶ್ಯನಿಗೆ ಅನ್ವಯವಾಗುವ ಪದವೆಂದು ವಿದ್ವಾಂಸ ಚೀಮನಹಳ್ಳಿ ರಘುನಾಥಾಚಾರ್ಯರು ತಮ್ಮ ಕೃತಿ 'ಹಿಂದೂ ಸಮಾಜ'ದಲ್ಲಿ ವಿವರಣೆ ನೀಡುತ್ತಾರೆ. ಅವರು ವ್ಯಾಖ್ಯಾನಿಸುವಂತೆ –

''ವೈಶ್ಯಾಯಾಮೇವ ವಿನ್ನಾಯಾಂ ವಿಕರ್ಮಸ್ಥಶ್ಯ ವೈಶ್ಯತಃ।<br>
ಲಾಠದೇಶೇ ಸಮುತ್ಪನ್ನ ಲಾಡ ಇತ್ಯಭಿದೀಯತೇ ॥<br>
ಸವೈಶ್ಯ ಇರ ಎಜ್ಞೇಯಶ್ಚಾಮರಾಣಾಂ ಚ ವಿಕ್ರಯಾ ॥ ಪದ್ಯ ೨೦೦೩

– 'ಹಿಂದೂ ಸಮಾಜ.'

ಇದರರ್ಥ – ''ಕರ್ಮ ವೈಶ್ಯನಿಂದ ವಿಕರ್ಮ ವೈಶ್ಯ ಸ್ತ್ರೀಯಲ್ಲಿ ಲಾಠದೇಶದಲ್ಲಿ ಹುಟ್ಟಿದ ಪುರುಷನು ಲಾಡ (ಲಾಟ) ಎಂಬ ಹೆಸರುಳ್ಳವನಾಗುತ್ತಾನೆ. ಇವನದು ವೈಶ್ಯನಿಗೆ ಸಮಾನ ಧರ್ಮವು. ಇವನು ಚಾಮರಗಳನ್ನು ವಿಕ್ರಯ ಮಾಡಿ ಜೀವಿಸುತ್ತಾನೆ'' ಎಂಬುದಾಗಿ ವಿವರಿಸಲಾಗಿದೆ. ಹಾಗಾಗಿ ಲಾಡರು ಮೂಲತಃ ವ್ಯಾಪಾರೀ ಜನಾಂಗ. ಲಾಟದೇಶವು ದಕ್ಷಿಣ ಗುಜರಾತ್‌ಗಿದ್ದ ಮೂಲ ಹೆಸರು. ಚಾಲುಕ್ಯ ಹಾಗೂ ರಾಷ್ಟ್ರಕೂಟರ ಆಳ್ವಿಕೆಯ ಕಾಲದ ಸಮಯದಲ್ಲಿ ಇದು ವಿಸ್ತಾರಗೊಂಡು ಪಶ್ಚಿಮದಲ್ಲಿ ಈಗಿನ ಪಾಕಿಸ್ತಾನದಲ್ಲಿನ ಲಾಡಖಾನಾ ಪ್ರದೇಶದಲ್ಲಿ ಸಿಂಧಿಲಾಡರು. ಉತ್ತರದ ರಾಜಾಸ್ಥಾನದ ಕೋಟಾ ಹಾಗೂ ಬುಂದಿ ಪ್ರದೇಶದ ಜೈನಲಾಡರು, ಮಧ್ಯಪ್ರದೇಶದ ಲಾಟ ಸಂಸ್ಥಾನದ ವೈಷ್ಣವ ವ್ಯಾಪಾರೀ ವಂಶದ ಲಾಟರು ಹಾಗೂ ಬಂಗಾಳದ ಮಿಡ್ನಾಪುರ ಜಿಲ್ಲೆ ಪ್ರದೇಶದಲ್ಲಿನ ವಂಗಲಾಡರು ಪ್ರಮುಖರು.

ಮಧ್ಯಪ್ರದೇಶದಲ್ಲಿನ ಬಹರಾನ್‌ಪುರ್ ಬಳಿಯ ಲಾಟ ಪ್ರದೇಶದಲ್ಲಿ ವಾಸವಾಗಿದ್ದವರು ವೈಷ್ಣವ ವಣಿಕ ಲಾಡರು. ಇವರು ಶ್ರೀಕೃಷ್ಣನ ಭಕ್ತರು. ಶ್ರೀಕೃಷ್ಣನನ್ನು 'ಲಾಟಾ' ಅಥವಾ ಲಾಲಾ' ಎಂದು ಕರೆಯುತ್ತಿದ್ದ ಇವರು ಲಾಟರೆನಿಸಿದರು. ತಮ್ಮ ವ್ಯಾಪಾರದ ಉದ್ಯಮದಿಂದ ಅಪಾರ ಹಣ ಸಂಪಾದಿಸಿದರು. ಇದರಿಂದ ಅವರಿಗೆ ಹೆಚ್ಚಿನ ಕೀರ್ತಿ ಹಾಗೂ ಅಧಿಕಾರದ ಸ್ಥಾನಮಾನಗಳು ದೊರೆತವು. ಇದರಿಂದ ಕುಪಿತರಾದ ಮೊಘಲ್ ಸಾಮ್ರಾಟರು ಇವರನ್ನು ಮಟ್ಟಹಾಕಲು ೧೫ ನೇ ಶತಮಾನದಿಂದ ಪ್ರಾರಂಭಿಸಿದ ಕ್ರಮಗಳಿಂದ ದಿಕ್ಕೆಟ್ಟ ಲಾಟ ವ್ಯಾಪಾರಿಗಳು ಮಧ್ಯಪ್ರದೇಶದಿಂದ ಕಾಲುತೆಗೆದು ಆಗ ವ್ಯಾಪಾರಕ್ಕೆ ಪ್ರಸಿದ್ಧಿಯಾಗುತ್ತಿದ್ದ ಗುಜರಾತಿನ ಸೂರತ್ ಹಾಗೂ ರೇವಾ ಪ್ರದೇಶಗಳಲ್ಲಿ ಹೋಗಿ ನೆಲೆಸಿದರು. ರೇವಾ ನರ್ಮದಾ ನದಿಯ ಬಳಿಯಿರುವ ಪೇಟ್‌ಲಾಡ್ ಎಂಬ ಪ್ರದೇಶಕ್ಕೆ ವಲಸೆ ಹೋದರು. ಇವರಲ್ಲಿ ಅನೇಕ ಗುಂಪುಗಳಾಗಿ ಬೇರೆ ಬೇರೆ ಕಡ, ಅಂದರೆ ಅಹಮದ್‌ಬಾದ್, ಸೂರತ್, ದಾಬೊಯ್, ಖಂಬಾಟಾ ಮುಂತಾದಲ್ಲಿ ನೆಲೆಸಿದರು. ಇಲ್ಲಿ ಅವರು ತಮ್ಮನ್ನು ತಾವು 'ಲಾಡ'ರೆಂಬುದಾಗಿ ಕರೆದುಕೊಳ್ಳತೊಡಗಿದರು. ೧೯ನೇ ಶತಮಾನದ ಹೊತ್ತಿಗೆ ಇವರಲ್ಲಿ ಅನೇಕರು ಮುಂಬೈ ಪ್ರಾಂತ್ಯದಲ್ಲಿ ಬಂದು ನೆಲೆಸಿದರು. ವ್ಯಾಪಾರಕ್ಕಾಗಿ ಇವರಿಗೆ ಅದು ಅತ್ಯಂತ ಪ್ರಶಸ್ತ ಸ್ಥಳವೆನಿಸಿತು. ಕಳೆದು ಒಂದು ನೂರು ವರ್ಷದಿಂದ ಈ ವಣಿಕಲಾಡರು 'ಸಮಸ್ತ ಲಾಡ ಪತ್ರಿಕಾ' ಎಂಬ ಪತ್ರಿಕೆಯನ್ನು ಹೊರಡಿಸುತ್ತಿದ್ದಾರೆ ಹಾಗೂ ಒಂದು ಸುಸಜ್ಜಿತ ಗ್ರಂಥ ಭಂಡಾರವನ್ನು ಹೊಂದಿದ್ದಾರೆ.

ಲಾಡ ಶಿಖ್ಯೇವಾಣಿ (ಅಥವಾ–ಲಾಡ ಶಾಖಾವಾಣಿ) ಎನ್ನುವುದು ವಣಿಕ ಅಥವಾ ವ್ಯಾಪಾರೀ ವೃತ್ತಿಯ ಈ ಲಾಡರ ಜನಾಂಗದ ಪಂಗಡ. ಇವರು ತಮ್ಮನ್ನು ತಾವು ಗುಜರಾತಿ ಬನಿಯಾಗಳೆಂದು ಕರೆದುಕೊಳ್ಳುತ್ತಾರೆ. ಗುಜರಾತ್‌ನ ಅಹಮದಾಬಾದ್‌ಷ ಭಾವನಗರ್, ಅಂಕಲೇಶ್ವರ್, ಸೂರತ್, ಮಧ್ಯಪ್ರದೇಶದ ಬಹರಾನ್‌ಪುರ್, ಖರಗೋನೇ, ಖಂಡವಾ, ಇಂಡೋರ್, ಭೂಪಾಲ್‌ಗಳನ್ನು ಹಾಗೂ ಮಹಾರಾಷ್ಟ್ರದ ಧೂಲಿಯ. ಮುಂಬೈ, ಪುಣೆ ಮುಂತಾದೆಡೆ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಇಷ್ಟಾದರೂ ಮಹಾರಾಷ್ಟ್ರ – ಮಧ್ಯಪ್ರದೇಶಗಳಲ್ಲಿ ನೆಲೆಸಿರುವವರು 'ಪುಷ್ಟಮಾರ್ಗೀಯ' ಸಂಪ್ರದಾಯದ ಭಾಷೆ ಮಾತನಾಡುತ್ತಾರೆ.

ಮಧ್ಯಪ್ರದೇಶ ಶಿಖ್ಯೇವಾಣಿ ಲಾಡರು ವೈಷ್ಣವ ಸಂಪ್ರದಾಯಸ್ಥರು. ಇವರು ವಿಷ್ಣುವಿನ ರೂಪಗಳಾದ ಶ್ರೀನಾಥಜೀ ಮಹಾಪ್ರಭುಜೀ, ಯಮುನಜೀಯವರನ್ನು ಪೂಜಿಸುತ್ತಾರೆ. ಈ ಎಲ್ಲಾ ಆಚರಣೆಯ ಮೂಲ ರಾಜಸ್ಥಾನದಲ್ಲಿರುವ ನಾಥದ್ವಾರಾ. ಇಲ್ಲಿಂದ ೨೦ ಕಿ.ಮೀ. ದೂರದಲ್ಲಿ ಕಾಕ್ರೋಲಿ ಇದೆ. ಇದು ವೈಷ್ಣವ ಲಾಡರ ಪೂಜಾ ಸ್ಥಳ. ಮಧ್ಯಪ್ರದೇಶದ ವೈಷ್ಣವ ವಣಿಕ ಲಾಡರ ಪೂಜಾಸ್ಥಾನ ಮಥುರಾ. ಇಲ್ಲಿ ಚೈತನ್ಯ ಮಹಾಪ್ರಭು ೮೪ ಬೈಠಕ್‌ಗಳನ್ನು ನಡೆಸಿದರೆಂದು ಪ್ರತೀತಿ. ಗುಜರಾತ್ ಹಾಗೂ ಮಹಾರಾಷ್ಟ್ರದ ವಣಿಕ ಲಾಡರಲ್ಲಿ ಪುಷ್ಟಿ ಮಾರ್ಗದ ಎರಡು ವಿಭಾಗಗಳಿವೆ :– ೧) ದಸ್ಸಾ

ಲಾಡ್ ಮತ್ತು ೨) ವಿಸ್ಸಾ ಲಾಡ್ ಮಹಾರಾಷ್ಟ್ರದಲ್ಲಿ ನೆಲೆಸಿರುವ ಈ ಲಾಡರ ಮನೆ ಮಾತು ಎಂದರೆ ಮರಾಠಿ ಹಾಗೂ ಗುಜರಾತಿಗಳ ಮಿಶ್ರಭಾಷೆ. ವ್ಯಾಪಾರ ಇವರ ಮುಖ್ಯ ಕಸುಬು.

ಮಹಾರಾಷ್ಟ್ರದ ಶಿಖ್ಖೇವಾಣಿ ಲಾಡರು ತಾವು ನೆಲೆಸಿರುವ ಎಲ್ಲಾ ಕಡೆಗಳಲ್ಲಿ 'ಲಾಡ ಸಮಾಜ'ದ ಸಂಘಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಇವರು ಮರಾಠಿ ಭಾಷೆ ಮಾತನಾಡುತ್ತಾರೆ. ಆದರೆ ಗುಜರಾತಿನ ವೈಷ್ಣವರು ಗುಜರಾತಿಯನ್ನು ಮನೆ ಮಾತಾಗಿಸಿಕೊಂಡಿದ್ದಾರೆ. ಮಹಾರಾಷ್ಟ್ರದ ವಣಿಕ ಲಾಡರು ನಾಥದ್ವಾರಾವನ್ನು ಒಪ್ಪಿಕೊಳ್ಳುವುದಿಲ್ಲ. ಬದಲಾಗಿ, ಶಿವ, ಗಣಪತಿ, ಲಕ್ಷ್ಮಿ ಮುಂತಾದ ದೇವರುಗಳನ್ನು ಆರಾಧಿಸುತ್ತಾರೆ. ಇವರು ಸ್ವಾಧ್ಯಾಯಿಗಳು, ಶ್ರೀ ಪಾಂಡುರಂಗ ಶಾಸ್ತ್ರಿಯವರು ಇವರಲ್ಲಿ ಪ್ರಮುಖ ಪ್ರಕಾಂಡ ಪಂಡಿತರು.

ಮಧ್ಯಪ್ರದೇಶದ ಗೋಲ್‌ಘರ್ ಕೋಠಿ ಪ್ರದೇಶದಲ್ಲಿ ವಾಸಿಸುವ ವಣಿಕ ಲಾಡರು ಸೀರೆ ತಯಾರಿಸುವ ವೃತ್ತಿ ಮಾಡುತ್ತಾರೆ. ಬಹ್ರಾನ್‌ಪುರ್, ಗ್ವಾಲಿಯರ್ ಹಾಗೂ ಇಂಡೋರ್‌ಗಳಲ್ಲಿನ ಲಾಡರು ತಮ್ಮ ಮನೆಯ ಪಾತ್ರೆ–ಪರಡಿಗಳ ಮೇಲೆ ಹಳೇ ಲಾಡ ಭಾಷೆಯ ಲಿಪಿಗಳನ್ನು ಬರೆಸಿರುವುದು ಕಂಡುಬರುತ್ತದೆ. ಮಹಾರಾಷ್ಟ್ರದ ಔರಂಗಾಬಾದ್ ಜಿಲ್ಲೆಯ ಕನ್ನಡ್ ಎಂಬ ಊರಿನ ವಣಿಕರು ತಮ್ಮ ಲಾಡ ಶಿಖ್ಖೇವಾಣಿ ಸಂಘ ಹಾಗೂ ಮಂಗಳ ಕಾರ್ಯಾಲಯ (ಕಲ್ಯಾಣಮಂಟಪ) ನಿರ್ಮಿಸಿಕೊಂಡಿದ್ದಾರೆ. ಇವರ ಸಮಾಜಕ್ಕೆ ಸಂಬಂಧಪಟ್ಟ ಮಾಸ ಪತ್ರಿಕೆ ಸಹ ಪ್ರಕಟಿಸುತ್ತಿದ್ದಾರೆ.

### ಕೊಂಕಣದ ವೈಶ್ಯ ಲಾಡರು :

ಮೂಲ ಕೊಂಕಣದವರಾದ ಈ ಲಾಡರು ಕರ್ನಾಟಕದ ಪುರಿಭಟ್ಟಿ. ಕಡಲೆ ವ್ಯಾಪಾರದ ಶೆಟ್ಟರ ಪರಂಪರೆಯವರು. ಮಹಾರಾಷ್ಟ್ರದ ಕೊಲ್ಹಾಪುರ ಜಿಲ್ಲೆಯ ರಾಧಾನಗಿರಿ ತಾಲ್ಲೂಕಿನ ರಾಶಿವಾಡೆ ಮುಂತಾದ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಇವರು ಸಸ್ಯಾಹಾರ ಹಾಗೂ ಮಾಂಸಾಹಾರಗಳೆರಡನ್ನೂ ಅನುಸರಿಸುತ್ತಾರೆ. ಇವರಿಗೆ ಕೊಲ್ಹಾಪುರ, ರತ್ನಗಿರಿಗಳಲ್ಲದೆ ಗೋವಾ, ಪಣಜಿಗಳಲ್ಲೂ ಸಂಬಂಧಿಗಳೂ ಇದ್ದಾರೆ. ತಮ್ಮನ್ನು ತಾವು ವೈಶ್ಯ ವಣಿಕರೆಂದು ಕರೆದುಕೊಳ್ಳುತ್ತಾರೆ. ಮಹಾರಾಷ್ಟ್ರೀಯನ್ನರಿಗಿಂತ ಸ್ವಲ್ಪ ಭಿನ್ನ ಆಚರಣೆಗಳನ್ನು ಹೊಂದಿದ್ದಾರೆ. ನವರಾತ್ರಿ, ದೀಪಾವಳಿ, ಗಣೇಶ ಚತುರ್ಥಿ,ಗುಡಿಪಾಡವಾ (ಯುಗಾದಿ), ರಕ್ಷಾ ಬಂಧನ ಹಾಗೂ ಬೆಂದರ್ ಎಂಬ ಹಬ್ಬಗಳನ್ನು ಆಚರಿಸುತ್ತಾರೆ. 'ಬೆಂದರ್', ಮಕರ ಸಂಕ್ರಾಂತಿ ಸಮಯದಲ್ಲಿ ರಾಸುಗಳಿಗೆ ಅಲಂಕರಿಸಿ ಪೂಜಿಸುವ ಹಬ್ಬವಾಗಿದೆ. ಶಿಂಧದುರ್ಗ ಜಿಲ್ಲೆಯ ಸಾವಂತವಾಡಿ ಬಳಿಯ 'ನಾರುಳ' ಎಂಬಲ್ಲಿರುವ 'ಮಾಲಕ್ಷ್ಮಿ' ದೇವಸ್ಥಾನ ಇವರ ಕುಲದೇವತೆಯ ನೆಲೆಯಾಗಿದೆ. ಇಲ್ಲಿನ ನವರಾತ್ರಿ ಪೂಜೆ ವೈಭವದಿಂದ ನಡೆಯುತ್ತದೆ. ತ್ರಿಪುರ ಪೂರ್ಣಿಮೆಯಂದು ಅಲ್ಲಿ

ರಥೋತ್ಸವ ಜರುಗುತ್ತದೆ. ಆಗ ಈ ವೈಶ್ಯ ಲಾಡರೆಲ್ಲ ಅಲ್ಲಿ ಹೋಗಿ ದೇವತಾ ಕಾರ್ಯ ಆಚರಣೆಯಲ್ಲಿ ತೊಡಗುತ್ತಾರೆ.

ಈ ವೈಶ್ಯ ವಣಿಕ ಲಾಡರಲ್ಲಿನ ಕೆಲವು ಅಡ್ಡ ಹೆಸರಿನ ಮನೆತನಗಳೆಂದರೆ ಕಾಂಟೀಪುರ್, ಬೋಬಾಟಿ, ಪಾಲ್ಕರ್, ಧಾವನ್, ರೇವ್‌ಡೇಕರ್, ಪಾವಸ್‌ಕರ್, ತೆಲಾನ್, ಸೋನಿ, ಗೋಗ್ಟೆ, ಕಾನೇಕರ್, ಕಂಕೇಕರ್ ಹಾಗೂ ಬಿಲ್ಲೆ. ಜಿಲ್ಲೆ ಮನೆತನದ ನಾಮಾನಂದ ಮಹಾರಾಜ ಜಿಲ್ಲೆ ಪಂಡರಾಪುರಕ್ಕ ಹೋಗಿ ಅಲ್ಲಿ ಗುರುದೀಕ್ಷೆ ಪಡೆದು. ಅವರು ಕಟ್ಟಿರುವ ಮಠ ಈಗಲೂ ರಾಶಿವಾಡೆಯಲ್ಲಿದೆ. ಈ ವೈಶ್ಯವಣಿಕ ಲಾಡರೂ ಸಹ ವ್ಯಾಪಾರದಲ್ಲಿ ಹೆಚ್ಚಿನ ಹೆಸರು ಸಂಪಾದಿಸಿದ್ದಾರೆ.

**ಸಿಂಧಿ ಲೋಹಾಣಾ ಲಾಡರು :**

ಈ ಮೊದಲೇ ಚರ್ಚಿಸಿದಂತೆ ಲಾಠ ಸಾಮ್ರಾಜ್ಯವು ದಕ್ಷಿಣ ಗುಜರಾತ್‌ನಿಂದ ಪಶ್ಚಿಮದ ಕಡೆ ವಿಸ್ತರಿಸಿ ಈಗಿನ ಪಾಕಿಸ್ತಾನದ ಲಾಡ್‌ಖಾನವನ್ನು ಕೇಂದ್ರವನ್ನಾಗಿ ಹೊಂದಿತ್ತು. ಅಲ್ಲಿನ ಸಿಂಧಿ ಜನಾಂಗ ಈ ಲಾಟ ಪ್ರದೇಶದ ಆಳ್ವಿಕೆ ನಡೆಸುತ್ತಿತ್ತು. ಈ ಲಾಡರು ವಾಸಿಸುತ್ತಿದ್ದ ಭಾಗದ ಸಿಂಧ್ ಪ್ರದೇಶವು ಪಾಕಿಸ್ತಾನದ (ಕರಾಚಿಯ) ದಕ್ಷಿಣದ ಕಡೆಯ ಪ್ರದೇಶ. ಆಚೆಬದಿಯ ಪಾಕಿಸ್ತಾನದ ಕರಾಚಿಯ ಉತ್ತರದ ಸಿಂಧಿಗಳನ್ನು ಉತ್ತರದ ಸಿಂಧಿಗಳೆಂದು ಕರೆಯುತ್ತಾರೆ. ಇಲ್ಲಿ 'ಲಾಟ್' ಎಂಬುದು ಸಮುದ್ರದ ಆಚೆ ಬದಿಯ ಸ್ಥಳ (rear side) ಎಂಬುದು ಇದರ ಅರ್ಥ. ಹೀಗೆ ಇವರು ದಕ್ಷಿಣಕ್ಕಿರುವ ಮುಂತಾದ ಪ್ರದೇಶಗಳಲ್ಲಿ ನೆಲೆಸಿದ್ದು ದೇಶ ವಿಭಜನೆ ಹೊಂದಿದಾಗ ಭಾರತಕ್ಕೆ ಬಂದರು. ಇದರಿಂದ ಇವರನ್ನು '**ಲೋಹಾನಾ ಲಾಡ್**' ರೆಂದು ಕರೆಯಲಾಗಿದೆ.

ಲೋಹಾನಾ ಸಿಂಧಿ ಲಾಡರು ಕಡಿಮೆ ಸಂಖ್ಯೆಯಲ್ಲಿದ್ದಾರೆ. ಗುಜರಾತಿನ ಎಲ್ಲೆಡೆ ಹಾಗೂ ಭಾರತದ ಎಲ್ಲಾ ರಾಜ್ಯಗಳಲ್ಲೂ ತಮ್ಮ ವ್ಯಾಪಾರದ ವ್ಯಾಪ್ತಿಯನ್ನು ವಿಸ್ತರಿಸಿದ್ದಾರೆ. ಸೂರತ್‌ನಲ್ಲಿ ಸುಮಾರು ೩೦೦ ಲೋಹಾನ ಲಾಡ್ ಕುಟುಂಬಗಳಿವೆ. ಈ ಲಾಡರು ತಾವು ವಾಸಿಸುವ ಪ್ರದೇಶಗಳಲ್ಲೆಲ್ಲಾ ತಮ್ಮ ಒಬ್ಬ ಮುಖಂಡ '**ಮುಖಿಯಾ**' ನನ್ನು ಹೊಂದಿರುತ್ತಾರೆ. ಇವರ ಐಕ್ಯತೆಗಾಗಿ ಶ್ರಮಿಸಿದವರು ಶ್ರೀ ಲೀಲಾಸಾ ಮಹಾರಾಜರು. ಇವರು ೧೯೫೪ರಲ್ಲಿ ಮೊದಲ ಸಂಘಟನಾ ಸಮ್ಮೇಳನವನ್ನು ಉಜ್ಜಯಿನಿಯಲ್ಲಿ ನಡೆಸಿದರು. ಅಂದಿನಿಂದ ಲೀಲಾಸಾ ರವರು ಲೋಹಾಣಾ ಲಾಡರಿಗೆ ತಾವು ನೆಲೆಸಿರುವ ಕಡೆಗಳಲ್ಲೆಲ್ಲಾ ತಮ್ಮ ಸಂಘ–ಸಂಸ್ಥೆಗಳನ್ನು ಕಟ್ಟಿಕೊಂಡು ಒಗ್ಗಟ್ಟಾಗಿರಲು ಆದೇಶಿಸಿದರು. ಇದರಿಂದ ಒಗ್ಗಟ್ಟು ಹಾಗೂ ಸಮಾಜದ ಬೆಳವಣಿಗೆಗೆ ಕಾರಣರಾದರು.

ಮೂಲಸಿಂಧಿಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದು ವೈಭವದ ಹಾಗೂ ಶ್ರೀಮಂತಿಕೆಯ ಜೀವನ ನಡೆಸುತ್ತಾರೆ. ಆದರೆ ಲಾಡ ಲೋಹನಾ ಸಿಂಧಿಗಳು ಮಿತವ್ಯಯಕ್ಕೆ ಪ್ರಾಮುಖ್ಯತೆ ನೀಡುತ್ತಾರೆ. ಹೆಣ್ಣು ನಿಶ್ಚಯ ಮಾಡುವಾಗ ಇವರು ಒಟ್ಟು ಆರು ಜನ ಗಂಡಸರು ಮಾತ್ರ

ಹೆಣ್ಣಿನ ಮನೆಗೆ ಹೋಗುತ್ತಾರೆ. ಏಳನೆಯವನು ಆ ದಿಬ್ಬಣದಲ್ಲಿ ಬರುವಂತಿಲ್ಲ. ಹಾಗೇನಾದರೂ ಬಂದರೆ ಅವನಿಗೆ ಐದು ಸಾವಿರ ದಂಡ ವಿಧಿಸುತ್ತಾರೆ. ಈ ಪದ್ಧತಿ ಅತಿ ಪ್ರಾಚೀನ ಹಾಗೂ ವಿಶಿಷ್ಟವಾದುದು.

ಲೋಹಾಣಾ ಲಾಡರಲ್ಲಿ ಶ್ರೇಷ್ಠಸ್ಥಾನ ನೀಡಲಾಗಿದೆ. ವರುಣ ದೇವನನ್ನು ಇವರು 'ಜೂಲೇಲಾಲ್' ಎಂದರು ಕರೆಯುತ್ತಾರೆ. ಪಾಕಿಸ್ತಾನದಲ್ಲಿ ಯವನರ ಕಾಟ ಹೆಚ್ಚಾದಾಗ ಲೋಹಾಣಾ ಲಾಡರನ್ನು ವರುಣದೇವ ಬಂದು ರಕ್ಷಣೆ ಮಾಡಿದ ಎಂಬ ನಂಬಿಕೆ ಇದೆ. ಹಾಗಾಗಿ ಜೂಲೇಲಾಲಿನ ಆರಾಧನೆಯ ಹಬ್ಬವನ್ನು ವಿಶೇಷ ಆಚರಣೆಯ ಮೂಲಕ **'ಕೇಟಿ ಚಂಡ್'** ಎಂಬ ಈ ಹಬ್ಬ ಆಚರಿಸುತ್ತಾರೆ. ಕೇಟಿ ಚಂಡ್ ಹಬ್ಬವು ಮಾರ್ಚ್ ೩೦ರಂದು ಆಚರಿಸಲ್ಪಡುತ್ತದೆ. ಹಿಂದೂಗಳ ಹಬ್ಬಗಳನ್ನು ಆಚರಿಸುವುದ ಜೊತಗೆ ದೀಪಾವಳಿ ಮತ್ತು ಹೋಳಿಯನ್ನು ಹೆಚ್ಚಿನ ರೀತಿಯಲ್ಲಿ ಆಚರಿಸುತ್ತಾರೆ.




ಲೋಹಾಣಾ ಲಾಡರ ಕಲ್ಯಾಣ ಮಂಟಪ ಹಾಗೂ ಲೀಲಾಸಾ ಗುರುಗಳ ಸಮಾಧಿ, ಸೂರತ್, ಗುಜರಾತ್

ಕೇಟಿಚಂಡ್ ಹಬ್ಬದಲ್ಲಿ ಗೋಧಿಹಿಟ್ಟಿನ ದೀಪ ಮಾಡಿ ಅದನ್ನು ಅಖಂಡ ನಂದಾದೀಪದಂತೆ ನಿರಂತರ ಉರಿಸುತ್ತಾರೆ. ನಂತರ ಈ ದೀಪವನ್ನು ವಿಸರ್ಜಿಸುವಂತೆ ಅದನ್ನು ಪೂಜಿಸಿ ವಿಸರ್ಜಿಸಲಾಗುತ್ತದೆ. ಈ ಪೂಜೆಯನ್ನು ಅಖಂಡ ನಲವತ್ತು ದಿನಗಳ ವ್ರತವಾಗಿ ಆಚರಿಸುತ್ತಾರೆ. ದಕ್ಷಿಣಭಾರದಲ್ಲಿ ಅಯ್ಯಪ್ಪಸ್ವಾಮಿಯ ಮಂಡಲ ಪೂಜೆಯಂತೆ ನಲವತ್ತು ದಿನಗಳ ವ್ರತ ನಡೆಸುವವರೂ ಇದ್ದಾರೆ.

ಲೋಹಾಣಾ ಸಿಂಧಿ ಲಾಡರು ಹೆಮ್ಮೆಯ ಗೌರವಯುತ ಜೀವನ ನಡೆಸಲು ಸಾಧ್ಯವಾಗಿರುವುದು ಶ್ರೀ ಲೀಲಾಸಾ ಮಹಾರಾಜರ ಶ್ರಮದಿಂದ ಹಾಗಾಗಿ ಅವರನ್ನು ಶ್ರೀರಾಮ ದೇವ್‌ಪೀರ್ (ಸಂತ) ಎಂದು ಕರೆಯಲಾಗಿದೆ. ಇವರನ್ನು ಪ್ರೀತಿಯಿಂದ ಇವರ ಪವಾಡಗಳಿಗಾಗಿ **'ಲೀಲೋ'** ಎಂದು ಕರೆದು, ಇವರು ಪವಾಡ ಚಮಾತ್ಕಾರಗಳನ್ನು ತೋರಿಸಿದ್ದರಿಂದ ಇವರಿಗೆ **'ಲೀಲಾಸಾ'** ಎಂದು ಹೆಸರು ಬಂತು. ಇವರು ರಾಜಸಂತಾನದಂತೆ ಗೌರವ ಪಡೆದು, ಸೋಮವಂಶ ಕ್ಷತ್ರಿಯ ದೊರೆಯಂತೆ ಬಿಳಿಕುದುರೆ, ಬಿಳಿಛತ್ರ, ಖಡ್ಗ ಹಿಡಿದು ಶತ್ರುಗಳಿಗೂ ಸಿಂಹಸ್ವಪ್ನವಾಗಿದ್ದರು. ಇದರಿಂದ ಇವರಿಗೆ ಅವರ ಕ್ಷಾತ್ರತೇಜ 'ಲೀಲಾಸಾ ಮಹಾರಾಜ'ಎಂಬ ಬಿರುದಿನಿಂದ ಲೋಹಾಣಾ ಲಾಡರನ್ನು ರಕ್ಷಿಸಿದ್ದಾರೆ. ಸೂರತ್‌ನಲ್ಲಿ ಲೀಲಾಸಾ ಮಹಾರಾಜರ ಒಂದು ದೇವಾಲಯ ಕಟ್ಟಿ, ಅಲ್ಲಿ ಒಂದು ಕಲ್ಯಾಣ ಮಂಟಪವನ್ನೂ ನಿರ್ಮಿಸಿದ್ದಾರೆ (ಚಿತ್ರ ನೋಡಿ). ಮೂಲಗುಜರಾತಿನವರಾದ ಸಮಾಜ ಚಿಂತಕ, ಧಾರ್ಮಿಕ ಗುರು ಶ್ರೀ ಅಸಾರಾಮಜೀ ಬಾಪುರವರು ಲೀಲಾಸಾ ಮಹಾರಾಜರ ಶಿಷ್ಯರೇ ಆಗಿದ್ದಾರೆ.

**ಲಾಡ ಸೋನಾರ (ವಿಶ್ವಕರ್ಮ):**



ಲಾಡ ಸೋನಾರರೂ ಸಹ ದಕ್ಷಿಣ ಗುಜರಾತ್ ಅಥವಾ ಲಾಟದೇಶದಿಂದಲೇ ವಲಸೆ ಬಂದವರು. ಇವರು ಕುಶಲ ಕಲೆಯಲ್ಲಿ, ಕುಸುರಿ ಕಲೆಯನ್ನು ಸಹ ಅತ್ಯಂತ ಆಕರ್ಷಕವಾಗಿ ಮಾಡುತ್ತಿದ್ದರು. ಇವರು ಸಿದ್ಧಪಡಿಸಿದ ಸರಕು ಸೂರತ್ ಹಾಗೂ ಭೃಗಕಚ್ಛದಿಂದ ಹೊರ ದೇಶಗಳಿಗೆ ರಫ್ತಾಗುತ್ತಿತ್ತು. ರೇಷ್ಮೆಯ ವಸ್ತ್ರ. ಸೀರೆಗಳಿಗೆ ಚಿನ್ನದ ಎಳೆಯಲ್ಲಿ ಅತ್ಯಂತ ಆಕರ್ಷಕವಾಗಿ ಮುತ್ತು ರತ್ನ, ಗೋಮೇಧಗಳನ್ನು ಪೋಣಿಸಿ ಕಸೂತಿ ಮಾಡಿ ಸುಂದರ, ಬೆಲೆ ಬಾಳುವ ವಸ್ತ್ರಗಳನ್ನಾಗಿ ರಾಜಮಹಾರಾಜರಿಗೆ, ಗಣ್ಯರಿಗೆ, ಶ್ರೀಮಂತರಿಗೆ ಸರಬರಾಜು ಮಾಡುತ್ತಿದ್ದರು. ಅಲ್ಲದೆ ಅತಿ ಮೋಹಕವಾದ ಬಗೆ ಬಗೆಯ ನಮೂನೆಗಳ ಒಡವೆಗಳನ್ನು ತಯಾರು ಮಾಡುತ್ತಿದ್ದರು. ರಾಜರ ಸಿಂಹಾಸನ, ಕಿರೀಟ, ಖಡ್ಗ, ಬಾಕುಗಳಿಗೆಲ್ಲ ಇವರ ಸುಂದರ ಕಲಾ ನಮೂನೆಯ ಕೆಲಸವಿರುತ್ತಿತ್ತು. ಮಹಾರಾಷ್ಟ್ರದ ಪೈಠಣವು ಶಾತವಾಹನರ ಕಾಲದಲ್ಲಿ ಪ್ರಮುಖ ವಾಣಿಜ್ಯ ಕೇಂದ್ರವಾಗಿ ಮೆರೆಯುತ್ತಿದ್ದ ಕಾಲಕ್ಕೆ ಇವರುಗುಜರಾತಿನಿಂದ ವಲಸ ಬಂದು ಅಹಮದ್‌ನಗರ, ಪುಣೆ, ಪೈಠಣಗಳಲ್ಲಿ ಬೀಡುಬಿಟ್ಟರು. ಕ್ರಮೇಣ

ಮಹಾರಾಷ್ಟ್ರೀಯನ್ನರೇ ಆಗಿ ಮಾರ್ಪಟ್ಟಿದ್ದಾರೆ. ಮಧ್ಯಕಾಲೀನ ಯುಗದಲ್ಲಿ ದಖ್ಖನ್ನಿನ ಅನೇಕ ಭಾಗಗಳಿಗೆ ಪೈಠಣದಿಂದ ಬಂಗಾರದ ಒಡವೆ, ವಸ್ತ್ರಗಳು ಸರಬರಾಜಾಗುತ್ತಿದ್ದವು. ಈಗ ಪುಣೆ, ಮುಂಬಯಿ, ನಾಗಪುರಗಳಲ್ಲಿರುವ ವಜ್ರದ, ಮುತ್ತು ರತ್ನಗಳ, ಬಂಗಾರದ ಆಭರಣಗಳ ಮಾರಾಟ ಕೇಂದ್ರಗಳು ಈ ಗುಜರಾತಿನ ಸೋನಾರ್ ಲಾಡರಿಂದಲೇ ಜವಾಹಿರಿ ಅಂಗಡಿಗಳೆಂದು ಪ್ರಸಿದ್ಧಿಯಾಗಿವೆ.

ಲಾಡಸೋನಾರರಲ್ಲಿ ಶೈವ ಹಾಗೂ ವೈಷ್ಣವ ಎಂಬ ಎರಡೂ ಪಂಗಡಗಳಿವೆ. ಈ ಲಾಡ ಸೋನಾರರ ಆಚಾರ-ವಿಚಾರಗಳೂ ಸಹ ಮಹಾರಾಷ್ಟ್ರದ ಇತರ ಪಂಗಡಗಳಂತೆಯೇ ಇವೆ. ಇವರುಗಳು ಮೂಲತಃ ಗುಜರಾತಿನಿಂದ ಬಂದು ಅಹಮದ್ ನಗರದಲ್ಲೇ ಹೆಚ್ಚಾಗಿ ನೆಲೆಸಿದ್ದರಿಂದ ಇವರಲ್ಲಿ 'ನಗರ್‌ಕರ್' ಎಂಬ ಅಡ್ಡ ಹೆಸರು ಪ್ರಸಿದ್ಧ.

ಲಾಡಸೋನಾರರಲ್ಲಿನ ಅತ್ಯಂತ ಐತಿಹಾಸಿಕ ಪವಾಡವೊಂದನ್ನು ಇಲ್ಲಿ ಉಲ್ಲೇಖಿಸುವುದು ಔಚಿತ್ಯಪೂರ್ಣವೆನಿಸುತ್ತದೆ. ನರಹರಿಸೊನಾರ್ ಮಹಾರಾಷ್ಟ್ರದ ಸೋನಾರ್ ಲಾಡರಲ್ಲೇ ಅತ್ಯಂತ ಪ್ರಸಿದ್ಧ ಕುಶಲಿ ಸ್ವರ್ಣಕಾರನಾಗಿದ್ದರು. ಈ ಅಕ್ಕಸಾಲಿಯು ಕಟ್ಟಾ ಶೈವ ಪಂಥೀಯನಾಗಿ, ನಿಷ್ಠಾವಂತ ಶಿವಭಕ್ತನೆನಿಸಿದ್ದನು. ಇವರು ತಯಾರಿಸುತ್ತಿದ್ದ ಆಭರಣಗಳಿಗೆ ಮನಸೋಲದವರೇ ಇರಲಿಲ್ಲ. ಅಲ್ಲದೆ ಪ್ರತಿಬಾರಿಯೂ ಒಂದಲ್ಲ ಒಂದು ಹೊಸ ನಮೂನೆಯ ಆಕರ್ಷಕ ಮಾದರಿಯನ್ನು ತಯಾರಿಸುವುದರಲ್ಲಿ ಆತ ಎತ್ತಿದ ಕೈ. ಹೀಗಾಗಿ ಪಂಡರಾಪುರದ ಶ್ರೀ ವಿಠ್ಠಲ ಮೂರ್ತಿಗೆ ಆಭರಣಗಳು ಹಾಗೂ ಕಿರೀಟವೊಂದನ್ನು ಮಾಡಿಸಬೇಕೆಂದು ದೇವಾಲಯದ ಮುಖ್ಯಸ್ಥರು ನಿರ್ಧರಿಸಿದಾಗ, ಅವರಿಗೆ ಮೊದಲು ನೆನಪಾದದ್ದು ಈ ನರಹರಿ ಸೋನಾರ್ ಅವನನ್ನು ಮುಖ್ಯಸ್ಥರು ಸಂಪರ್ಕಿಸಿದರು.

ಆದರೆ, ನರಹರಿಯ ಕಿರೀಟ ತಯಾರಿಸಲು ಒಪ್ಪಲಿಲ್ಲ. ಕಾರಣವೇನೆಂದರೆ, ಅವನು ನಿಷ್ಠಾವಂತ ಶೈವ ಭಕ್ತ, ವಿಷ್ಣುವಿನ ಮೂರ್ತಿಯನ್ನು ಕಣ್ಣಾರೆ ನೋಡಲೂ ಅವನು ತಯಾರಿರಲಿಲ್ಲ. ಕಡೆಗೆ ಸ್ವತಃ ಶಿವಾಜಿ ಮಹಾರಾಜರೇ ವಿಠ್ಠಲಸ್ವಾಮಿಯ ಕಿರೀಟ ತಯಾರಿಸಿ ಕೊಡಬೇಕೆಂದು ನರಹರಿ ಸೋನಾರನಿಗೆ ಆಗ್ರಹಿಸಿದರು. ರಾಜಾಜ್ಞೆ ಮೀರಲಾಗದೆ ನರಹರಿ ಇದ್ದಕ್ಕೆ ಷರತ್ತುಬದ್ಧ ಒಪ್ಪಿಗೆ ನೀಡಿದನು. ತಾನು ವಿಠ್ಠಲನ ಮೂರ್ತಿಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಲಾರನೆಂದೂ, ಅದಕ್ಕೋಸ್ಕರ ಅವನಿಗೆ ಕಣ್ಣಿಗೆ ಬಟ್ಟೆಕಟ್ಟಿ ವಿಗ್ರಹದ ಬಳಿ ಒಯ್ಯಬೇಕೆಂತಲೂ ತಿಳಿಸಿದ. ಅವನ ಇಚ್ಛೆಯಂತೆ, ಅವನ ಕಣ್ಣಿಗಳಿಗೆ ಬಿಗಿಯಾಗಿ ಬಟ್ಟೆ-ಕಟ್ಟಿ ಸ್ವಾಮಿಯ ವಿಗ್ರಹದ ಬಳಿ ಕರೆದುಕೊಂಡು ಹೋಗಲಾಯಿತು. ನರಹರಿಯು ವಿಗ್ರಹವನ್ನು ಅಡಿಯಿಂದ ಮುಡಿಯವರೆಗೆ ತಡವಿ ನೋಡಿ ವಿಗ್ರಹದ ತಲೆಗೆ ಹೊಂದುವಂತಹ ಅಳತೆ ಕೈಯಲ್ಲೇ ನಿರ್ಧರಿಸಿದನು. ನಂತರ ಅದರಂತೆ ಆಭರಣಗಳನ್ನು, ಕಿರೀಟವನ್ನೂ ತಯಾರಿಸಿದನು. ಈ ಕಿರೀಟ ಹಾಗೂ ಆಭರಣಗಳನ್ನು ತೊಡಿಸಿದಾಗ ಅವು ಅತ್ಯಂತ ಸಮರ್ಪಕವಾಗಿ, ಕರಾರುವಾಕ್ಕಾಗಿ

ಹೊಂದಿಕೊಂಡವು. ಇದನ್ನು ಕಂಡ ಎಲ್ಲರೂ, ಜೊತೆಗೆ ಸ್ವತಃ ನರಹರಿ ಸೋನಾರನೂ ಸ್ತಂಭೀಭೂತನಾದನು. ಕಣ್ಣಿನಿಂದ ವಿಠ್ಠಲ ಸ್ವಾಮಿಯ ವಿಗ್ರಹವನ್ನೂ ನೋಡದೆಯೇ ಇಷ್ಟು ಸೂಕ್ತವಾಗಿ ಒಪ್ಪುವಂತೆ ತಯಾರಿಸಿದ್ದು ಆ ಭಗವಂತನ ಪವಾಡವೇ ಸರಿ ಎಂದು ನಿರ್ಧರಿಸಿದ ನರಹರಿ ಸೋನಾರ ಅಂದಿನಿಂದ ವಿಷ್ಣು ಭಕ್ತನಾದನು. ಹಾಗೂ ತನ್ನ ಉಳಿದ ದಿನಗಳನ್ನು ಪಾಂಡುರಂಗ ವಿಠ್ಠಲನ ಸೇವೆಯಲ್ಲಿ ಕಳೆದನು.

ಪುಣೆಯ ಬುಧವಾರ ಪೇಟೆಯಲ್ಲಿ ಸೋನಾರ್ ಲಾಡರ ಒಂದು ಮಂಗಳ ಕಾರ್ಯಾಲಯ (ಕಲ್ಯಾಣ ಮಂಟಪ) ಇದೆ. ಈ ಜನಾಂಗವು ಅತ್ಯಂತ ಶ್ರೀಮಂತರನ್ನು ಹೊಂದಿ ಇವರದೇ ಆದ ಒಂದು ಚಿನಿವಾರ ಪೇಟೆ ಪುಣೆನಗರ ಹಾಗೂ ಪೈಠಣಗಳಲ್ಲದೆ ಅಹಮದ್‌ನಗರದಲ್ಲೂ ಇದೆ.

## ಶಿವಲಾಡ್ ಅಥವಾ ಲಿಂಗಾಯತ್ ಲಾಡ್ :

ಲಾಡರಲ್ಲಿ ಲಿಂಗಾಯತ ಲಾಡರೆಂಬ ಒಂದು ವೀರಶೈವ ಪಂಗಡವೂ ಇದೆ. ಇದು ಹೆಚ್ಚಾಗಿ ಬೆಳಗಾಂ, ಸೊಲ್ಲಾಪುರ, ಕೊಲ್ಹಾಪುರ ಮತ್ತಿತರ ಕಡೆ ವಿಸ್ತರಿಸಿದೆ. ಇವರ ಸಂಖ್ಯಾಬಲ ತುಂಬಾ ಕಡಿಮೆ. ಶೈವಧರ್ಮವು ಪ್ರಾಚೀನ ಲಾಠ ರಾಜ್ಯದಲ್ಲಿ ತುಂಬಾ ಜನಪ್ರಿಯವಾಗಿತ್ತು. ದಕ್ಷಿಣ ಗುಜರಾತ್ ಅಲ್ಲದೆ ಪಶ್ಚಿಮ ಗುಜರಾತ್ ಭಾಗದಲ್ಲೂ ಶೈವಧರ್ಮೀಯರು ಹೆಚ್ಚಾಗಿದ್ದರು.

**'ನಲಂದಾ ಅಫತನ ಕೋಶ'** ಎಂಬ ಗ್ರಂಥದಲ್ಲಿ ನೀಡಿರುವ ಪ್ರಕಾರ 'ಲಾಟ' ಪದದ ಅರ್ಥ 'ಲಾಟ್' (೧) ಉಂಚಾ ಔರ್ ಮೋಟಾ ಖಂಬಾ, (೨) ಇಸ್ ಪ್ರಕಾರ್ ಕೆ ಬನಾವಟ್ ಕೀ ಇಮಾರತ್. **'ಪುರಾಣೋಮಾ ಗುಜರಾತ್'** ಎಂಬ ಕೃತಿಯ ಲೇಖಕ ಉಮಾಶಂಕರ ಜೋಷಿ ಬರೆದಿರುವಂತೆ – ಶ್ರೀ ರತ್ನಮಣಿ ರಾವ್‌ರವರು ಅಭಿಪ್ರಾಯಪಡುವಂತೆ 'ಶಿವನ ಲಿಂಗ ರೂಪದ ಪೂಜೆ ನರ್ಮದೆಯ ಪ್ರದೇಶದಲ್ಲಿ ಹಾಗೂ ಕ್ಯಾಂಬ್ ಕೊಲ್ಲಿಯವರೆಗೂ ವಿಸ್ತರಿಸಿತ್ತು. ಈ ಭಾಗಗಳಲ್ಲಿ ಲಿಂಗಪೂಜೆ ವ್ಯಾಪಕವಾಗಿತ್ತು. ಪಶುಪತಿ ಶಿವನ ಪಂಥದ ಉದಯ ಲಾಟ ಪ್ರದೇಶದಲ್ಲಾಯಿತು. ವಿದೇಶಗಳಿಂದ ವ್ಯಾಪಾರಕ್ಕಾಗಿ ಹಾಗೂ ಪ್ರವಾಸಿಗಳಾಗಿ ಬರುತ್ತಿದ್ದ ಪರಕೀಯರು ಲಿಂಗವನ್ನು ಸ್ತಂಭವೆಂದು ಭಾವಿಸಿದ್ದರು. ವಿದೇಶೀಯರ ಭಾಷೆಯಲ್ಲಿ ಸ್ತಂಭಕ್ಕೆ 'ಲಾಟ' ಎಂದು ಕರೆಯಲಾಗುತ್ತಿತ್ತು. ಹೀಗೆ ಕಾಂಬ್ ಕೊಲ್ಲಿಯಿಂದ ನರ್ಮದೆಯ ತಟದವರೆಗಿನ ಪ್ರದೇಶವನ್ನು 'ಲಾಟ' ಎಂದು ಕರೆಯಲಾಯಿತು.

***'ವೀರಶೈವ ಧರ್ಮ ಪಂಥ : ಇತಿಹಾಸದ ತತ್ವಜ್ಞಾನ'*** ಎಂಬ ಕೃತಿಯನ್ನು ರಚಿಸಿದನು ಡಾ॥ ಸುದಾಕರ ಮೋಗಲೇವಾರ್. ಅವರು ಈ ಕೃತಿಯಲ್ಲಿ – ಲಾಟ ಪ್ರದೇಶದಲ್ಲಿ ಶಿವನು ಅವತಾರವೆತ್ತಿದ ಬಗ್ಗೆ ವಿವರವಾಗಿ ಹೀಗೆ ಬರೆಯುತ್ತಾರೆ. ''ಕ್ರಿ.ಶ. ೧೩ನೇ ಶತಮಾನದಲ್ಲಿ ಲಾಟ ಪ್ರದೇಶದಲ್ಲಿನ ಕಾರೋಹಣ ಎಂಬ ಗ್ರಾಮದಲ್ಲಿ ಶ್ರೀ

ಶಂಕರನು. ಭಟ್ಟಾಕರ ಶ್ರೀ ಲಕುಲೀಶ ಎಂಬ ಹೆಸರಿನಿಂದ ಜನ್ಮತಾಳಿದನು. ಲಕುಲೀಶ ಎಂಬ ಒಬ್ಬ ಪಂಡಿತನಿದ್ದನು ಹಾಗೂ ಅವನು ಶೈವ ಪಂಥೀಯ ಶಾಖೆಯನ್ನು ಸ್ಥಾಪಿಸಿದನೆಂಬ ಪ್ರತೀತಿ ಇದೆ. ವಿದ್ವಾಂಸರು ಅಭಿಪ್ರಾಯಪಡುವಂತೆ ಈ ಲಕುಲೀಶನು ಪಂಚಾಧ್ಯಾಯಿ ಹಾಗೂ ಪಂಚಾರ್ಥ ವಿದ್ಯೆಯ ಬಗ್ಗೆ 'ಪಾಶುಪತ' ಎಂಬ ಗ್ರಂಥ ರಚಿಸಿದ ವಿದ್ವಾಂಸನೆನ್ನಲಾಗಿದೆ. ಹೀಗೆ 'ಪಾಶುಪತ ಪಂಥ'ದ ಐತಿಹಾಸಿಕ ಸಂಸ್ಥಾಪಕ ಈ ಲಕುಲೀಶ ಶ್ರೀ ಶಂಕರನ ೧೮ ಅವತಾರಗಳಲ್ಲಿ ಆದ್ಯ ಅವತಾರ ಧರಿಸಿದನೆಂದೂ ಶ್ರೀ ಬಲದೇವ ಉಪಧ್ಯಾಯರೆಂಬ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಅಲ್ಲದೆ, ಕಲಚೂರಿ ನೃಪತಿ ವತ್ಯಾಂಚಾಕಾಲ್' ಎಂಬ ಕೃತಿ ರಚಿಸಿರುವ ಶ್ರೀ ವಿ.ವಿ. ಮಿರಾಶಿಯವರು ಪುಟ ೭೯–೮೦ರಲ್ಲಿ ವ್ಯಕ್ತಪಡಿಸಿರುವಂತೆ – ''ಕಲಚೂರಿಯ ರಾಜಮಾತೆ ಅಲ್ಹಣದೇವಿ ಲಾಟ ಪ್ರದೇಶದಲ್ಲಿ ರುದ್ರರಾಶಿ ಎಂಬ ಪಾಶುಪತ ಆಚಾರ್ಯರನ್ನು ಕರೆಯಿಸಿ ಅವರಿಂದ ಬೇದಾಘಾಟ್ ಎಂಬಲ್ಲಿ ವೈದ್ಯನಾಥನೆಂಬ ಹೆಸರಿನ ಶಿವನ ಮಂದಿರವನ್ನು ಹಾಗೂ ಮಠವನ್ನು ನಿರ್ಮಿಸಿದಳು'' ಎಂದಿದೆ.

ಶಿವಲಾಡ್ ಅಥವಾ ವೀರಶೈವ ಲಾಡ್, ಲಾಡರ ಒಂದು ಚಿಕ್ಕ ಉಪ ಪಂಗಡ. ಇವರಲ್ಲಿ ಸಾಕ್ಷರತೆ ಶೇ. ೫೦ ರಷ್ಟಿದೆ. ಹೆಚ್ಚಾಗಿ ವ್ಯವಸಾಯ ಮತ್ತು ವ್ಯಾಪಾರವನ್ನು ಅವಲಂಬಿಸಿರುತ್ತಾರೆ. ಸೊಲ್ಲಾಪುರದ ಸಿದ್ದರಾಮೇಶ್ವರ ಹಾಗೂ ಶ್ರೀ ಶೈಲದ ಮಲ್ಲಿಕಾರ್ಜುನನ ಭಕ್ತರು. ಸೌದತ್ತಿಯ ರೇಣುಕಾ ಮಾತೆ ಅಥವಾ ಎಲ್ಲವ್ವ ತಾಯಿಯನ್ನ ಪೂಜಿಸುತ್ತಾರೆ. ಎಲ್ಲ ಲಾಡರ ಪಂಗಡಗಳಲ್ಲೂ ಸತ್ತವರನ್ನು ಸುಡುವ ಪದ್ಧತಿ ಇದೆ. ಆದರೆ, ಈ ಶಿವಲಾಡರು ಸತ್ತವರನ್ನೂ ಹೂಳುವ ಸಂಪ್ರದಾಯದವನು. ಮದುವೆಯಲ್ಲದೆ ಕೂಡಿಕೆಯೂ ಇವರಲ್ಲಿ ಸಾಮಾನ್ಯ.

**ಒಮ್ಮೆ ಬೆಳಗಾವಿಯ ಯರಗಟ್ಟಿ ಗ್ರಾಮದಲ್ಲಿ ಸಂಗಪ್ಪನೆಂಬ ಜುಗ್ಗ ಲಾಡ ಮುದುಕನಿದ್ದ. ಬದುಕಿದ್ದಷ್ಟು ದಿನವೂ ಜನರ ಪ್ರೀತಿ, ವಿಶ್ವಾಸ ಗಳಿಸದೆ ದ್ವೇಷ, ತಾತ್ಸಾರಗಳನ್ನೇ ಹೆಚ್ಚು ಸಂಪಾದಿಸಿದ್ದ.** ಕಡೆಗೆ ಸಂಕ್ರಾಂತಿಗೆ ಮುನ್ನ ಒಂದು ದಿನ ಬಂದ ಭೀಕರ ಚಳಿಯಲ್ಲಿ ಸೆಟೆದುಕೊಂಡು ಪ್ರಾಣಬಿಟ್ಟ. ಅಕ್ಕಪಕ್ಕದ ಊರಿನಿಂದ ಬಂದಿದ್ದ ನೆಂಟರಿಷ್ಟರು ಕೇವಲ ೧೫ ಜನ ಮಾತ್ರ. ಅಲ್ಲದೆ ಮನೆಯಲ್ಲಿದ್ದ ಮುದುಕನ ಹೆಂಡತಿ, ಸೊಸೆ ಹಾಗೂ ವಿಧವೆ ತಂಗಿ, ಸರಿ, ಅಂತಿಮ ಸಂಸ್ಕಾರಕ್ಕೆ ಮುದುಕನ ಶವಕ್ಕೆ ಮಡಿ ಮಾಡಿಸಿ, ಹಣೆಗೆ ವಿಭೂತಿ ಹಚ್ಚಿ, ಸಿದಿಗೆ ಬಿಗಿದು ಚಟ್ಟ ಕಟ್ಟಿ, ಸಂಗಪ್ಪನ ಶವವನ್ನು ಕೂಡಿಸಿ ಮೆರವಣಿಗೆ ಹೊರಟರು. ಶವ ವಾಹಕರು ೪–೫ ಜನ ಉಳಿದ ಕೆಲವು ಗಂಡಸರು, ಹೆಂಗಸರು ಊರ ಹೊರಗಿನ ಸೀಗೆಮೆಳೆ, ತೆಂಗಿನ ತೋಟದ ಸ್ಮಾಶಾನಕ್ಕೆ ತರುತ್ತಿದ್ದಾಗ ಅಚಾತುರ್ಯವೊಂದು ಜರುಗಿತು. ಅಗಸೆ ಬಾಗಿಲು ದಾಟಿ, ಸಿಹಿ ನೀರಿನ ಬಾವಿ ಬಳಸಿ ಬೆಟ್ಟದ ಬುಡ, ತೋಟದ ಮರಗಳ ತೋಪಿನ ಮಧ್ಯೆ ಶವ ಹೊತ್ತು ಮೌನವಾಗಿ ಮೆರವಣಿಗೆ ಸಾಗಿದ್ದಾಗ, ನೇರಳೆ, ಹಲಸು, ಮಾವಿನ ಮರಗಳ ಮಧ್ಯೆ

ದೊಡ್ಡ ಜೇನೊಂದು ಕಟ್ಟಿತ್ತು. ಕುರಿ ಕಾಯುತ್ತಿದ್ದ ಹೈದನೊಬ್ಬ ಸಂಜೆಯಾದ್ದರಿಂದ ಮನೆ ಕಡೆಗೆ ಹೊರಟಿದ್ದ ದೂರದಿಂದ ಶವದ ಮೆರವಣಿಗೆ ಬರುತ್ತಿದ್ದುದನ್ನು ಕಂಡು ಹತ್ತಿರದ ಮರದ ಮರೆಯಲ್ಲಿ ಅವಿತುಕೊಂಡ. ಇದು ಸಂಗಪ್ಪನ ಶವ ಯಾತ್ರೆಯೆಂದು ತಿಳಿದಾಗ ಈ ಹೈದನಿಗೆ ಮರದ ಮರೆಯಲ್ಲಿ ಅವಿತುಕೊಂಡ, ಈ ಹೈದನಿಗೆ ಉಪಾಯವೊಂದು ಹೊಳೆಯಿತು. ಮೆರವಣಿಗೆ ಮರಗಳ ತೋಪಿನ ಮಧ್ಯೆ ಬಂದ ಸಮಯಕ್ಕೆ ಸರಿಯಾಗಿ ಹೆಜ್ಜೇನಿನ ಗೂಡಿಗೆ ಕಲ್ಲೊಂದನ್ನು ಬೀಸಿ ಒಗೆದ. ಬೂರುಗದ ಮರದಲ್ಲಿ ಕಟ್ಟಿದ್ದ ಜೇನು ಕೆರಳಿ ಹುಳುಗಳು ಶವವಾಹಕರನ್ನೂ, ಮೆರವಣಿಗೆಯಲ್ಲಿದ್ದ ಹೆಂಗಸರು, ಗಂಡಸರನ್ನೂ ಮುತ್ತಿ ಕಚ್ಚಿದಾಗ, ಚಟ್ಟ ಕೆಳಕ್ಕೆ ಒಗೆದು 'ಸತ್ತೆವ್ನೋ' ಎಂದು ಅರಚುತ್ತಾ ದಿಕ್ಕಾಪಾಲಾಗಿ ಓಡಿ ಹೋದರು. ಎಲ್ಲರ ಮುಖ, ಕೈಕಾಲುಗಳು ಬಾತುಕೊಂಡವು. ಸೀಗೆ ಬೇಲಿಯ ಮುಳ್ಳಿಗೆ ಸೀರೆ ಸಿಕ್ಕಿ, ಜೇನುಗಳಿಂದ ಕಚ್ಚಿಸಿಕೊಂಡ ಹೆಂಗಸರ ಪಾಡಂತೂ ಹೇಳಲಾಗದು. ಸಂಗಪ್ಪ ಲಾಡನ ಶರೀರಕ್ಕೆ ಜೇನು ಮುಳ್ಳುಗಳು ಹೊಕ್ಕು ಮೈ ಬಾಉಕೊಂಡು ಹೆಣ ವಿಕಾರವಾಗಿ ಕಾಣುತ್ತಿತ್ತು. ಅದನ್ನು ಕಂಡ ಭೂತಗಳೂ ರಾತ್ರಿ ಬೆಚ್ಚಿ ಬಿದ್ದಿರಬೇಕು. ಇದನ್ನು ದೂರದಿಂದ ಕಂಡ ದನ, ಕುರಿ ಕಾಯುತ್ತಿದ್ದ ಪಡ್ಡೆ ಹುಡುಗರು ಬಿದ್ದು ಬಿದ್ದು ನಗತೊಡಗಿದರು. ಕಡೆಗೆ ಮಾರನೇ ದಿನ ಸುದ್ದಿ ತಿಳಿದ ಊರ ಹಿರಿಯರು, ಶವ ಸಂಸ್ಕಾರವಾಗದಿದ್ದರೆ ಊರಿಗೆ ಕೇಡು ಬಂದೀತೆಂದು ತಿಳಿದು, ಸಂಗಪ್ಪ ಲಾಡನ ಸಂಸ್ಕಾರ ಮಾಡಿಸಿದರು. ಕಡೆಗೂ ಸಂಗಪ್ಪ ಲಾಡನಿಗೆ ಮುಕ್ತಿ ಸಿಕ್ಕಿತು. ಇಂದಿಗೂ ಯರಗಟ್ಟಿ ಗ್ರಾಮದ ಜನ ಸಂಗಪ್ಪ ಜುಗ್ಗ ಲಾಡನ ಕಥೆ ನೆನೆಸಿಕೊಂಡು ನಗತೊಡಗುತ್ತಾರೆ.

ಶಿವಲಾಡರು ಶೆಂಗಾ, ಹೊಗೆಸೊಪ್ಪು, ಬೆಲ್ಲ, ಇವುಗಳನ್ನು ಮಾರಾಟ ಮಾಡುವ ದಿನಸಿ ಅಂಗಡಿಗಳನ್ನು ಹೊಂದಿದ್ದಾರೆ. ಇವರಲ್ಲಿ ಕೆವರು ಹಾವುಗಳನ್ನು ಹಿಡಿದು ಹಲ್ಲುಕಿತ್ತು,ನಾಗರ ಪಂಚಮಿ, ಷಷ್ಠಿ ಹಬ್ಬಗಳಿಗೆ ಬೆಳಗಾವಿ ಪೇಟೆ ಮುಂತಾದೆಡೆ ತೆಗೆದುಕೊಂಡು ಹೋಗಿ ಜೀವಂತ ನಾಗರ ಪೂಜೆ ಮಾಡಿಸುತ್ತಾರೆ. ಇದರಿಂದ ಅವರಿಗೆ ಸ್ವಲ್ಪ ಹಣ ದೊರೆಯುತ್ತದೆ. ಈ ಲಿಂಗಾಯಿತ ಲಾಡರ ಪೈಕಿ ಬಸಪ್ಪಲಾಡ್ ಎನ್ನುವವರು ಪುಣೆಯಲ್ಲಿ ತಮ್ಮ ಚಿಕ್ಕ ಉದ್ಯಮದಿಂದ ಶ್ರೀಮಂತರಾಗಿ ಉತ್ತಮ ಬಾಳ್ವೆ ನಡೆಸುತ್ತಿದ್ದಾರೆ.

**ಪ್ರಜಾಪತಿ ಅಥವಾ ಕುಂಬಾರ ಲಾಡರು :**

ಕುಂಬಾರ ಲಾಡರನ್ನು 'ಲಾಡ್ ಭುಜೆ' ಎಂಬುದಾಗಿಯೂ ಕರೆಯುತ್ತಾರೆ. ಲಾಡರಲ್ಲಿ ಪ್ರಜಾಪತಿ ಲಾಡರದು ಒಂದು ಪ್ರತ್ಯೇಕ ಪಂಗಡವಾಗಿದೆ. ಇವರು ಹೆಚ್ಚಾಗಿ ಗುಜರಾತಿನ ನವಸಾರಿ, ಸೂರತ್,ಸಿಯಾನ್, ವಡೋದರಾ, ಭಾರೂಜ್ ಮುಂತಾದೆಡೆ ನೆಲೆಸಿದ್ದಾರೆ. ಮೂಲತಃ ಕುಂಬಾರಿಕೆ ಅಥವಾ ಮಡಿಕೆ ಕುಡಿಕೆಗಳಲ್ಲದೆ ಅನೇಕ ಅಲಂಕಾರಿಕ ವಸ್ತುಗಳಾದ ಮಣ್ಣಿನ ಹೂಜಿ, ಗೊಂಬೆಗಳು ಇತ್ಯಾದಿ ತಯಾರಿಸುತ್ತಾರೆ. ಇವರಲ್ಲೂ ಸಹ ವೈಷ್ಣವ ಹಾಗೂ ಶೈವ ಪಂಗಡಗಳಿವೆ. ಕುಂಬಾರರಲ್ಲಿ ಮಾಂಸಾಹಾರಿಗಳು ಮತ್ತು ಸಸ್ಯಾಹಾರಿಗಳೂ ಇದ್ದಾರೆ.

ಕುಂಬಾರ ಲಾಡರು ಎಲ್ಲಾ ಹಿಂದೂ ದೇವರುಗಳನ್ನೂ ಪೂಜಿಸುತ್ತಾರೆ. ಜೊತೆಗೆ ಇವರು `ಎಲ್ಲಾ ಹಿಂದೂ ಹಬ್ಬಗಳನ್ನೂ ಆಚರಿಸುತ್ತಾರೆ. ವಿವಾಹ, ಶ್ರಾದ್ಧ, ನಾಮಕರಣ ಮುಂತಾದ ಎಲ್ಲಾ ಸಾಮಾಜಿಕ ಹಾಗೂ ಧಾರ್ಮಿಕ ಆಚರಣೆಗಳಿಗೆ ಬ್ರಾಹ್ಮಣ ಪುರೋಹಿತರನ್ನು ಕರೆಸುತ್ತಾರೆ. ದಕ್ಷಿಣದಲ್ಲಿ ವಿವಾಹಾದಿ ಶಾಸ್ತ್ರಗಳಲ್ಲಿ ಅಕ್ಕಿಯನ್ನು ಬಳಸುವ ಪದ್ಧತಿ ಇದ್ದರೆ ಉತ್ತರ ಭರತದ ಹಿಂದೂಗಳಲ್ಲಿ ಅಕ್ಕಿಗೆ ಬದಲಾಗಿ ಗೋಧಿಯನ್ನು ಬಳಸುತ್ತಾರೆ. ಇತರೇ ಲಾಡ ಉಪಜಾತಿಗಳಲ್ಲಿರುವಂತೆ ಪ್ರಜಾಪತಿ ಲಾಡರಲ್ಲೂ ವಿವಾಹ ಸಂದರ್ಭಗಳಲ್ಲಿ ಮದುವೆ ಹೆಣ್ಣನ್ನು ಅವಳ ಸೋದರ ಮಾವ ಧಾರೆ ಮಂಟಪಕ್ಕೆ ಕರೆತರುತ್ತಾನೆ. ಮಿಕ್ಕಂತೆ ಎಲ್ಲಾ ಶಾಸ್ತ್ರಗಳೂ ಇತರ ಲಾಡರಲ್ಲಿರುವಂತೆಯೇ ಇದೆ.

ಕುಟುಂಬದಲ್ಲಿ ಸಾವು ಸಂಭವಿಸಿದಾಗ ಪ್ರಜಾಪತಿ ಲಾಡರು ಪುರೋಹಿತರಿಂದ ಶ್ರಾದ್ಧ ಕ್ರಿಯೆಗಳನ್ನು ಮಾಡಿಸುತ್ತಾರೆ. ಸತ್ತ ಹನ್ನೆರಡನೇ ದಿನಂದು ವ್ಯಕ್ತಿ ಸತ್ತ ಸ್ಥಳದಲ್ಲಿ ಹಾಲು ಹಾಗೂ ನೀರನ್ನಿಟ್ಟು ಬರುತ್ತಾರೆ. ಮತ್ತೊಂದು ವಿಶೇಷವೆಂದರೆ ಸಾವು ಸಂಭವಿಸಿದಾಗ ವಿವಾಹಿತರಾಗಲಿ, ಅವಿವಾಹಿತರಾಗಿರಲಿ, ಅವರ ಶವವನ್ನು ಹೂಳುವುದಿಲ್ಲ, ಬದಲಾಗಿ ಅವರ ಶವವನ್ನು ದಹಿಸಲಾಗುತ್ತದೆ.

ಇಂದಿನ ಆಧುನಿಕ ದಿನಗಳಲ್ಲಿ ಮಡಿಕೆ, ಕುಡಿಕೆಗಳಿಗೆ ಬೇಡಿಕೆ ಇಲ್ಲದ ಕಾರಣ, ಇವರು ಕ್ರಮೇಣ ಇತರ ವೃತ್ತಿಗಳೆಡೆ ಆಕರ್ಷಿತರಾಗುತ್ತಿದ್ದಾರೆ. ಹಾಗೂ ತಮ್ಮ ಪರಂಪರಾನುಗತ ವೃತ್ತಿಯಿಂದ ಹಿಂದೆ ಸರಿಯುತ್ತಿದ್ದಾರೆ. ಲೇಖಕರು ಸಂದರ್ಶಿಸಿದ ಹತ್ತು ಕುಂಬಾರ ಲಾಡರಲ್ಲಿ ಒಬ್ಬರು ವೈದ್ಯರು, ಒಬ್ಬರು ಅಣುಶಕ್ತಿ ವಿಭಾಗದ ವಿಜ್ಞಾನಿ, ನಾಲ್ವರು ತಾಂತ್ರಿಕ ವಿಭಾಗದಲ್ಲಿ ಕೆಲಸದಲ್ಲಿರುವವರು, ಇಬ್ಬರು ವ್ಯಾಪಾರಿಗಳು ಹಾಗೂ ಕೇವಲ ಇಬ್ಬರು ತಮ್ಮ ಪರಂಪರಾನುಗತ ವೃತ್ತಿ ಕುಂಬಾರಿಕೆಯಲ್ಲಿ ಮುಂದುವರೆದವರು.

**ವನ್‌ಜಾರಾ ಅಥವಾ ಲಾಡ್‌ಜಿನ್:**

ವನ್‌ಜಾರಾ ಅಥವಾ ಬಂಜಾರ ಲಾಡರು ಮೂಲತಃ ರಾಜಸ್ಥಾನದ ಲಾಡ ಸಂಸ್ಥಾನದಿಂದ ವಲಸೆ ಬಂದು ಮಹಾರಾಷ್ಟ್ರದಲ್ಲಿ ನೆಲೆಸಿದ್ದಾರೆ. ಇವರು ದನಕರುಗಳನ್ನು ಸಾಕಿ, ಅವುಗಳ ಮಾರಾಟ ಮಾಡುತ್ತಿದ್ದಾರೆ.

ಲಾಡದೇಶದಿಂದ ಲಾಡರು ವಲಸೆ ಹೋದ ಸಂದರ್ಭದಲ್ಲಿ ವನ್‌ಜಾರರ ಪಾತ್ರ ಅತಿ ಪ್ರಮುಖವಾದುದು. ಕ್ರಿ.ಶ. ೧೪ನೇ ಶತಮಾನದಲ್ಲಿ ಗುಜರಾತ್‌ನ ಲಾಠದೇಶ ಹಾಗೂ ರಾಜಾಸ್ಥಾನ, ಮಧ್ಯಪ್ರದೇಶಗಳ ಲಾಡ ಸಂಸ್ಥಾನಗಳಲ್ಲಿ ಭೀಕರ ಕ್ಷಾಮ ಬಂದೊದಗಿತು. ಅಲ್ಲಿಂದ ಲಾಡರು ವಲಸೆ ಹೊರಟರು. ಅವರಿಗೆ ಕ್ಷಾಮದಿಂದ ಅನ್ನಾಹಾರಗಳ ಕೊರತೆ ಉಂಟಾಯಿತು. ಆ ಸಂದರ್ಭದಲ್ಲಿ ವಂಜಾರರ ಒಬ್ಬ ಪ್ರಮುಖ ಮಹಿಳೆ 'ದುರ್ಗಾದೇವಿ' ತನ್ನಲ್ಲಿದ್ದ ಸಾವಿರಾರು ಎತ್ತು ಹಾಗೂ ರಾಸುಗಳನ್ನು ಉಪಯೋಗಿಸಿಕೊಂಡು ಬರ್ಮಾ, ಟಿಬೆಟ್, ಚೀನ ಮುಂತಾದೆಡೆಗಳಿಂದ ಆಹಾರಧ್ಯಾನಗಳನ್ನು ತರಿಸಿಕೊಂಡು ಸಂತ್ರಸ್ಥ ಜನರಿಗೆ ಹಂಚಿ ಕೀರ್ತಿವಂತಳಾದಳು.

ಹಾಗಾಗಿ ಈ ಕ್ಷಾಮವನ್ನು 'ದುರ್ಗಾಕ್ಷಾಮ' ವೆಂದು ಕರೆದರು. ದುರ್ಗಾ ದೇವಿಯನ್ನು ಒಬ್ಬ ಮಾಹನ್ ದೇವಿಯೆಂದು ಜನಾಂಗ ಇಂದಿಗೂ ಸ್ಮರಿಸುತ್ತದೆ. ಅಷ್ಟೇ ಅಲ್ಲದೆ ಇಡೀ ಲಾಡ ಜನಾಂಗವು ಆ ದೇವಿಗೆ ಆಭಾರಿಯಾಗಿದ.

ವಂಜಾರ ಲಾಡರು ಹೆಚ್ಚಿನ ಸಂಖ್ಯೆಯಲ್ಲಿ ಮಹಾರಾಷ್ಟ್ರದ ಮರಾಠಾವಾಡ ಪ್ರದೇಶದಲ್ಲಿ ನೆಲೆಸಿದ್ದಾರೆ. ಅಹಮದ್‌ನಗರ, ಔರಂಗಾಬಾದ್, ಜಾಲನಾ, ಪರಬಣಿ ಆಗೂ ಬೀಡ್ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ವನ್‌ಜಾರಾ ಲಾಡರು ಪ್ರಾರಂಭದಲ್ಲಿ ಅಲೆಮಾರಿಗಳಾಗಿದ್ದರು. ತಮ್ಮ ದನಕರುಗಳಿಗೆ ಹುಲ್ಲು, ನೀರು,ಆಸರೆ ಹುಡುಕುತ್ತಾ ವಲಸೆ ಹೋಗುತ್ತಿದ್ದರು. ಇಂದಿನ ದಿನಗಳಲ್ಲಿ ಪಶುಪಾಲನೆಯೊಂದಿಗೆ ವ್ಯವಸಾಯವನ್ನೂ ಕಸುಬಾಗಿಸಿಕೊಂಡು ಒಂದೆಡೆ ನೆಲೆಸಿದ್ದಾರೆ. ಇವರು ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುವಾಗಲೂ ಸಹ ಅನ್ಯರ ಸಂಪರ್ಕ ಸಾಧಿಸಿದರೂ ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುತ್ತಾರೆ.

ವಂಜಾರಾ ಲಾಡರಲ್ಲಿ ಸಸ್ಯಾಹಾರಿಗಳು ಹಾಗೂ ಮಾಂಸಾಹಾರಿಗಳೂ ಎರಡೂ ಪದ್ಧತಿಯವರಿದ್ದಾರೆ. ಇವರಲ್ಲಿ ಒಂದು ವಿಶೇಷತೆಯೆಂದರೆ, ವಂಜಾರಾ ಸ್ತ್ರೀಯರು ಮಾಂಸಾಹಾರ ಸೇವಿಸುವುದಿಲ್ಲ, ಅದು ಕೇವಲ ಪುರುಷರಿಗೆ ಸೀಮಿತ. ಇವರಲ್ಲಿ ಬಾಲ್ಯ ವಿವಾಹ ಪದ್ಧತಿ ಆಚರಣೆಯಲ್ಲಿದೆ. ಸ್ತ್ರೀಯರಲ್ಲಿ ಸಾಕ್ಷರತೆ ತುಂಬಾ ಕಡಿಮೆ. ಇವರು ಹಿಂದೂಗಳಲ್ಲಿನ ಹಬ್ಬಗಳಾದ ಸಂಕ್ರಾಂತಿ, ಗುಡಿಪಾಡವಾ (ಯುಗಾದಿ), ಶಿವರಾತ್ರಿ, ಹೋಳಿ ನವರಾತ್ರಿ, ದೀಪಾವಳಿ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ದೀಪಾವಳಿ ಸಂದರ್ಭದಲ್ಲಿ ಗೋವುಗಳನ್ನು ಸಿಂಗರಿಸಿ ಪಾದ ತೊಳೆದು ಪೂಜಿಸುತ್ತಾ, ತಮಗೆ ಗೋವುಗಳನ್ನು ಕರುಣಿಸಿದ ಶ್ರೀ ಕೃಷ್ಣನಿಗೆ, ಎಮ್ಮೆ ಆಕಳನ್ನು ಕರುಣಿಸಿದ ಲಕ್ಷ್ಮಿಗೆ ಹಾಡಿನಲ್ಲಿ ವಂದಿಸುವುದು ರೂಢಿ.

ಹೋಳಿ ಹುಣ್ಣಿಮೆಯಲ್ಲಿ ತರುಣರು ನಿಲುವಂಗಿ 'ಜಗಾ'ವನ್ನು ಧರಿಸಿ. (ಇದು ಶಿವಾಜಿ ಮಹಾರಾಜರು ಧರಿಸುತ್ತಿದ್ದ ಉಡುಪು) ಸೊಂಟಕ್ಕೆ ಬಟ್ಟೆ ಕಟ್ಟಿ ತಲೆಗೆ ಜರು ರುಮಾಲು ಧರಿಸಿ ವಾದ್ಯದ ಸದ್ದಿಗೆ ತಕ್ಕಂತೆ ಕುಣಿಯುವುದನ್ನು 'ಜಗಾ ಕುಣಿತ' ಎನ್ನುತ್ತಾರೆ. 'ಪವತೆ' ಈ ಜನಾಂಗದ ಮತ್ತೊಂದು ಹಬ್ಬ. ಇದನ್ನೂ ರಕ್ಷಾ ಬಂಧನದ ದಿನ ಆಚರಿಸಲಾಗುತ್ತದೆ. ಸ್ನಾನಾನಂತರ ದೇವರನ್ನು ಪೂಜಿಸಿ ಆರತಿಯೊಂದಿಗೆ ಪರಸ್ಪರ ಮನೆಯಲ್ಲಿರುವ ಸದಸ್ಯರೆಲ್ಲರೂ 'ಪವತೆ' ಕಟ್ಟಿ ಶುಭ ಕೋರುತ್ತಾರೆ. ಪವತೆಯನ್ನು ಮೊದಲು 'ಜಾಸೋರ್' ಎಂದು ದೇವರಿಗೆ ಕಟ್ಟುವುದು ಸಂಪ್ರದಾಯ. ವಂಜಾರಾ ಲಾಡರ ನೆಚ್ಚಿನ ದೈವವೆಂದರೆ – ಪಂಡರಾಪುರದ ವಿಠಲ. ಪ್ರತಿ ಭಾನುವಾರ ತಪ್ಪದೆ ವಿಠೋಬನ ಪೂಜೆ ನಡೆಸುವುದು ರೂಢಿ.

ಲಾಡ ವಂಜಾರ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳಲ್ಲನೇಕರು ಸಾಹಿತ್ಯ, ಕಲೆ, ಶಿಕ್ಷಣ, ರಾಜಕೀಯ– ಈ ಕ್ಷೇತ್ರಗಳಲ್ಲಿ ಹೆಸರು ಗಳಿಸಿ ಪ್ರಖ್ಯಾತರಾಗಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ

ಭಾಸ್ಕರ ಬೀಡೆ, ಶಿವಾಜಿಮುಂಡೆ, ಶಿವಾಜಿಹುಸೆ ಇವರುಗಳು ಪ್ರಸಿದ್ಧರು. ವಂಜಾರರಲ್ಲಿ ಹಲವರು ಕೀರ್ತನಕಾರರಿದ್ದಾರೆ. ಮಹಾರಾಷ್ಟ್ರದಲ್ಲಿ ಇವರು 'ವಾರ್ಕರಿ' ಸಂಪ್ರದಾಯದವರೆಂದು ಪ್ರಸಿದ್ಧರಾಗಿದ್ದಾರೆ. ಭಗವಾನ್ ಘಡದಿಂದ ಭಗವಾನ್ ಬಾಬಾ ಎಂಬ ಪ್ರಸಿದ್ಧ ಕೀರ್ತನಕಾರರು ವಂಜಾರಾ ಸಮಾಜದಲ್ಲಿ ಕ್ರಾಂತಿಕಾರಕ ಬದಲಾವಣೆ ಮಾಡಿದ ಮಹಾನುಭಾವರೆನಿಸಿದ್ದಾರೆ. ಇವರಲ್ಲದೆ, ಬೀಮಸೇನ್‌ಮಹಾರಾಜ್, ನಾಮದೇವ ಶಾಸ್ತ್ರಿ,ವನಲೆ ಮಹಾರಾಜರು ಮುಖ್ಯರಾದವರು.

ರಾಜಕೀಯ ಕ್ಷೇತ್ರದಲ್ಲಿ ಗೋಪಿನಾಥ ಪಾಂಡುರಂಗ ಮುಂಡೆ ವಂಜಾರಾ ಲಾಡರ ಸಮಾಜದ ಅತಿಗಣ್ಯ ವ್ಯಕ್ತಿ ಮಾಹಾರಾಷ್ಟ್ರದ ಬೀಡ್ ಜಿಲ್ಲೆಯ ಇವರು ರಾಜ್ಯದ ಉಪ ಮುಖ್ಯ ಮಂತ್ರಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಅಹಮದ್ ನಗರಜಿಲ್ಲೆಯನ್ನು ಪ್ರತಿನಿಧಿಸುವ **ಬಬ್ಬನ್ ರಾವ್ ಢಾಕನೆ** ಮತ್ತೊಬ್ಬ ಪ್ರಸಿದ್ಧರು. ಇವರು ಕೇಂದ್ರ ಸರಕಾರದ ಮಂತ್ರಿಗಳಾಗಿದ್ದರು. ಹಾಗೆಯೇ ಜಾಲನಾದ **ಶಂಕರ್ ರಾವ್ ರೇಖ್** ಸಹಾ ಕೇಂದ್ರದ ಮಂತ್ರಿಯಾಗಿದ್ದ ವಂಜಾರಾ ಲಾಡ್. ಔರಂಗಬಾದ್‌ನ ಪ್ರಸಿದ್ಧ ವಂಜಾರಾ ಸಮಾಜದ ಗಣ್ಯ ವ್ಯಕ್ತಿಗಳಾಗಿರುವ ಬಿ.ಆರ್. ಅಂಬರ್ ವಾಡಿಕರ್ ಪ್ರಸಿದ್ಧ ಕಂಟ್ರಾಕ್ಟರ್.

## ದಲಿತ ಲಾಡರು :

ಈ ಮೊದಲೇ ಸ್ಪಷ್ಟಪಡಿಸಿರುವಂತೆ 'ಲಾಡ' ಎಂಬುದು ಜಾತಿಸೂಚಕ ಪದವಲ್ಲ. ಲಾಠದೇಶದಲ್ಲಿ ವಾಸಿಸುತ್ತಿದ್ದ ಎಲ್ಲರೂ ಲಾಡರೆಂದು ಕರೆಯಲ್ಪಡುತ್ತಿದ್ದರು. ಅವರಲ್ಲೂ ಚತುರ್ವರ್ಣಗಳಿದ್ದವು. ಈಗಾಗಲೇ ಬ್ರಾಹ್ಮಣ, ವೈಶ್ಯ ಹಾಗೂ ಶೂದ್ರ ಲಾಡರ ಬಗ್ಗೆ ಚರ್ಚಿಸಲಾಗಿದೆ. ಈ ಗುಂಪಿನಲ್ಲಿ ದಲಿತರೂ ಸಹ 'ಲಾಡ'ರೆಂದು ಕರೆದುಕೊಳ್ಳುವ ಒಂದು ಸಣ್ಣ ಗುಂಪು ಮಹಾರಾಷ್ಟ್ರದ ಕೊಲ್ಹಾಪುರ, ಮಿರಜ್, ಸಾಂಗ್ಲಿ ಹಾಗೂ ಸತಾರಾ ಭಾಗಗಳಲ್ಲಿ ವಾಸಿಸುತ್ತಿದ್ದಾರೆ. ಮಹಾರಾಷ್ಟ್ರ ಸರ್ಕಾರ ಇವರಿಗೆ ಪರಿಶಿಷ್ಠರ ವರ್ಗದಲ್ಲಿ ಮೀಸಲಾತಿ ನೀಡಿದೆ. ಮೀರಜ್–ಕೊಲ್ಹಾಪುರ ನಡುವೆ ಇರುವ ಜೈಷಿಂಗ್‌ಪುರದ ಬಳಿಯ ಕುರಂದವಾಡದಲ್ಲಿ ಭಂಗಿಗಳಾಗಿರುವ ದಲಿತ ಲಾಡರಿದ್ದಾರೆ. ಪಾಯಖಾನೆಗಲನ್ನು ರಸ್ತೆಗಳನ್ನು ಚೊಕ್ಕಟಗೊಳಿಸುವ ಕಾಯಕದಲ್ಲಿ ನಿರತರಾಗಿದ್ದಾರೆ. ಸತಾರಾದಲ್ಲಿರುವ ದಲಿತ ಲಾಡ ಪೊಲೀಸ್ ಇಲಾಖೆಯಲ್ಲಿ ನೌಕರನಾಗಿದ್ದಾನೆ. ಕೊಲ್ಹಾಪುರದ ನಗರ ಬೀದಿಯಲ್ಲಿ ಗಯಬಿ ಪಂಡಿತ್ ಎಂಬ ದಲಿತ ಲಾಡ ಕಿರಾಣಿ ಅಂಗಡಿ ವ್ಯಾಪಾರ ನಡೆಸುತ್ತಿದ್ದಾನೆ. ಎಲ್ಲಾ ಹಿಂದೂಗಳಂತೆ ಇವರೂ ಸಹ ಅಂಬಾಭವಾನಿ ಬೈರೋಜಿ ಹಾಗೂ ಅನೇಕ ದೇವಿ–ದೇವತೆಗಳನ್ನು ಪೂಜಿಸುತ್ತಾರೆ.

## ಕ್ಷತ್ರಿಯ ಲಾಡರು :

ಚತುರ್ವರ್ಣಗಳಲ್ಲಿ ಲಾಡ ಕ್ಷತ್ರಿಯರು ಮತ್ತೊಂದು ಮುಖ್ಯ ಕ್ಷತ್ರಿಯ ಪಂಗಡವಾಗಿದೆ. ಲಾಡ ಕ್ಷತ್ರಿಯರು ಕರ್ನಾಟಕ ಹಾಗೂ ಮಹಾರಾಷ್ಟ್ರ ರಾಜ್ಯಗಳಲ್ಲಿ

ಹರಡಿದ್ದಾರೆ. ಲಾಡ ಕ್ಷತ್ರಿಯರಲ್ಲಿ ಅನೇಕ ಉಪ ಪಂಗಡಗಳಿವೆ. ಈ ಉಪ ಪಂಗಡಗಳು ಪ್ರತಿಯೊಂದು ತನ್ನದೇ ಆದ ಪ್ರತ್ಯೇಕ ಆಚಾರ–ವಿಚಾರಗಳನ್ನು ಹೊಂದಿವೆ. ಹೀಗೆ ವಿಸ್ತರಿಸಿರುವ ಜನಾಂಗದ ಮುಖ್ಯ ಉಪ ಪಂಗಡಗಳೆಂದರೆ : (೧) **ಸೌಧಾಫರ್ ಕ್ಷತ್ರಿಯ ರಾಹುತ್ ಲಾಡರು,** (೨) **ಮರಾಠಾ ಕ್ಷತ್ರಿಯ ಲಾಡ್,** (೩) **ಸುಗಂಧಿ ಲಾಡ್,** (೪) **ಎಲಿಗಾರ್ ಲಾಡ್‌ಷ** (೫) **ಕ್ಷತ್ರಿಯಲಾಡರು,** (೬) **ಸೂರ್ಯವಂಶಿ ಲಾಡ್,** (೭) **ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯ,** (೮) **ಲಾಡ್ ಸಿಂಧಿ ಲೋಹಾಣಾ,** (೯) **ಭಾವಸಾರ್ ಕ್ಷತ್ರಿಯ ಲಾಡ್,** (೧೦) **ಪಾಲಕಾ ಲಾಡ್ / ಹಳೇ ಮಕ್ಕಳು.**

ಲಾಠ ದೇಶವು ಅತಿ ಪ್ರಾಚೀನ ರಾಜ್ಯವಾಗಿತ್ತು, ದಕ್ಷಿಣ ಗುಜರಾತಿಗಿದ್ದ ಮತ್ತೊಂದು ಹೆಸರೇ 'ಲಾಠ'. ಕ್ಷತ್ರಿಯ ಸೋಮ ವಂಶದ ಸರದಾರರು ತಮ್ಮ ಭುಜಬಲದಿಂದ ಶ್ರಮಿಸಿ ಲಾಠ ರಾಜ್ಯವನ್ನು ನಿರ್ಮಿಸಿದರು. ಸ್ಕಂಧ ಪುರಾಣದ ಮಾಹೇಶ್ವರಿ ಖಂಡ–೧ರಲ್ಲಿ ಕೌಮಾರಿಕಾ ಖಂಡದ ಮೂರನೇ ಭಾಗದಲ್ಲಿ ವಿವರಿಸಿರುವಂತೆ– ''ಏಕಾವಿಂಶತಿ ಸಹಸ್ಸ್ರಾವ್ ಲಾಡದೇಶಃ ಪ್ರಕೀರ್ತಿತ್'' ಇದನ್ನೇ ಲೇಖಕ ಉಮಾಶಂಕರ ಜೋಶಿಯವರು ತಮ್ಮ ಕೃತಿ 'ಪುರಾಣೋಮಾ ಗುಜರಾತ್' ನಮ್ಮಲ್ಲಿ ವರ್ಣಿಸಿರುವಂತೆ ''ಲಾಠ ದೇಶದಲ್ಲಿ ಇಪ್ಪತ್ತೊಂದು ಸಾವಿರ ಗ್ರಾಮಗಳಿದ್ದವು. ಅದೇ 'ಲಾಠ', ಲಾಠ ದೇಶಕ್ಕೆಜಯವಾಗಲಿ' ಎಂದರ್ಥ. ಇದಲ್ಲದೆ ''ಋಗ್ವೇದ ಪ್ರಯೋಗ ದೀಪಿಕಾ' ಗ್ರಂಥದ ಮಹಾಸಂಕಲ್ಪದಲ್ಲಿ ಉಲ್ಲೇಖಿಸಿರುವಂತೆ ''ಮಗದ, ಮಾಗಧ, ಮಾಳವ....ಸಿಂಧು, ಸೈಂಧವ...ಗಾಂಧಾರ....ಲಾಟ, ಮರಾಟ, ಕರ್ನಾಟಕ, ದ್ರಾವಿಡ........'' ಲಾಟ ದೇಶವು ಅತಿ ಪ್ರಾಚೀನ ಸಾಮ್ರಾಜ್ಯಗಳಲ್ಲೊಂದೆಂಬುದನ್ನು ತಿಳಿಸುತ್ತವೆ.

ಹೀಗೆ ವರ್ಣಿಸಲ್ಪಟ್ಟಿರುವ ಲಾಠ ದೇಶವು ಲಾಡ ಕ್ಷತ್ರಿಯರಿಂದ ಆಳಲ್ಪಡುತ್ತಿತ್ತು, ಮಾಹಿ ನದಿಯ ದಕ್ಷಿಣ ಹಾಗೂ ನರ್ಮದಾ ನದಿಯ ದಕ್ಷಿಣದಿಂದ ಪೂರ್ಣಾ ಅಥವಾ ದಮನ್ ವರೆಗೆ ವಿಸ್ತರಿಸಿದ್ದ ಪ್ರದೇಶವೇ ಲಾಠ ದೇಶವೆನಿಸಿತ್ತು, ನಂದಿಪುರ ಲಾಠದ ರಾಜಧಾನಿಯಾಗಿತ್ತು ಇಲ್ಲಿ ಸೋಮವಂಶದ ರಾಜ ಲಾಠ. ಅವನ ತಕ್ತಗಾದಿ ಕಾಠೇವಾಡ, ಕಚ್ಛ ಸಿಂಧ. ಇವರ ಲಾಂಛನ ಬಿಳಿ ನಿಶಾನೆ ಹಾಗೂ ಬಿಳಿಛತ್ರ ಇವನು ಬಿಳಿ ಕುದುರೆ ಏರಿ ಬರುತ್ತಿದ್ದ ದೊರೆ. ಗುರುಗೋತ್ರ ವಶಿಷ್ಠ. ಇವನದು ತ್ರಿಪ್ರವರ ಯಜುರ್ವೇದ, ಮಧ್ಯಾನ್ಹಿನಿಶಾಖಾ. ಇವನದು ಪಾರಸ್ಕ ಸೂತ್ರ. ಇವನು ಆರಾಧಿಸುತ್ತಿದ್ದುದ್ದು ಕುಲದೇವತಾ ಭವಾನಿ ಮಾತೆ. ಅಗೋಚರ ಮುದ್ರಾ ಯಾವಾಗಲೂ ವಿಜಯಶಾಸ್ತ್ರಕ್ಕೆ ತಲವಾರ, ಲಗ್ನ ಕಾರ್ಯಕ್ಕೆ ದೇವಕ, ವಸುಂಧಿ ಬಳ್ಳಿ ಇವರ ಕುಳಿ 'ಲಾಡ'– ಇದು ಒಂದೇ ಕುಳಿ. ಇವರು ಲಾಠ ದೇಶದಲ್ಲಿದ್ದುದರಿಂದ ಇವರ ಕುಳಿ 'ಲಾಡ' ಎಂದು ಪ್ರಸಿದ್ಧವಾಗಿದೆ.

### ೧) ಸೌಧಾಫರ್ ಕ್ಷತ್ರಿಯ ರಾಹುತ್ ಲಾಡ್ :

ಸೌಧಾಫರ್ ಕ್ಷತ್ರಿಯ ರಾಹುತ್ ಲಾಡರು ಕರ್ನಾಟಕ ರಾಜ್ಯದಲ್ಲಿ ಮಾತ್ರ ನೆಲೆಸಿರುವುದು ಕಂಡುಬರುತ್ತದೆ. ಲಾಠದ ದೊರೆಗಳಿಗೆ ಕುದುರೆಗಳೆಂದರೆ ಪಂಚಪ್ರಾಣ.

ಇವರ ತಕ್ತಗಾದಿ ಕಾಠೇವಾಡದಲ್ಲಿದ್ದು ಅದು ಕಚ್ಛ ಹಾಗೂ ಸಿಂದ್ ಪ್ರಾಂತಗಳವರೆಗೆ ಹಬ್ಬಿತ್ತು. ಅಂದಿನ ಯುಗದಲ್ಲಿ ಅರೇಬಿಯಾ ಹಾಗೂ ಪರ್ಷಿಯಾ ದೇಶಗಳು ಉತ್ತಮಜಾತ್ಯಾಶ್ವಗಳಿಗೆ ಪ್ರಸಿದ್ಧಯಾಗಿದ್ದವು. ಹಾಗಾಗಿ ಕುದುರೆ ಸಾಕುವ ಉತ್ತಮ ಕೇಂದ್ರಗಳು ಮಧ್ಯ ಮತ್ತು ಪಶ್ಚಿಮ ಏಷ್ಯಾಗಳಲ್ಲಿದ್ದವು. ತದನಂತರ ಗುಜರಾತಿನ ಕಾಠೇವಾಡವು ಭಾರತದಲ್ಲಿ ಕುದುರೆಸಾಕುವ ಮಹತ್ವದ ಕೇಂದ್ರವಾಯಿತು. ಲಾಠದ ವ್ಯಾಪಾರಿಗಳು, ಸಾಂಬಾರ ಪದಾರ್ಥಗಳು, ರೇಷ್ಮೆ ಮುತ್ತು ರತ್ನಗಳು, ಕಸೂತಿ ವಸ್ತ್ರಗಳನ್ನು ಹೊರಗಿನ ದೇಶಗಳಿಗೆ ರಫ್ತು ಮಾಡಿ, ಅಲ್ಲಿಂದ ಅರೇಬಿಯಾದ ಸುಂದರ ಖಡ್ಗಗಳ, ಸುಗಂಧ ದ್ರವ್ಯಗಳು ಹಾಗೂ ಪರ್ಷಿಯಾದಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಲಾಡದೇಶದ ಮತ್ತೊಂದು ಪ್ರಮುಖ ಬಂದರು ಸೂರತ್, ಭರೂಚ್‌ಗಳ ನಂತರ ಹೀಗೆ ಆಳ ದೇಶಗಳೊಡನೆ ವ್ಯಾಪಾರ ಸಂಪರ್ಕವಿಟ್ಟುಕೊಂಡಿದ್ದ ಲಾಠದೇಶದ ಕರಾವಳಿ ಪ್ರದೇಶದಲ್ಲಿ ಆಳ ರಷ್ಟ್ರಗಳ ಧ್ವಜಗಳು ಹಾರಾಡುತ್ತಿದ್ದವೆಂದು ಹೇಳಲಾಗಿದೆ. ಹೀಗೆ ಚೌರಾಸಿ ಲಾಡರ ಒಮದು ಪ್ರಮುಖ ಪ್ರದೇಶವಾಗಿದ್ದು ಅಲ್ಲಿನ ಜನ ಮಾತನಾಡುತ್ತಿದ್ದ ಖಾನ್‌ದೇಶಿ ಮಿಶ್ರಿತ ಗುಜರಾತಿ ಭಾಷೆ ಕೂಡ ಚೌರಾಸಿ ಭಾಷೆಯಾಗಿ ಇಂದಿಗೂ ಕರ್ನಾಟಕದ ಕ್ಷತ್ರಿಯ ಲಾಡರ ಮನೆ ಭಾಷೆಯಾಗಿದೆ. (ಇದೇ ಲೇಖಕರಿಂದ 'ಲಿಂಗ್ವಿಸ್ಟಿಕ್ ಅಪೇರ್ಸ್ ಆಫ್ ಚೌರಾಸಿ ಆರ್ ಲಾಡಿ' ಎಂಬ ಕೃತಿ ಅವಲೋಕಿಸಬಹುದು). ದಕ್ಷಿಣ ಭಾರತದಲ್ಲಿ ಹವಾಮಾನವು ಕುದುರೆ ಸಾಕಲು ಉತ್ತಮವಾಗಿಲ್ಲದ ಕಾರಣ, ದಕ್ಷಿಣದ ರಾಜ್ಯಗಳು ಕಾಠೇವಾಡದ ಕುದುರೆಗಳನ್ನು ತರಿಸಿಕೊಳ್ಳುತ್ತಿದ್ದರು. ಲಾಠ ರಾಹುತರು ಕುದುರೆಗಳನ್ನು ಪಳಗಿಸಿ ಅವುಗಳನ್ನು ಸಂರಕ್ಷಿಸುವ ಹೊಣೆ ಹೊತ್ತಿದ್ದರು. ಅನೇಕ ರಾಜ್ಯಗಳಿಗೆ ಕುದುರೆಗಳನ್ನು, ಖಡ್ಗಗಳನ್ನು ರೇಷ್ಮೆ ವಸ್ತ್ರಗಳನ್ನು , ಮುತ್ತು ರತ್ನ, ಸುಗಂಧ ದ್ರವ್ಯಗಳನ್ನು ಸರಬರಾಜು ಮಾಡುವ ವೃತ್ತಿಯಲ್ಲಿ ತಲ್ಲೀನರಾಗಿದ್ದರು. ಹೀಗೆ ಕುದುರೆಗಳನ್ನು ಸರಬರಾಜು ಮಾಡುತ್ತಿದ್ದರಿಂದ ರಾಹುತರೆಂದೂ, ಸರಂಜಾಮುಗಳನ್ನು ರಾಜ್ಯಗಳಿಗೆ ಸರಬರಾಜು ಮಾಡುತ್ತಿದ್ದ ವ್ಯಾಪಾರಿಗಳಾಗಿದ್ದರಿಂದ 'ಸೌಧಾಘರ್' ಮನೆತನದವರೆಂದೂ ಲಾಡರಾಹುತರ ಹೆಸರು ಹೊಂದಿದ್ದಾರೆ.

ಲಾಡ ರಾಹುತರು ಕೇವಲ ವ್ಯಾಪಾರವಷ್ಟೇ ಅಲ್ಲದೆ ದೊರೆಗೆ ಯುದ್ಧಗಳಲ್ಲೂ ಹೋರಾಟದಲ್ಲಿ ಸಹಾಯ ಮಾಡುತ್ತಿದ್ದರು. ಹೀಗೆ ತಮ್ಮ ಕ್ಷಾತ್ರ ತೇಜವನ್ನೂ ಮೆರೆಸುವ ಅವಕಾಶ ರಾಹುತರಿಗಿತ್ತು. ಕುದುರೆಗಳನ್ನು ಸಾಕುವುದು ಅವುಗಳನ್ನು ತರಬೇತಿಗೊಳಿಸುವುದು ಹಾಗೂ ಅವುಗಳನ್ನು ದೊರೆಗಳಿಗೆ ಸರಬರಾಜು ಮಾಡುವುದು, ಇವುಗಳ ಜೊತೆ ಜೊತೆಗೆ ವಸ್ತುಗಳ ಸರಬರಾಜಿನ ವಹಿವಾಟೂ ಸಹ ಇರುತ್ತಿತ್ತು. ಇಂತಹ ಲಾಡ ರಾಹುತ ಸರದಾರರು, ಗುಜರಾತ್, ರಾಜಾಸ್ಥಾನ, ಮಹಾರಾಷ್ಟ್ರ, ಮಧ್ಯಪ್ರದೇಶ, ಕರ್ನಾಟಕ ರಾಜ್ಯಗಳೊಡನೆ ವ್ಯಾಪಾರ ವಹಿವಾಟು ನಡೆಸುತ್ತಿದ್ದ ಸಂದರ್ಭದಲ್ಲಿ ಸುಮಾರು ೧೪ನೇ ಶತಮಾನದ ವೇಳೆಗೆ ದುರ್ಗಾ ಕ್ಷಾಮದಿಂದ ಹಾಗೂ ಮುಸ್ಲಿಮರ

ಧಾಳಿಗಳಿಂದುಂಟಾದ ರಾಜಕೀಯ ವಿಪ್ಲವಗಳಿಂದಲೂ ವಿಚಲಿತರಾಗಿ, ವಿಧಿ ಇಲ್ಲದೆ, ತಮ್ಮ ಮೂಲ ವಾಸಸ್ಥಾನದಿಂದ ಮಹಾರಾಷ್ಟ್ರ ಹಾಗೂ ಕರ್ನಾಟಕ ರಾಜ್ಯಗಳ ಕಡೆ ವಲಸೆ ಹೊರಟರು.

ಹೈದರಾಲಿ ಚಿತ್ರದುರ್ಗವನ್ನು ವಶಪಡಿಸಿಕೊಂಡು ಶಿರಾ ಪಟ್ಟಣವನ್ನು ವ್ಯಾಪಾರೀ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸುವ ಸಂದರ್ಭದಲ್ಲಿ , ವಲಸೆ ಬಂದ ಲಾಡ ರಾಹುತರು ಶಿರಾ ಪಟ್ಟಣದ ಉತ್ತರ ಭಾಗಗಳಲ್ಲಿ ಬಿಡದಿ ನಿರ್ಮಿಸಿ ಅಲ್ಲಿ ನೆಲೆಸಿದರು. ನಂತರ ಕ್ರಿ.ಶ. ೧೭೮೫ರಲ್ಲಿ ಶಿರಾ ಪಟ್ಟಣವನ್ನು ಸಂದರ್ಶಿಸಿದ ಟಿಪ್ಪು ಸುಲ್ತಾನನು ಅಲ್ಲಿದ್ದ ಜಾತ್ಯಾಶ್ವಗಳನ್ನೂ ಮತ್ತು ರಾಹುತರನ್ನೂ ಕಂಡು ಬ್ರಿಟೀಷರ ವಿರುದ್ಧದ ಕದನಗಳಿಗೆ ಲಾಡರಾಹುತರನ್ನು ಬಳಸಿಕೊಳ್ಳಲು ಹಾಗೂ ಸರಂಜಾಮುಗಳನ್ನು ಪಡೆಯಲು ಸುಮಾರು ೧೦–೧೫ ಸಾವಿರ ಲಾಡ ಸರದಾರರನ್ನು ತಾನು ನೂತನವಾಗಿ ಶ್ರೀರಂಗಪಟ್ಟಣದ ಬಳಿ ಅಭಿವೃದ್ಧಿಪಡಿಸಿದ್ದ ಷಹರ್ ಗಂಜಾಂ ಪಟ್ಟಣಕ್ಕೆ ಕರೆದುಕೊಂಡು ಹೋಗಿ, ಅವರನ್ನು ತನ್ನ ಸೈನ್ಯಕ್ಕೆ ಸೇರಿಸಿಕೊಂಡು ಗಂಜಾಂನಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟನು. ನಂತರದ ಕಾಲದಲ್ಲಿ ನಾಲ್ಕನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ೧೭೯೯ರಲ್ಲಿ ಟಿಪ್ಪು ಮಡಿದ ನಂತರ ಲಾಡರಾಹುತರು ಮೈಸೂರಿನ ಒಡೆಯರ ದೊರೆಗಳ ಸೇವೆಯಲ್ಲಿ ನಿರತರಾದರು. ಈಗ ಶ್ರೀರಂಗಪಟ್ಟಣ, ಗಂಜಾಂ ಹಾಗೂ ಮೈಸೂರು ನಗರಗಳಲ್ಲಿ ಅಧಿಕ ಸಂಖ್ಯೆಯ ಲಾಡರು ನೆಲೆಸಿರುವುದನ್ನು ಕಾಣಬಹುದು.

ಸೌಧಾಘರ್ ಕ್ಷತ್ರಿಯಲಾಡರು ಶೇ. ೯೦ರಷ್ಟು ಜನ ವ್ಯಾಪಾರವನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಪಟ್ಟಣ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ವಾಸವಾಗಿರುವ ಒಟ್ಟು ಕುಟುಂಬಗಳ ಸಂಖ್ಯೆ ಸುಮಾರು ೨೧೫. ಪ್ರತಿ ಕುಟುಂಬದಲ್ಲಿ ಸರಾಸರಿ ೪ ಜನರಂತೆ ಸುಮಾರು ೮೦೦ ಜನಸಂಖ್ಯೆ ಸೌಧಾಘರ್ ಲಾಡರದು. ಕಿರಾಣಿ ಅಂಗಡಿ ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವವರು ಸುಮಾರು ೨೦ ಕುಟುಂಬಗಳು. ಹೋಟೆಲ್ ವ್ಯಾಪಾರದಲ್ಲಿ ಸುಮಾರು ३೦ ಕುಟುಂಬಗಳು ನಿರತವಾಗಿವೆ. ಪುರುಷರಲ್ಲಿ ಸುಮಾರು ಶೇ.೫೫ರಷ್ಟು ಹಾಗೂ ಸ್ತ್ರೀಯರಲ್ಲಿ ಶೇ. ೪೦ ರಷ್ಟು ಸಂಖ್ಯೆಯಲ್ಲಿ ಸಾಕ್ಷರರಾಗಿದ್ದಾರೆ.

ಜನಾಂಗದಲ್ಲಿ ಕೇವಲ ಮೂವರು ಮಾತ್ರ ಕೇಂದ್ರ ಸರ್ಕಾರ ನೌಕರಿಯಲ್ಲಿದ್ದು , ಸಾರ್ವಜನಿಕ ಉದ್ಯಮ ವಲಯದಲ್ಲಿ ಕೇವಲ ಇಬ್ಬರು ಕೆಲಸ ಮಾಡುತ್ತಿದ್ದು, ರಾಜ್ಯ ಸರ್ಕಾರಿ ನೌಕರರಾಗಿ ಸುಮಾರು ಹದಿನಾರು ಜನ ಕೆಲಸ ಮಾಡುತ್ತಿದ್ದಾರೆ. ಖಾಸಗಿ ವಲಯದಲ್ಲಿ ಸುಮಾರು ಹದಿನಾರು ಯುವಕ, ಯುವತಿಯರು ಉದ್ಯೋಗದಲ್ಲಿದ್ದಾರೆ. ಕೇವಲ ಮೂರು ಜನ ಮಾತ್ರ ವೃತ್ತಿಪರರಾಗಿ ತಮ್ಮದೇ ಚಿಕಿತ್ಸಾಲಯ ಹಾಗೂ ಔಷಧಿ ಅಂಗಡಿಗಳನ್ನಿಟ್ಟಿದ್ದಾರೆ. ಐದು ಕುಟುಂಬದವರು ಸಣ್ಣ ಕೈಗಾರಿಕೋದ್ಯಮಿಗಳಾಗಿ ದುಡಿಯುತ್ತಿದ್ದಾರೆ. ಸುಮಾರು ೮–೧೦ಜನರು ತಲೆಯ ಮೇಲೆ ಸರಕನ್ನು ಹೊತ್ತು ಮಾರುವವರು ಹಾಗೂ ಇಬ್ಬರು ವಿಶಿಷ್ಟ ವೃತ್ತಿಯಾದ ಗೈಡ್ (ಮಾರ್ಗದರ್ಶಿ) ಗಳಾಗಿ

ಸೇವೆ ಸಲ್ಲಿಸುತ್ತಿದ್ದಾರೆ. ಉಸಮಾರು ಹತ್ತು ಯುವಕರು ಆಟೋರಿಕ್ಷಾ ಓಡಿಸುತ್ತಿದ್ದರೆ, ಸರಿಸುಮಾರು ಹನ್ನೆರಡು ಕುಟುಂಬಗಳು ವ್ಯವಸಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ಕೇವಲ ಹತ್ತು ಜನ ಶಿಕ್ಷಕ ವೃತ್ತಿಯಲ್ಲಿದ್ದಾರೆ.

ಇನ್ನೂ ಶೈಕ್ಷಣಿಕವಾಗಿ, ಸುಮಾರು ೧೩ ಜನ ತಂತ್ರಜ್ಞಾನ ಕ್ಷೇತ್ರದಲ್ಲಿ ಬಿ.ಇ. ಪದವಿಗಳಿಸಿದ್ದರೆ, ಕೇವಲ ಒಬ್ಬ ಯುವಕ ಹಾಗೂ ಒಬ್ಬ ಯುವತಿ ವೈದ್ಯಕೀಯ ಕ್ಷೇತ್ರದಲ್ಲಿ ಪದವಿಗಳಿಸಿದ್ದಾರೆ. ವಿಜ್ಞಾನ ವಿಷಯದಲ್ಲಿ ಮೂರುಜನ ಸ್ನಾತಕೋತ್ತರ ಪದವಿಗಳಿಸಿದ್ದರೆ, ಒಬ್ಬರು ದಂತವೈ ್ಯ ಪರಿಣಿತರಿದ್ದಾರೆ. ಇಬ್ಬರು ಕಂಪ್ಯೂಟರ್ ತಂತ್ರಜ್ಞಾನದಲ್ಲಿ ಎಂ.ಸಿ.ಎ ಗಳಿಸಿದ್ದರೆ, ಆರು ಜನ ಡಿಪ್ಲೋಮಾ ಪದವಿಗಳಿಸಿದ್ದಾರೆ. ನಾಲ್ಕು ಜನ ಬಿ. ಫಾರ್ಮಾ ಪದವಿಗಳಿಸಿದ್ದರೆ, ಬಿ.ಎ., ಬಿ.ಎಸ್ಸಿ, ಪದವಿಗಳಿಸಿದವರು ಸುಮಾರು ೮ ಜನರಿದ್ದಾರೆ. ಒಟ್ಟಾರೆ ಮೆಟ್ರಿಕ್ ತೇರ್ಗಡೆ ಹೊಂದಿರುವವರು ಸುಮಾರು ೨೦ ಜನರಿದ್ದಾರೆ. ನಾಲ್ವರು ಯುವಕರು ವಿದೇಶಗಳಿಗೂ ತೆರಳಿ ಜನಾಂಗಕ್ಕೆ ಕೀರ್ತಿತಂದಿದ್ದಾರೆ.

ಸೌಧಾಫರ್ ಕ್ಷತ್ರಿಯ ರಾಹುತ್ ಲಾಡ್‌ರಲ್ಲಿ ಅನೇಕ ಹೀರಿಯರು ಜನಾಂಗಕ್ಕೆ ತಮ್ಮ ಶಕ್ತ್ಯಾನುಸಾರ ಸೇವೆ ಸಲ್ಲಿಸಿದ್ದಾರೆ. ಅಂತಹವರಲ್ಲಿ ಮೈಸೂರಿನ ಮಂಡಿಮೊಹಲ್ಲಾದ ಬಳ್ಳಾಪುರಿ ವಂಶದ ಶ್ರೀ ನರಸಣ್ಣ ಅಲಿಯಾಸ್ ಧಣಿಯಣ್ಣನವರು ಮುತ್ತು ಅವರ ಮಗ ಶ್ರೀ ನರಸಿಂಹಯ್ಯನವರು ಪ್ರಮುಖರು. ಅಂದಿನ ದಿನಗಳಲ್ಲೇ ನಾಲ್ವಡಿ ಕೃಷ್ಣರಾಜ ಒಡೆಯರ್ ರವರ ದರ್ಬಾರ್‌ನಲ್ಲಿ ಭಾಗವಹಿಸಿ ಅರಮನೆಯ ಸಂಪರ್ಕವಿರಿಸಿಕೊಂಡಿದ್ದವರು. ಮೈಸೂರಿನ ಇತರ ಲಾಡರೊಂದಿಗೆ ಸೇರಿ ಶ್ರೀ ಚಾಮುಂಡೇಶ್ವರಿ ಅಮ್ಮನವರ ಬೆಟ್ಟದ ಮೇಲೆ ದೇವಸ್ಥಾನದ ಬಳಿ ವಿಶ್ರಾಂತಿ ಮಂಟಪ ನಿರ್ಮಿಸಿದರು. ಕೊಡಲಿ ಮನೆತನದ ಶ್ರೀ ಭೀಮರಾವ್ ದಿವಾಕರ್ ಮಹಾರಾಜರ ಅಂಗರಕ್ಷಕ ಪಡೆಯಲ್ಲಿ ಸೇವೆ ಸಲ್ಲಿಸಿದ್ದರು. ಇನ್ನು ಶ್ರೀರಂಗಪಟ್ಟಣದಲ್ಲಿ ಶ್ರೀ ವೆಂಕಟಣ್ಣನವರು, ಗಂಜಾಂನಲ್ಲಿ ಹೇಮಣ್ಣನವರ ಪುತ್ರ ಪ್ರತಿಷ್ಠಿತ ವ್ಯಾಪಾರಿ ಸುಬ್ಬಯ್ಯನವರು ವರ್ತಕ ವಲಯದಲ್ಲಿ ಹೆಸರುಗಳಿಸಿ ಲಾಡಜನಾಂಗದ ಅತಿಸಂಪನ್ನ ವ್ಯಕ್ತಿಯೆಂದು ಪ್ರಶಂಸೆಗಿಟ್ಟಿಸಿದ್ದರು. ತುಮಕೂರು ಜಿಲ್ಲೆಯ ಸಿರಾ ಪಟ್ಟಣ ಲಾಡರಾಹುತರ ಪ್ರಮುಖ ಕೇಂದ್ರವಾಗಿತ್ತು, ಶಿರಾದ ಸಂಗಾಜಪ್ಪನವರು ಲಾಡರ ಕುಲದೇವತೆ ಶ್ರೀ ಅಂಬಾಭವಾನಿ ದೇವಾಲಯದ ಮುಖ್ಯಸ್ಥರೂ,ಜನಾಂಗದ ಮುಖಂಡರೂ ಆಗಿ ಸೇವೆ ಸಲ್ಲಿಸಿದ ಹಿರಿಯರು. (ಕ್ರಿ.ಶ. ೧೯೨೨) ನಂತರದ ದಿನಗಳಲ್ಲಿ ಆರ್. ಲಕ್ಷ್ಮಣರಾವ್, ಆರ್. ತಿಮ್ಮಯ್ಯ, ಜಿ.ಎನ್ ಸೀಬಯ್ಯ, ಗಜಮಾರನಹಳ್ಳಿ ನರಸಿಂಹಯ್ಯ, ಆರ್.ಟಿ. ರಾಮಣ್ಣ ಮುಂತಾದ ಹಿರಿಯ ಜನಾಂಗದ ಪರವಾಗಿ ಕುಲದೇವತೆಗಳಾದ ಶ್ರೀ ಅಂಬಾಭವಾನೇಶ್ವರಿ ಹಾಗೂ ಆಂಜನೇಯ ಸ್ವಾಮಿಯವರ ದೇವಲಾಯ ಮತ್ತು ಅದಕ್ಕೆ ಸಂಬಂಧಪಟ್ಟ ಜಮೀನಿನ ಅಭಿವೃದ್ಧಿಗೆ ಮೇಲುಸ್ತುವಾರಿ ನಡೆಸಿ ಸೇವೆ ಸಲ್ಲಿಸಿದ್ದಾರೆ. ಲಾಡಜನಾಂಗವು ಮನಸ್ತಾಪಗಳಿಲ್ಲದೆ ಒಗ್ಗಟ್ಟಿನಿಂದ ಕುಲದೇವತೆಯ ಸೇವೆಯಲ್ಲಿ ಒಂದಾಗಿ ತೊಡಗುವುದನ್ನು ನೋಡಲು ಮುಂದಿನ ಪೀಳಿಗೆ ಉತ್ಸುಕವಾಗಿದೆ.

ಶಿಲೇಂದ್ರನಾಥ ರಾಹುತ್ ಜನಾಂಗದ ಅತ್ಯಂತ ಪ್ರತಿಭಾವಂತರು. ಮೊಟ್ಟ ಮೊದಲು ಕರ್ನಾಟಕ ವಿದ್ಯುತ್ ಇಲಾಖೆಯಲ್ಲಿ ಸೇವೆ ಸಲ್ಲಿಸಿದವರು.

**ಕುಲದೇವತೆ :**



ಶಿರಾದ ಅಂಬಾ ಭವಾನೇಶ್ವರಿ – ಆಂಜನೇಯಯ ಸ್ವಾಮಿ

ಸೌಧಾಫರ್ ಕ್ಷತ್ರಿಯ ರಾಹುತ್ ಲಾಡರ ಕುಲದೇವತೆ ಅಂಬಾ ಭವಾನೇಶ್ವರಿ, ತುಮಕೂರು ಜಿಲ್ಲೆಯ ಶಿರಾ ಪಟ್ಟಣದ ಲಾಡಪುರ ಹಟ್ಟಿಯಲ್ಲಿ **ಅಂಬಾ ಭವಾನೇಶ್ವರಿ ಹಾಗೂ ಆಂಜನೇಯ ಸ್ವಾಮಿಯವರ ದೇವಾಲಯಗಳಿವೆ.** ಇವರು ಲಾಡರ ಅತ್ಯಂತ ಪುರಾತನ ಪರಂಪರಾನುಗತ ಕುಲದೇವರುಗಳ ಪುಣ್ಯ ಭೂಮಿಯಾಗಿದೆ. ಶ್ರೀ ಅಂಬಾ ಭವಾನೇಶ್ವರಿ ಹಾಗೂ ಆಂಜನೇಯ ಸ್ವಾಮಿ ದೇವಾಲಯಗಳು ಲಾಡರ ಅತಿಪ್ರಾಚೀನ ಮಂದಿರಗಳಾಗಿವೆ. ಈ ದೇವಾಲಯಗಳು ಯಾರಿಂದ ಹಾಗೂ ಯಾವಾಗ ನಿರ್ಮಾಣವಾದವು ಎಂಬುದಕ್ಕೆ ತಕ್ಕ ಪುರಾವೆಗಳಿಲ್ಲ. ಒಂದು ಐತಿಹ್ಯದ ಪ್ರಕಾರ ಈ ದೇವಾಲಯಗಳನ್ನು ಸುಮಾರು ೧೭–೧೮ನೇ ಶತಮಾನದ ಸಮಯದಲ್ಲಿ ಗೋಸಾಯಿಗಳು **ಪೋಕಲ್ ಪುರಿ** ಮಠ ಎಂದು ಕರೆಯಲ್ಪಡುವ ಸಂಸ್ಥಾನದ ಹತೋಟಿಯಲ್ಲಿಟ್ಟುಕೊಂಡಿದ್ದು ತದನಂತರ ಇವುಗಳು ಸೌಧಾಫರ್ ಕ್ಷತ್ರಿಯ ಲಾಡರ ವಶಕ್ಕೆ ಬಂದವು. ಈ ದೇವಾಲಯಗಳ ನಿರ್ವಹಣೆಗಾಗಿ ಸ್ವಲ್ಪ ಜಮೀನು ಕಾಣಿಕೆ ಸಹ ಇರುವುದು ಸರಿಯಷ್ಟೆ. ಲಕ್ಷ್ಮಣ ಎಂಬುವರು ದೇವಾಲಯದ ಸೇವಾ ಕೈಂಕರ್ಯ ನಡೆಸಿರುವುದು ದಾಖಲೆಗಳಿಂದ ತಿಳಿದುಬರುತ್ತದೆ. ತದನಂತರ ಕಟ್ಟೆಮನೆಯ ಸಂಗಾಜಪ್ಪ ಎನ್ನುವವರು ದೇವಸ್ಥಾನದ ಮೊಕ್ತೇಸರರಾಗಿ ಹಾಗೂ ಜನಾಂಗದ ಯಜಮಾನರಾಗಿ ಲಾಡರಿಂದ ಆಯ್ಕೆಯಾಗಿ ದೇವಾಲಯದ ಆಡಳಿತ ನೋಡಿಕೊಳ್ಳುತ್ತಿದ್ದು, ಸುಮಾರು ಕ್ರಿ.ಶ. ೧೯೨೨ರಲ್ಲಿ ದೇವಾಲಯದ ಪೂಜಾ ಕೈಂಕರ್ಯ ನಡೆಸಲು ನೇಮಿಸಿದ್ದ ಕಾಪಾಲಿಕ

ಪೂಜಾರಿಗಳಾದ ಏಳು ನಾಲಗಪ್ಪ ಹಾಗೂ ಅವರ ಸೋದರ ಸಂಬಂಧಿ ಸಿದ್ದಪ್ಪ ಎನ್ನುವವರಿಗೆ ದೇವಸ್ಥಾನದ ದತ್ತಿ ಜಮೀನನ್ನು ಗೇಣಿಗೆ ನೀಡಲಾಯಿತು. ಆದರೆ, ಸ್ವಲ್ಪ ಸಮಯದ ನಂತರ ಈ ಕಪಾಲಿಕಪೂಜಾರಿಗಳು ಪೂಜಾ ವಿಚಾರಗಳಲ್ಲಿ ಬೇಜವಾಬ್ದಾರಿಯಾಗಿ ನಡೆದುಕೊಂಡಿದ್ದರಿಂದ, ಅವರಿಂದ ಜಮೀನನ್ನು ವಾಪಸ್ ಪಡೆಯಲಾಯಿತು. **ಲಾಡರ ಜನಾಂಗದಲ್ಲಿ ಕೆಲವು ಹೆಸರುವಾಸಿ ಮನೆತನಗಳು ಪ್ರಚಲಿತವಾಗಿದ್ದವು. ಅವುಗಳಲ್ಲಿ– ಬಳ್ಳಾಪುರಿ ವಂಶಸ್ಥರು, ಕಟ್ಟೇಮನೆ ವಂಶಸ್ಥರು, ಕೊಳ್ಳಿಮನೆತನದವರು, ಕೊಡಲಿ ಮನೆತನದವರು, ಗಜಮಾರನಹಳ್ಳಿ ಮನೆತನದನವರು ಮತ್ತು ಕೆಲವನ್ನು ಉಲ್ಲೇಖಿಸಬಹುದು.**

ಮೇಲ್ಕಂಡ ಮನೆತನಗಳಲ್ಲಿ ಕಟ್ಟೇಮನೆಯವರ ಸಂಗಜಪ್ಪ ಹಾಗೂ ಅವರು ಅನಾರೋಗ್ಯದಿಂದ ಹಾಸಿಗೆ ಹಿಡಿದಾಗ ಆರ್ ತಿಮ್ಮಣ್ಣ ನಂತರ ಆರ್. ಲಕ್ಷ್ಮಣರಾವ್ ದೇವಸ್ಥಾನದ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದು, ಅದನ್ನು ತಮ್ಮ ಹಕ್ಕನ್ನಾಗಿ ಸ್ಥಾಪಿಸಲು ನ್ಯಾಯಾಲಯದ ಮೊರೆ ಹೊಕ್ಕರು. ಸುಮಾರು ಕ್ರಿ.ಶ. ೧೯೩೭ ರಿಂದ ೧೯೫೪ ರವರೆಗೂ ವಿವಿಧ ನ್ಯಾಯಾಲಯಗಳು ದೇವಸ್ಥಾನ ಹಾಗೂ ಅದರ ಸ್ವತ್ತಿನ ಮೇಲೆ ಯಾರ ಅಧಿಕಾರವನ್ನೂ ಸ್ಥಾಪಿಸಲು ಒಪ್ಪಲಿಲ್ಲ. ಲಾಡಜನಾಂಗಕ್ಕೆ ವಂಶಪಾರಂಪರ್ಯವಾಗಿ 'ಯಜಮಾನ' ಎಂಬ ಯಾವ ಪಟ್ಟವೂ ಇಲ್ಲವೆಂದೂ, ಕಾಲದಿಂದ ಕಾಲಕ್ಕೆ ಲಾಡರು ತಮಗೆ ಇಷ್ಟಬಂದಲ್ಲಿ ಯಾರನ್ನಾದರೂ ದೇವಾಲಯದ ಮೇಲುಸ್ತುವಾರಿ ನೋಡಿಕೊಳ್ಳಲು ಒಂದು ನಿರ್ದಿಷ್ಟ ಸಮಯದವರೆಗೆ ನೇಮಕ ಮಾಡಬಹುದಷ್ಟೆ ಎಂದು ನ್ಯಾಯಾಲಯ ತೀರ್ಪು ನೀಡಿದೆ. ಇಂದಿಗೂ ಸಹ ನ್ಯಾಯಾಲಯದಲ್ಲಿ, ಜನಾಂಗದ ಎರಡೂ ಗುಂಪುಗಳು ದೇವಾಲಯದ ಆಡಳಿತ ಹಾಗೂ ಆಸ್ತಿಗಳ ಹಕ್ಕು ಸ್ಥಾಪಿಸಿ ಹೋರಾಡುತ್ತಿರುವುದನ್ನು ಕಾಣಬಹುದಾಗಿದೆ.



ಅಂಬಾ ಭವಾನಿ ದೇವಾಲಯ, ಶಿರಾ.

**ಕುಲದೇವತೆಯ ಐತಿಹ್ಯ:**

**ಲಾಡ ಕ್ಷತ್ರಿಯರ ಕುಲದೇವತೆ ಶ್ರೀ ಅಂಬಾಭವಾನಿಯ ದೇವಾಲಯ ನಿರ್ಮಾಣದ ಬಗ್ಗೆ ಒಂದು ಐತಿಹ್ಯ ಜನಜನಿತವಾಗಿದೆ.**

ಲಾಡರು ತಾವು ನೆಲೆಸಿದ್ದ ಶಿರಾದ ಲಾಡಪುರ ಹಟ್ಟಿನಲ್ಲಿ ತಮ್ಮ ಕುಲದೇವತೆ ಅಂಬಾಭವಾನೇಶ್ವರಿ ಅಮ್ಮನವರ ದೇವಾಲಯವೊಂದನ್ನು ನಿರ್ಮಿಸಿಕೊಳ್ಳಲು ನಿರ್ಧರಿಸಿ ಕೆಲಸ ಆರಂಭಿಸಿದರು. ಆದರೆ, ದೇವಸ್ಥಾನದ ಅಡಿಪಾಯದ ಕೆಲಸ ನಿರ್ಮಾಣ ಘಟ್ಟದಲ್ಲಿ ಅನೇಕ ಅಡ್ಡಿ ಆತಂಕಗಳು ಎದುರಾದವು. ಲಾಡರು ತಮ್ಮ ಜನಾಂಗದ ಮುಖಂಡನನ್ನು 'ಚೌಧುರಿ' ಎಂದು ಕರೆಯುತ್ತಿದ್ದರು. ಚೌಧುರಿಯು, ದೇವಾಲಯದ ಕಟ್ಟಡದ ಬಗ್ಗೆ ಎದುರಾದ ಸಮಸ್ಯೆಯಿಂದ ವಿಚಲಿತನಾದನು. ಹೀಗಿರಲು ಒಂದು ದಿನ ಮುಖಂಡನಿಗೆ ದೀರ್ಘ ನಿದ್ರೆಯಲ್ಲಿದ್ದಾಗ ಒಂದು ಸ್ವಪ್ನವಾಯಿತು. ಸ್ವಪ್ನದಲ್ಲಿ ಅಪೂರ್ವವಾಗಿ ಹೊಳೆಯುವ ದಿವ್ಯ ಶಕ್ತಿಯೊಂದು ಪ್ರಕಟವಾಗಿ, ಆ ಅಶರೀರವಾಣಿಯು ಕಟ್ಟಡದ ಕೆಲಸವು ಸುಸೂತ್ರವಾಗಿ ನಡೆಯಬೇಕಾದಲ್ಲಿ ಸರ್ವಾಂಗೀಣ ಸುಂದರಿಯಾದ ಚೊಚ್ಚಲು ಬಸುರಿಯೊಬ್ಬಳನ್ನು ಬಲಿ ಕೊಡಬೇಕೆಂದು, ಹಾಗಾದಲ್ಲಿ ಮಾತ್ರ ಕಟ್ಟಡ ಸ್ಥಿರವಾಗಿ ನಿಲ್ಲುವುದೆಂದು ಆದೇಶಿಸಿತು. ಮುಖಂಡನು ಎಲ್ಲಾ ಲಾಡ ರಾಹುತರನ್ನು ಕರೆಸಿ ತನ್ನ ಕನಸಿನ ವೃತ್ತಾಂತವನ್ನು ವಿವರಿಸಿ ಮುಂದಿನ ಕಾರ್ಯ ಸಾಧ್ಯತೆಗಳ ಬಗ್ಗೆ ಚರ್ಚಿಸಿದನು. ಕಡೆಗೆ, ಲಾಡರು ತಾವಿನ್ನೂ ಆ ಪ್ರದೇಶಕ್ಕೆ ಹೊಸಬರಾದ್ದರಿಂದಈ ಕಾರ್ಯಕ್ಕೆ ನುರಿತ ವ್ಯಕ್ತಿಗಳನ್ನು ನೇಮಿಸಿ ಅವರಿಗೆ ತಮ್ಮ ಅಗತ್ಯವನ್ನು ಮನಗಾಣಿಸಿದರು. ಇದರ ಮೇಲುಸ್ತುವಾರಿಗೆ ಮಂತ್ರವಾದಿಯೊಬ್ಬನನ್ನೂ ನೇಮಕ ಮಾಡಿದನು. ಈ ಕಸುಬುದಾರರು, ಹೆಂಗಸರು ಹೆಚ್ಚಾಗಿ ಓಡಾಡುವ ಸ್ಥಳಗಳನ್ನು ಪರಿಶೀಲಿಸಿ ಕಡೆಗೆ ಶಿರಾದ ಮುಖ್ಯ ಬಟ್ಟೆ ಶುಚಿ ಮಾಡಲು ಬಳಸುತ್ತಿದ್ದ 'ಜಾಜಿಕಟ್ಟೆ' ನೀರಿನ ಕೊಳದ ಬಳಿ ಬಚ್ಚಿಟ್ಟುಕೊಂಡು ದಿನವೂ ಎಚ್ಚರಿಕೆಯಿಂದ ಹೆಂಗಸರ ಚಲನವಲನಗಳನ್ನು ಗಮನಿಸತೊಡಗಿದರು.ಕಡೆಗೊಮ್ಮೆ ದಿನವೂ ಬಟ್ಟೆ ಒಗೆಯಲು ಸುರಸುಂದರಿ ಗರ್ಭಿಣಿ ಸ್ತ್ರೀಯೊಬ್ಬಳು ಬರುತ್ತಿದ್ದುದನ್ನು ಗಮನಿಸಿ. ಒಂದು ದಿನ ಮಟ ಮಟ ಮಧ್ಯಾಹ್ನ ಆಕೆ ಬಟ್ಟೆ ಒಗೆಯಲು ಒಬ್ಬಳೇ ಬಂದ ಸಂದರ್ಭದಲ್ಲಿ ಹೊಂಚುಹಾಕಿ, ಆಕೆಯ ಬಾಯಿಗೆ ಬಟ್ಟೆ ತುರುಕಿ ಲಾಡಪುರಕ್ಕೆ ತಂದು, ನಾಯಕನ ಅಪ್ಪಣೆಯಂತೆ ಆಕೆಯನ್ನು ಚಾಂಡಾಲನೊಬ್ಬನನ್ನು ಕರೆಸಿ ಪೂಜಾವಿಧಿಗಳನ್ನು ಮುಗಿಸಿದ ನಂತರ, ಕಟ್ಟಡದ ಅಡಿಪಾಯದ ಬಳಿ ಬಲಿಕೊಡಲಾಯಿತು.

ಅತ್ತಕಡೆ, ಅಪಹರಣಗೊಂಡ ಮಹಿಳೆಯ ಬಗ್ಗೆ ದಾರಿಹೋಕನೊಬ್ಬ ಅಕಸ್ಮಾತ್ತಾಗಿ ನೋಡಿದ್ದರಿಂದ, ಸಂಬಂಧಪಟ್ಟ ಆ ಜನಾಂಗದ ಜನರಿಗ ತಿಳಿಸಿದನು. ಈ ಮಾಹಿತಿಯಿಂದ ಕ್ರೋಧಗೊಂಡ ಆ ಜನಾಂಗದ ಜನರು ಗುಂಪಾಗಿ ಹೊರಟು, ಶಿರಾ ಪ್ರಾಂತ್ಯದ ಸುಬೇದಾರನಿಗೆ ಇದರ ಬಗ್ಗೆ ದೂರು ನೀಡಿದರು. ಅಧಿಕಾರಿಯು ಸರದಾರನೊಬ್ಬನನ್ನು

ಕೆಲವು ಸೈನಿಕರೊಂದಿಗೆ ಈ ಬಗ್ಗೆ ಕೂಲಂಕುಶವಾಗಿ ತಿಳಿದುಕೊಂಡು ವರದಿನೀಡಲು ಆದೇಶಿಸಿದನು. ತನಿಖೆ ಆರಂಭಿಸಿದ ಅಧಿಕಾರಿಯು, ಈ ಕೃತ್ಯ ಜರುಗಿದ ಲಾಡಪುರ ಪ್ರದೇಶ ಪತ್ತೆಹಚ್ಚಿ ಸೈನಿಕರೊಂದಿಗೆ ಆ ದಿಕ್ಕಿನಲ್ಲಿ ಹೊರಡಲಾರಂಭಿಸಿದ. ಈ ಸುದ್ದಿ ತಿಳಿದ ಲಾಡಮುಖಂಡ ಹಾಗೂ ರಾಹುತರು ಬಲಿ ನೀಡಿದ್ದ ಕಳೇಬರದ ಮೇಲ ವಸ್ತ್ರವೊಂದನ್ನು ಮುಚ್ಚಿ, ದೇವಿಯ ಧ್ಯಾನದಲ್ಲಿ ತಲ್ಲೀನರಾದರು. ಅಧಿಕಾರಿ ಹಾಗೂ ಸೈನಿಕರು ಲಾಡಪುರ ಪ್ರವೇಶ ಮಾಡಿ ತನಿಖೆ ಆರಂಭಿಸಿದರು. ಲಾಡರ ನಾಯಕ ಹಾಗೂ ಅನೇಕ ರಾಹುತರನ್ನು ವಿಚಾರಣೆಗೆ ಒಳಪಡಿಸಿ ವಿವರ ನೀಡಲು ಒತ್ತಾಯಿಸಿದರು. ಆದರೆ ಲಾಡ ನಾಯಕನು ತಾನೇನನ್ನೂ ಕಣ್ಣಾರೆ ಕಾಣಲಿಲ್ಲವೆಂದೂ ಪದ್ಧತಿಯ ಪ್ರಕಾರ ಅಂಬಾಭವಾನಿ ದೇವಿಗೆ ಗರ್ಭ ಧರಿಸಿದ್ದ ಹೆಣ್ಣು ಮೇಕೆಯೊಂದನ್ನು ಬಲಿ ನೀಡಿದ್ದಾಗಿ ಹೇಳಿಕೆ ನೀಡಿದನು. ಆದರೆ, ಆ ಹೆಂಗಸಿನ ಕಡೆಯವರು ತೃಪ್ತರಾಗದೆ, ಪ್ರದೇಶವನ್ನೆಲ್ಲಾ ಜಾಲಾಡಿದರು. ಸೈನಿಕರೂ ಅವರೊಡನೆ ಸಹಕರಿಸಿದರು. ಕಡೆಗೆ ರಕ್ತದ ಕಲೆಗಳು ತೊಟ್ಟಿಕ್ಕಿದ್ದ ಹಾದಿಗುಂಟ ಕ್ರಮಿಸಿ ಕಟ್ಟಡದ ಅಡಿಪಾಯದ ಬಳಿ ಬಲಿಪೀಠದ ಮೇಲೆ ರಕ್ತಸಿಕ್ತ ಬಟ್ಟೆ ಹೊದಿಸಿದ್ದನ್ನು ಕಂಡರು. ಸೈನಿಕರು ತನಿಖೆಗಾಗಿ ಅತ್ತ ಬಂದರು. ರಾಹುತರೆಲ್ಲ ಉಸಿರು ಬಿಗಿಹಿಡಿದು ದೇವಿಯನ್ನು ಧ್ಯಾನಿಸತೊಡಗಿದರು. ಲಾಡಚಾಧುರಿ ಭವಾನಿ ಮಾತೆಯನ್ನು ಸ್ಮರಿಸತೊಡಗಿದನು. ಕಡೆಗೆ ಸೈನಿಕರು ರಕ್ತಸಿಕ್ತ ಬಟ್ಟೆಯನ್ನು ಕಳೇಬರದ ಮೇಲಿಂದ ಸರಿಸಿದರು. ಅದರಡಿಯಿದ್ದ ಮೇಕೆಯ ಶರೀರ ಹಾಗೂ ರುಂಡ ಕಂಡುಬಂದವು. ಈ ವಿಸ್ಮಯದಿಂದ ಲಾಡರೆಲ್ಲ ಆಶ್ಚರ್ಯಚಕಿತರಾದರು. ಅಂಬಾಭವಾನಿ ದೇವಿಯ ಪವಾಡದಿಂದ ದೇವಿಗೆ ಭಯಭಕ್ತಿಯಿಂದ ಕೈಮುಗಿದು ಸ್ಮರಿಸಿದರು.

ತನಿಖೆಗಾಗಿ ಬಂದಿದ್ದ ಅಧಿಕಾರಿ ಹಾಗೂ ಸೈನಿಕರು ಬಂದ ದಾರಿಗೆ ಸುಂಕವಿಲ್ಲವೆಂದು ಹಿಂತಿರುಗಬೇಕಾಯಿತು. ಕಡೆಗೆ ಅಡೆತಡೆಯಿಲ್ಲದೆ ಅಂಬಾಭವಾನೇಶ್ವರಿ ದೇವಾಲಯದ ಕಟ್ಟಡ ಪೂರ್ಣಗೊಂಡು, ಸುಮಾರು ೧೭ನೇ ಶತಮಾನದಲ್ಲಿ ಪೂಜೆಗೆ ಅಣಿಯಾಯಿತು. ಇದರೊಟ್ಟಿಗೆ, ದೇವಾಲಯದ ದಕ್ಷಿಣಕ್ಕೆ ಹನುಮಂತ ದೇವರ ಗುಡಿಯೂ ನಿರ್ಮಾಣಗೊಂಡಿತು. ಇತ್ತೀಚೆಗೆ ಲಾಡಪುರ ಪ್ರದೇಶದಲ್ಲಿ, ಮೈಸೂರಿನ ಹಳ್ಳದಕೇರಿ ನಾಗರಾಜಪ್ಪನವರಿಗೆ ಸೇರಿದ ಯಲ್ಲಮ್ಮ–ರೇಣುಕಾಮಾತೆ ದೇವಾಲಯ ಪ್ರದೇಶವೊಂದು ಗುರ್ತಿಸಿ, ವಶಕ್ಕೆ ತೆಗೆದುಕೊಳ್ಳಲಾಗಿದೆ. ಪರಂಪರಾನುಗತವಾಗಿ ಲಾಡಪುರದ ಅಂಬಾಭವಾನಿ ದೇವಾಲಯದಲ್ಲಿ ನಿರಂತರ ಪೂಜಾ ಕೈಂಕರ್ಯಗಳು ನಡೆಯುತ್ತಲೇ ಬರುತ್ತಿವೆ. ನವರಾತ್ರಿಯಲ್ಲಿ ಹೋಮ–ಹವನಗಳು ಶಮೀ ಪೂಜೆ, ಕಾರ್ತಿಕಮಾಸದಲ್ಲಿ ವಿಶೇಷ ಪೂಜೆಗಳು ಹಾಗೂ ಜನವರಿ–ಫೆಬ್ರವರಿ ತಿಂಗಳಲ್ಲಿ ಅಂಬಾಭವಾನೇಶ್ವರಿಯ ಉತ್ಸವಾದಿಗಳು ಜರಗುತ್ತವೆ. ಕುಲಬಾಂಧವರೆಲ್ಲ ಸೇರಿ ವರ್ಷವಿಡೀ ಅನೇಕ ಪೂಜಾವಿಧಿಗಳನ್ನು ಆಚರಿಸುತ್ತಾರೆ.

**ಪ್ರಾಣಿಬಲಿ :**

ಶೂನ್ಯಮಾಸ ಅಥವಾ ಆಶಾಢ ಮಾಸಗಳಲ್ಲಿ ಲಾಡ ಕ್ಷತ್ರಿಯರು ದೇವೀ ಪೂಜೆಯ ಧಾರ್ಮಿಕ ಆಚರಣೆ ನಡೆಸುತ್ತಾರೆ. ತಾವು ನಂಬಿದ ದೈವ 'ಭವಾನೆಮ್ಮ' ನಿಗೆ ಸೇವೆ ಸಲ್ಲಿಸುವುದು ಪದ್ಧತಿ. ಈಕೆಯನ್ನು 'ಮರಿಗೆಮ್ಮ', 'ತಾಯಿ' 'ಅಮ್ಮ' ಎಂದು ಕ್ಷತ್ರಿಯ ಲಾಡರಲ್ಲಿ ಇತರೆ ಜನಾಂಗದಲ್ಲಿರುವಂತೆ ಪ್ರಾಣಿ ಬಲಿ ಪದ್ಧತಿ ಇದೆ. ಶೂನ್ಯ ಮಾಸದಲ್ಲಿ ಜನಾಂಗದ ಎಲ್ಲರೂ ನದೀ ತೀರ ಅಥವಾ ಯಾವುದಾದರೂ ತೋಟದ ಜಮೀನಿನ ಭಾಗದಲ್ಲಿ ಚಪ್ಪರ ಹಾಕಿ ಮಣ್ಣಿನಿಂದ ದೇವಿಯ ವಿಗ್ರಹದ ಪ್ರತಿಮೆ ರೂಪ ಮಾಡಿ ಅದನ್ನುಪೂಜಿಸಿ, ಈ ವಿಶೇಷ ಸಮಾರಂಭಕ್ಕಾಗಿಯೇ ತಂದಿರತಕ್ಕ ಆಡು, ಮೇಕೆ ಅಥವಾ ಕುರಿಗಳನ್ನು ಬಲಿ ನೀಡಿ, ಆ ಆಚರಣೆಯ ನಂತರ ಮಾಂಸದ ಅಡಿಗೆ, ಸಸ್ಯಾಹಾರದ ಅಡಿಗೆ ಹಾಗೂ ಅನೇಕ ಭಕ್ಷ್ಯಗಳನ್ನು ತಯಾರಿಸಿ, ದೇವಿಗೆ ನೈವೇದ್ಯ ಮಾಡಿ, ನಂತರ ಸಾಮೂಹಿಕ ಭೋಜನ ಮಾಡುತ್ತಾರೆ. ಸಂಜೆಯವರೆಗೂ, ಬಂಧುಮಿತ್ರರೆಲ್ಲ ಸಂತೋಷದಿಂದ ಕಾಲಕಳೆದು ನಂತರ ವಿಗ್ರಹವನ್ನು ನೀರಿನಲ್ಲಿ ವಿಸರ್ಜಿಸಿ, ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ. ಬೆಂಗಳೂರು, ಬೆಲಗೂರು, ಎನ್.ಆರ್. ಪುರದ ಕ್ಷತ್ರಿಯ ಲಾಡರೂ ಸಹ ಈ ಆಚರಣೆಯನ್ನು ನಡೆಸಿಕೊಂಡು ಬಂದಿದ್ದಾರೆ. ಸೌಧಾಘರ್ ಕ್ಷತ್ರಿಯ ಲಾಡರು ಈ ಸಮಾರಂಭವನ್ನು 'ಮರಿಗೆಮ್ಮ' ಆಚರಿಸುವುದು ಎನ್ನುತ್ತಾರೆ. ಬೆಂಗಳೂರು, ಬೆಲಗೂರಿನ ಲಾಡರು ಈ ಆಚರಣೆಯನ್ನು ''ಭವಾನೆಮ್ಮ'' ಆಚರಿಸುವುದು ಎಂದು ಕರೆಯುತ್ತಾರೆ. ಲಾಡದೇಶದಿಂದ ಬರಗಾಲ, ಕ್ಷಾಮಗಳ್ನು ಎದುರಿಸಲಾಗದೆ ವಲಸೆ ಬಂದ ಲಾಡರಿಗೆ ಮುಂದೆ ಅಂತಹ ದಿನಗಳು ಬಾರದಂತೆ ಅಂಬಾಭವಾನೇಶ್ವರಿ ಶಕ್ತಿಮಾತೆಗೆ ಇಂತಹ ಬಲಿ ಆಚರಣೆಗಳಿಂದ ಮನಪ್ರಸ್ನನಗೊಳಿಸಲು ಈ ಆಚರಣೆಯನ್ನು ಇಟ್ಟುಕೊಂಡಿದ್ದರು.



ಲಕ್ಷ್ಮೀನೃಸಿಂಹ ಹಾಗೂ ಮೈಲಾರ ಲಿಂಗ (ತುಳಜಾಪುರ)

ಲಾಡ ಕ್ಷತ್ರಿಯ ಜನಾಂಗದವರು ಕರ್ನಾಟಕ ಹಾಗೂ ಮಹಾರಾಷ್ಟ್ರ ರಾಜ್ಯಗಳಲ್ಲಿ ನೆಲೆಸಿದ್ದಾರೆ. ಇವರುಗಳು ತಾವು ವಾಸಿಸುವ ಪ್ರದೇಶಗಳಿಗನುಗುಣವಾಗಿ ತಮ್ಮ ಸಂಪ್ರದಾಯಗಳಲ್ಲಿ ಅನೇಕ ಬದಲಾವಣೆಗಳು, ಸೇರ್ಪಡೆಗಳನ್ನು ಮಾಡಿಕೊಂಡಿದ್ದಾರೆ. ಮಹಾರಾಷ್ಟ್ರದಲ್ಲಿನ ಕ್ಷತ್ರಿಯಲಾಡರು ಖರಸುಂಡಿ ಸಿದ್ಧನಾಥ್, ಖಂಡೋಬಾ ಹಾಗೂ ರೇಣುಕಾದೇವಿಯನ್ನು ಪೂಜಿಸುತ್ತಾರೆ. ಇವರೆಲ್ಲರ ಕುಲದೇವತೆ ತುಳಜಾಪುರದ ತುಳಜಾಭವಾನಿ ಮಾತೆ ವಿದರ್ಭದ ಬ್ರಾಹ್ಮಣ ಲಾಡರು ಸಹ ಮಾಹುರ್‌ಘಡದಲ್ಲಿರುವ ರೇಣುಕಮಾತೆಯ ಭಕ್ತರು. ಕಾಕತಾಳೀಯವೆಂಬಂತೆ ತುಳಜಾಪುರದ ಭವಾನೀದೇವಾಲಯದ ಆವರಣದಲ್ಲಿರುವ ಶ್ರೀ ದತ್ತಾತ್ರೇಯಸ್ವಾಮಿ, ಮೈಲಾರಲಿಂಗೇಶ್ವರ, ಲಕ್ಷ್ಮೀನರಸಿಂಹ, ಶಿವ ಹಾಗೂ ಶ್ರೀನಿವಾಸ ದೇವರುಗಳು ಒಂದಲ್ಲ ಒಂದು, ಸೌಧಾಘರ್ ಕ್ಷತ್ರಿಯ ಲಾಡರ ಮನೆದೇವರುಗಳಾಗಿವೆ. ವಿಶೇಷವಾಗಿ, ವಶಿಷ್ಠ ಗೋತ್ರದವರೆಲ್ಲರ ಮನೆ ದೇವರು ಮಹಾವಿಷ್ಣು, ತಿರುಪತಿ ಶ್ರೀನಿವಾಸ, ಸೀಬಿ ಲಕ್ಷ್ಮೀನರಸಿಂಹಸ್ವಾಮಿ ರೂಪದಲ್ಲಿ ಪೂಜಿಸಲ್ಪಡುತ್ತಿದ್ದರೆ, ಇನ್ನೂ ಕೆಲವು ಮನೆತನದವರು ನಂಜನಗೂಡಿನ ನಂಜುಂಡೇಶ್ವರ, ಮೈಲಾರಲಿಂಗೇಶ್ವರರ ಭಕ್ತರಾಗಿದ್ದಾರೆ. ಮತ್ತೆ ಕೆಲವು ಮನೆತನಗಳು ಶಿರಾದ ಕೋಡಿಹಳ್ಳಿ ಅಮ್ಮನ ಭಕ್ತರಾಗಿ, ಚೌಲೋಪನಯನದ ಸಂದರ್ಭದಲ್ಲಿ ಆ ದೇವತೆಗೆ ಪ್ರಾಣಿ ಬಲಿ ಅರ್ಪಿಸಿ ಮಾಂಸದೂಟದ ಅಡಿಗೆ ಬಡಿಸುತ್ತಾರೆ. ಇದಲ್ಲದೆ ತುಮಕೂರಿನ ಕುರಂಕೋಟೆಯ ಕೊಡಲಿಮನೆತನದವರು ಅಲ್ಲಿ ಸಿದ್ಧರಬೆಟ್ಟದ ಸಿದ್ದೇಶ್ವರ ಹಾಗೂ ಕುರಂಕೋಟೆಯ ಆಂಜನೇಯ ದೊಡ್ಡಕಾಯಪ್ಪನ ಭಕ್ತರಾಗಿದ್ದಾರೆ. ಎಲ್ಲ ಲಾಡರೂ ಸವದತ್ತಿ ಎಲ್ಲಮ್ಮ ರೇಣುಕಾ ಮಾತೆಯ ಸೇವೆಗೆ ಅಣಿಯಾಗುತ್ತಾರೆ. ಮೈಲಾರ ಲಿಂಗೇಶ್ವರ ಒಕ್ಕಲಿನವರು ಲಾಡರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರ.ಅವರಲ್ಲಿ ಹೆಚ್ಚಿನವರು ಬೆಳಗಾಂ, ಧಾರವಾಡ, ಹುಬ್ಬಳ್ಳಿ, ಬಿಜಾಪುರ, ಸೊಲ್ಲಾಪುರ ಹಾಗೂ ಮಹಾರಾಷ್ಟ್ರದ ಅನೇಕ ಕಡೆ ನೆಲೆಸಿದ್ದಾರೆ.

## ಮೈಲಾರ ಲಿಂಗನ ಒಕ್ಕಲು :

ಅಸಂಖ್ಯಾತ ಉಪಸಂಸ್ಕೃತಿಗಳಲ್ಲಿ ಮೈಲಾರ ಲಿಂಗನ ಒಕ್ಕಲೂ ಒಂದು. 'ಮಲೆ' ಎಂದರೆ ಬೆಟ್ಟ, ಗುಡ್ಡ ಎಂದರ್ಥ. ಮಲೆಯ ಅಯ್ಯ–ಮಲ್ಲಯ್ಯನಾದನು. ಮಲೆಯರ ಅರಸ–'ಮಲೆಯರ' – ಮಯಲಾರ – 'ಮೈಲಾರ' ವಾಗಿ ನಿಷ್ಪನ್ನಗೊಂಡು 'ಮೈಲಾರ ಲಿಂಗ'ವೆನಿಸಿದ. ಪರಶಿವನು ರಾಕ್ಷಸರ ಸಂಹಾರಕ್ಕಾಗಿ ಭೂಲೋಕಕ್ಕೆ ಬಂದಾಗ ಗೊರವಯ್ಯನ ವೇಶ ಧರಿಸಿ ಬಂದವನಾದುದರಿಂದ ಗೊರವಯ್ಯನ ಉಡುಗೆ–ತೊಡುಗೆಗಳು ಈ ಸಂಸ್ಕೃತಿಯ ಬಿರುದು ಬಾವಲಿಗಳಾದರು. ಗೊರವರ ಆರಾಧ್ಯ ದೈವನಾದ ಮೈಲಾರಲಿಂಗ ಬೆಟ್ಟದ ದೇವರು. ಬೇಟೆ ಸಂಸ್ಕೃತಿಗೆ ಸೇರಿದ್ದರಿಂದ ನಾಯಿ ಅವನ ಲಾಂಛನವಾಗಿ ಪರಿಣಮಿಸಿತು. ಕುದುರೆ ವಾಹನವಾಯಿತು. ಆದ್ದರಿಂದ, ಮೈಲಾರ ಲಿಂಗನನ್ನು '**ಮಾರ್ತಾಂಡ ಭೈರವ**' ಎಂದೂ ಕರೆಯುತ್ತಾರೆ.

ಮಹಾರಾಷ್ಟ್ರದಲ್ಲಿ ಮೈಲಾರಲಿಂಗನನ್ನು 'ಖಂಡೋಬಾ' ಎಂದು ಕರೆಯುತ್ತಾರೆ. 'ಖಾಂಡ' ಎಂದರೆ ಖಡ್ಗ ಖಡ್ಗ ಹಿಡಿದ ದೇವರು ''ಖಾಂಡೋಬಾ''– ಮಹಾರಾಷ್ಟ್ರದ ಹಲವೆಡೆ ಖಂಡೋಬಾನ ದೇವಾಲಯಗಳಿವೆ. ಜೆಜೂರಿಯಲ್ಲಿರುವ ಖಂಡೋಬಾ ದೇವಸ್ಥಾನ ಅತ್ಯಂತ ಪ್ರಸಿದ್ಧವಾದದ್ದು. ರವಿವಾರ ಮೈಲಾರಲಿಂಗನ ವಾರವಾಗಿದೆ. ಮೈಲಾರಲಿಂಗನ ಪತ್ನಿಯರು –ಗಂಗೆಮಾಳಮ್ಮ ಕುರುಬರಮಾಳಮ್ಮ ಮತ್ತು ಅವನ ಮಕ್ಕಳಿಬ್ಬರು ಚಿಕ್ಕಯ್ಯ ಹಾಗೂ ಜುಂಜಯ್ಯ ಗೊರವರು ತಮ್ಮ ಆರಾಧ್ಯ ದೈವ ಮೈಲಾರಲಿಂಗನನ್ನು 'ಏಳು ಕೋಟಿ' ಎಂದು ಪದೇ ಪದೇ ಉಚ್ಚರಿಸುತ್ತಾರೆ. ಇದಕ್ಕೊಂದು ಜಾನಪದ ಐತಿಹ್ಯವಿದೆ. ಇದರ ಪ್ರಕಾರ – ತಿರುಪತಿ ತಿಮ್ಮಪ್ಪ ತನ್ನ ತಂಗಿ ಗಂಗೆಮಾಳಮ್ಮನನ್ನು ಮೈಲಾರಲಿಂಗನಿಗೆ ಲಗ್ನ ಮಾಡಿಕೊಡಬೇಕಾಯಿತು. ಆಗ ಏಳುಕೋಟಿ ಹೊನ್ನಿನ ಕನ್ಯಾ ತೆರ ಕೊಡಬೇಕೆಂದು ಶ್ರೀನಿವಾಸ ಸ್ವಾಮಿ ಒತ್ತಾಯ ಮಾಡುತ್ತಾನೆ. ಮೈಲಾರಲಿಂಗ ಹಣ ನೀಡುವುದಾಗಿ ಹೇಳಿ ಕೊಡದೆ ಸಬೂಬು ಹೇಳಿ ತೆರೆ ತಪ್ಪಿಸಿಕೊಳ್ಳುತ್ತಾನೆ. ಹಾಗೂ ಗಂಗೆ ಮಾಳಮ್ಮನನ್ನು ಲಗ್ನವಾಗಿ ಕರೆತರುತ್ತಾನೆ. ಇದರಿಂದ ಕೋಪಗೊಂಡ ತಿರುಪತಿ ತಿಮ್ಮಪ್ಪ , ''ನನಗೆ ಕೊಡಬೇಕಾದ ಏಳುಕೋಟಿ ಹೊನ್ನನ್ನು ಮುಳುಗಿಸಿದ ನೀನು 'ಏಳು ಕೋಟಿ–ಏಳುಕೋಟಿ' ಎಂದು ಸಾರುತ್ತಾ ಭಿಕ್ಷೆ ಬೇಡು ಎಂದು ಶಪಿಸುತ್ತಾನೆ. ಈ ಶಾಪದ ಫಲವಾಗಿ ಮೈಲಾರ ಲಿಂಗನ ಭಕ್ತರು ಇಂದಿಗೂ 'ಏಳು ಕೋಟಿ' ಎಂದು ಸಾರುತ್ತಾ ಮೈಲಾರನ ಸೇವೆ ಮಾಡುತ್ತಾರೆ.

ಸವದತ್ತಿಯ ಎಲ್ಲಮ್ಮ ಮತ್ತು ಮೈಲಾರಲಿಂಗ ಇಬ್ಬರು ಅಣ್ಣ–ತಂಗಿಯರು ಎಲ್ಲಮ್ಮನು ಗಂಡನ ಮನೆಗೆ ಹೋಗುವವ ನನ್ನಣ್ಣ ನನ್ನನ್ನು ಮರೆಯದಿರಲಿ. ಆಗಾಗ್ಗೆ ನನ್ನಲ್ಲಿಗೆ ಬರುತ್ತಿರಲಿ ಎಂದು ಬಗೆದು ಅಣ್ಣನ ಮನೆಯಿಂದ ಅರಿಸಿನದ ಬಂಡಾರವನ್ನು ಕದ್ದು ತಂದಳಂತೆ! ಇದನ್ನರಿತ ಮೈಲಾರಲಿಂಗ ತಂಗಿಯ ಮನೆಯಿಂದ ಕವಡೆಯನ್ನು ಕದ್ದುತಂದನಂತೆ. ಆದ್ದರಿಂದ, ಇಂದಿಗೂ ಗೊರವರು ಎಲ್ಲಮ್ಮದೇವಿಯ ಸಂಕೇತವಾಗಿ ಕವಡೆಯನ್ನು, ಜೋಗಿಗಳು ಮೈಲಾರಂಗನ ಸಂಕೇತವಾಗಿ ಅರಸಿನದ ಭಂಡಾರವನ್ನು ಧರಿಸುತ್ತಾರೆ.

ಈ ಮೇಲ್ಕಂಡ ಧಾರ್ಮಿಕ ಆಚರಣೆಗಳನ್ನು ಗಮನಿಸಿದಾಗ ಲಾಡರಲ್ಲಿ ಪೂಜಿಸಲು ಮೂರು ದೈವಗಳಿರುವುದನ್ನು ನೋಡಬಹುದು. (೧) ಒಂದು–ವೈಯಕ್ತಿಕ ಮಟ್ಟದ ಆರಾಧನೆಗೆ ಸಂಬಂಧಪಟ್ಟ ಮನೆಯ ದೈವ. (೨) ಎರಡನೆಯದು – ಇಡಿಯ ಜನಾಂಗಕ್ಕೆ ಸಂಬಂಧಪಟ್ಟದ್ದು ಹಾಗೂ (೩) ಮೂರನೆಯದು– ಸಾಮಾಜಿಕ ಆರಾಧನೆಯ ದೇವತೆ.

ಮೊದಲನೆಯ ವೈಯಕ್ತಿಕ ಮಟ್ಟದ ಮನೆ ದೇವರುಗಳಲ್ಲಿ – ಮೈಲಾರಂಲಿಂಗೇಶ್ವರ, ಸೀಬಿಯ ಲಕ್ಷ್ಮೀನರಸಿಂಹಸ್ವಾಮಿ, ತಿರುಪತಿ ಶ್ರೀನಿವಾಸ, ನಂಜನಗೂಡಿನ ನಂಜುಂಡೇಶ್ವರ ಎರಡನೆಯದಾಗಿ ಇಡೀ ಲಾಡ ಕುಲಕ್ಕೆ ಅಧಿದೇವತೆ – ಶ್ರೀ ಅಂಬಾಭವಾನೇಶ್ವರಿ ಮಾತೆ. ಮೂರನೆಯದಾಗಿ ಅಲ್ಲಲ್ಲಿ ಸ್ಥಳೀಯವಾಗಿ ರೂಢಿಸಿಕೊಂಡ

ದೇವೀ ಆರಾಧನೆಯಲ್ಲಿ – ಕೋಡಿಹಳ್ಳಿ ಅಮ್ಮನ ಸೇವೆ, ಸವದತ್ತಿ ಎಲ್ಲಮ್ಮ – ರೇಣುಕಾದೇವಿಗೆ ನಡೆದುಕೊಳ್ಳುವುದು, ಕೊರಟಗೆರೆ ತಾಲ್ಲೂಕಿನ ಕುರಂಕೋಟೆಯ ಸಿದ್ದರಬೆಟ್ಟದ ಸಿದ್ದೇಶ್ವರ ಸ್ವಾಮಿ ಹಾಗೂ ಆಂಜನೇಯಸ್ವಾಮಿ ದೊಡ್ಡಕಾಯಪ್ಪನ ಸೇವೆ ಮುಖ್ಯವಾದವು.

ಲಾಡರಲ್ಲಿ ಶೈವ ಮತ್ತು ವೈಷ್ಣವ ಆಚಾರಗಳನ್ನು ಪಾಲಿಸುವವರಿದ್ದಾರೆ. ಶೈವಾಚಾರವನ್ನು ಪಾಲಿಸುವವರು ಗೊರವಯ್ಯಗಳು ಹಾಗೂ ದಾಸಯ್ಯಗಳಿಬ್ಬರಿಗೂ ದಾನಧರ್ಮ ಮಾಡುತ್ತಾರೆ. ಹಾಗೂ ವಿವಾಹ ಮತ್ತು ಮಂಗಳ ಸಂದರ್ಭಗಳಲ್ಲಿ ಅವರನ್ನು ಕರೆಸಿ ಕುಲದೈವದ, ಮನೆದೇವರ ಪೂಜೆ ಮಾಡಿಸಿ ಅವರಿಗೆ ಭೋಜನ ಮಾಡಿಸಿ, ದಾನ–ದಕ್ಷಿಣೆ, ತಾಂಬೂಲಗಳನ್ನಿತ್ತು ಸತ್ಕರಿಸುತ್ತಾರೆ. ವೈಷ್ಣವ ಆಚಾರ ಪಾಲಿಸುವವರು ತಿರುಪತಿಯಿಂದ 'ಚಕ್ರಾಂತಿಕ' ವನ್ನು ಪಡೆದಿದ್ದು ಶ್ರಾವಣ ಮಾಸದಲ್ಲಿ ಶನಿವಾರಗಳಂದು 'ಉಲಾಯಿ' ಎತ್ತಲು ಮನೆಮನೆಗೆ ಹೋಗಿ ಭಿಕ್ಷೆ ಪಡೆದು ತಂದು ಅದನ್ನು ತಿರುಪತಿಗೆ ಒಯ್ದೊ ಅಥವಾ ದಾಸಯ್ಯನಿಗೆ ದಾನ ಮಾಡುತ್ತಾರೆ. ಆದರೆ, ಇತ್ತೀಚಿನ ದಿನಗಳಲ್ಲಿ ಈ ಪದ್ಧತಿ ನಶಿಸುತ್ತಿರುವುದನ್ನು ಕಾಣಬಹುದು.

ಎಲ್ಲಾ ಹಿಂದೂ ಜನಾಂಗಗಳಲ್ಲಿರುವಂತೆ ಕ್ಷತ್ರಿಯ ಲಾಡರಲ್ಲಿಯೂ ಸಹ ಅನೇಕ ಹಬ್ಬ ಹರಿದಿನಗಳ ಆಚರಣೆ ಬಳಕೆಯಲ್ಲಿವೆ. ಇವುಗಳಲ್ಲಿ ಸಂಕ್ರಾಂತಿ, ಯುಗಾದಿ, ಹೋಳಿ, ರಾಮನವಮಿ, ಕೃಷ್ಣ ಜನ್ಮಾಷ್ಟಮಿ, ನವರಾತ್ರಿ, ದೀಪಾವಳಿ ಆಚರಿಸುತ್ತಾರೆ. ಅಲ್ಲದೆ ವಿನಾಯಕ ಚತುರ್ಥಿ, ಶಿವರಾತ್ರಿ, ವೈಕುಂಠ ಏಕಾದಶಿ, ಉಥ್ಥಾನ ದ್ವಾದಶಿ ಇನ್ನಿತರ ಹಬ್ಬಗಳನ್ನೂ ಸಹ ಆಚರಿಸುತ್ತಾರೆ. ಇವುಗಳ ಬಗ್ಗೆ ಹಾಗೂ ವಿವಾಹ ಚೌಲೋಪನಯನ, ಹುಟ್ಟು–ಸಾವು ಇವುಗಳ ಬಗ್ಗೆ ಪುಟ ೪೪ ರಿಂದ ೫೦ರಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಲಾಡರು ತಾವು ನೆಲೆಸಿದ್ದ ಸ್ಥಳಗಳಲ್ಲಿ ತಮ್ಮ ಸಂಸ್ಕೃತಿಯ ಛಾಪು ಮೂಡಿಸಿ ತಮ್ಮ ಕುರುಹುಗಳನ್ನು ಬಿಟ್ಟು ಹೋಗಿರುವುದನ್ನು ಸ್ಪಷ್ಟವಾಗಿ ಅನೇಕ ಕಡೆ ಕಾಣಬಹುದು. ಪ್ರಮುಖವಾಗಿ ಅತಿ ಪ್ರಾಚೀನ ಕಾಲದಿಂದಲೂ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ಲಾಠ ಸಾಮ್ರಾಜ್ಯಗಳು ವಿಶಾಲ ಭಾರತದ ನಾಲ್ಕೂ ಮೂಲೆಗಳಲ್ಲಿ ಸ್ಥಾಪಿಸಲ್ಪಟ್ಟಿದ್ದವೆಂದು ತಿಳಿಯಲಾಗಿದೆ. ಅವುಗಳಲ್ಲಿ ದಕ್ಷಿಣ ಗುಜರಾತ್–ಅತಿ ಪ್ರಾಚೀನ ಕಾಲದಿಂದಲೂ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ಲಾಠ ಸಾಮ್ರಾಜ್ಯಗಳು ವಿಶಾಲ ಭಾರತದ ನಾಲ್ಕೂ ಮೂಲೆಗಳಲ್ಲಿ ಸ್ಥಾಪಿಸಲ್ಪಟ್ಟಿದ್ದವೆಂದು ತಿಳಿಯಲಾಗಿದೆ. ಅವುಗಳಲ್ಲಿ ದಕ್ಷಿಣ ಗುಜರಾತ್–ಅತಿ ಪ್ರಾಚೀನ ಕಾಲದಿಂದಲೂ 'ಲಾಠದೇಶ'ವೆಂದು ಉಲ್ಲೇಖಿಸಲ್ಪಟ್ಟಿದೆ (ಪುಟ ೨–೯) ಕಛ್ಛದಿಂದ, ಈಗಿನ ಪಾಕಿಸ್ತಾನದ 'ಲಾಡಖಾನಾ'–ವರೆಗೆ ಸಿಂಧಿ–ಲೋಹಾಣಾ–ಲಾಡರ ಆಳ್ವಿಕೆಯಲ್ಲಿದ್ದಿತು. ಉತ್ತರದಲ್ಲಿ ರಾಜಪುಟಾಣದ ಬುಂದಿ ಕೋಟಾ ಪ್ರದೇಶಗಳು 'ಲಾಠ ಸಂಸ್ಥಾನ' ಎಂದು ಪ್ರಸಿದ್ಧಿ ಪಡೆದು, ಲಾಡರಜಪೂತರ ನೆಲೆಯಾಗಿದ್ದಿತು. ಮಧ್ಯಪ್ರದೇಶದ ಬಹ್ರಾನ್‌ಪುರ್ ಪಟ್ಟಣವನ್ನು ಕೇಂದ್ರವಾಗುಳ್ಳ

ವೈಷ್ಣವ ಲಾಡರ ಪ್ರಮುಖ ವಾಣಿಜ್ಯ ಕೇಂದ್ರವೆನಿಸಿತ್ತು. ಈಗಿನ ಲಾತೂರ್ (ಲಾಟಲೂರು) ಪ್ರದೇಶದಿಂದ ಅಮರಾವತಿ, ಅಚಲಪುರ, ಪೈಠಣ (ಪ್ರತಿಷ್ಠಾನ) ಗಳನ್ನೊಳಗೊಂಡ ಲಟ್ಟಲೂರು ಪ್ರಾಂತವೂ, ಲಾಡರ ವ್ಯಾಪಾರ ವಹಿವಾಟುಗಳ ಕೇಂದ್ರವಾಗಿದ್ದವು. ಬಂಗಾಳದ ಪ್ರಾಂತ್ಯಗಳಲ್ಲೂ ಲಾಡ ಅಥವಾ 'ರಾಢಾ' ಎಂಬ ಉಲ್ಲೇಖವುಳ್ಳ ಲಾಡರ ವಾಣಿಜ್ಯ ಚಟುವಟಿಕೆಗಳು ಪ್ರಸಿದ್ಧವಾದವು.

**ಲಾಡ ಹೆಸರಿನ ತಾಣಗಳು:**

ಇಂದಿಗೂ ಸಹ 'ಲಾಡ' ಹೆಸರಿನ ಅನೇಕ ಪಟ್ಟಣ, ಪ್ರದೇಶಗಳು ಪ್ರಸಿದ್ಧಿ ಪಡೆದಿವೆ. ಗುಜರಾತಿನ ಅಹಮದಾಬಾದ್‌ನಲ್ಲಿರುವ 'ಲಾಡ ಸೊಸೈಟಿ' ಲಾಡ ಸಮಾಜ ಬಹು ಪ್ರಖ್ಯಾತ ಪ್ರದೇಶಗಳಾಗಿವೆ.ಗುಜರಾತಿನ 'ಪೇಟ್ ಲಾಡ್; ಮತ್ತು ಲಾಜೀಗಂಜ್ ಹಾಗೂ ಚಾರಾಸಿ ತಾಲ್ಲೂಕು ಲಾಡ ಸಂಸ್ಕೃತಿಯ ತೊಟ್ಟಿಲುಗಳನ್ನೆಬಹುದು. ಮಹಾರಾಷ್ಟ್ರದಲ್ಲಿನ ಲಾಡೇಗಾಂವ್ ಮತ್ತು ಲಾಡ್ ಕಾರಂಜಾ ಲಾಡರ ಪ್ರಾಚೀನ ಕೇಂದ್ರಗಳೆನಿಸಿವೆ. ಜೈನ ಲಾಡರು ವಾಸವಿರುವ ಅಮರಾವತಿ, ಕಾರಂಜಾ, ಉಜ್ಜಯಿನಿ ಮತ್ತೆಲ್ಲ ಕಡ 'ಲಾಡಪುರಿ'ಗಳೆಂಬ ಪ್ರದೇಶಗಳನ್ನು ಕಾಣಬಹುದು. ಮಹಾರಾಷ್ಟ್ರದ ಬೀಡ್ ಜಿಲ್ಲೆಯ ಘೆವ್ರಾಯ್ ಪಟ್ಟಣದಲ್ಲಿ 'ಲಾಡಗಲ್ಲಿ' ಎಂಬ ಪ್ರದೇಶ ಲಾಡಕುಟುಂಬಗಳಿಂದ ಜನಜನಿತವಾಗಿದೆ. ಶಿರಾ ಪಟ್ಟಣದ ಲಾಡಪುರಹಟ್ಟಿ ಲಾಡರ ಸಂಸಾರಗಳು ಹಾಗೂ ಭವಾನಿ ಮಾತೆಯ ದೇವಾಲಯ ಪ್ರದೇಶದಿಂದ ಖ್ಯಾತಿ ಹೊಂದಿದೆ. ಕಡೂರಿನ ಬಳಿ ಇರುವ ಹುಲಿಕೆರೆಯಲ್ಲಿ ೧೯೭೧ರಲ್ಲಿ ಭವಾನಿಮಾತೆಯ ದೇವಾಲಯವನ್ನು ಅಲ್ಲಿನ ಲಾಡಜನಾಂಗದವರು ನಿರ್ಮಾಣ ಮಾಡಿದ್ದಾರೆ. ಇತ್ತೀಚೆಗೆ ಅದರ ೩೮ನೇ ವರ್ಷದ ಆಚರಣೆ ಹೋಮ-ಹವನಗಳೊಂದಿಗೆ ವಿಜೃಂಭಣೆಯಿಂದ ಜರುಗಿತು.

ಆಂಧ್ರಪ್ರದೇಶದ ಚಾರ್‌ಮಿನಾರ್ ಪ್ರದೇಶದಲ್ಲಿ ವ್ಯಾಪಕವಾದ ವ್ಯಾಪಾರೀ ನೆಲೆಗಳ ಪೇಟೆಬೀದಿ **'ಲಾಟ ಬಜಾರ್'** ಪ್ರಮುಖ ವಾಣಿಜ್ಯ ಕೇಂದ್ರವಾಗಿದೆ. ಮುಂಬೈನ ಸೆಂಟ್ರಲ್‌ನಲ್ಲಿ **'ಲಾಡ್ ದಿವಾಲಿ'** ಎಂಬ ಲಾಡರ ಕೇರಿ ಇದೆ. ಇದು ಆಭರಣಗಳ ಪ್ರಸಿದ್ಧ ಮಾರುಕಟ್ಟೆ ಸ್ಥಳವಾಗಿದೆ. ಇಲ್ಲಿ ಗುಜರಾತ್-ರಾಜಸ್ಥಾನ್‌ನ ಜೈನ-ವೈಷ್ಣವ ಲಾಡರದೇ ಸ್ವರ್ಣ, ವಜ್ರಾಭರಣಗಳ ವಹಿವಾಟಿನ ಹತೋಟಿಯ ಸ್ಥಳವಾಗಿದೆ. ಇಲ್ಲಿ ಸಮಸ್ತ 'ಲಾಡ ಪತ್ರಿಕಾ' ಎಂಬ ನಿಯತಕಾಲಿಕ ಪತ್ರಿಕೆ ಒಂದು ನೂರು ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಪ್ರಕಟವಾಗುತ್ತಿದೆ. ಕೊಲ್ಹಾಪುರದ ಮಾರ್ಕೆಟ್ ಯಾರ್ಡ್ ಬಳಿ **ಲಾಡ್‌ಚೌಕ್** ಎಂಬ ಪ್ರಸಿದ್ಧ ಪ್ರದೇಶ ಇಂದಿಗೂ ಜನಪ್ರಿಯ.

ಲಾಡರ ಪ್ರತಿಯೊಂದು ಪಂಗಡಗಳಲ್ಲೂ ತಮ್ಮದೇ ಉಪಪಂಗಡಗಳಿವೆ. ಲಾಡರು ಪರಜಾತಿಯವರ ಅದರಲ್ಲೂ ತಮಗಿಂತ ಕೀಳು ಜಾತಿಯವರಲ್ಲಿ ಆಹಾರ ಪದಾರ್ಥ ಸ್ವೀಕರಿಸುವುದಿಲ್ಲ, ಅಂತಹವರೊಂದಿಗೆ ಸಂಪರ್ಕವಿಟ್ಟುಕೊಂಡು ಹೊಕ್ಕು ಬಳಕೆ

ನಡೆಸುವುದು, ಅಂತಹವರೊಂದಿಗೆ ವಿವಾಹ ಸಂಬಂಧಗಳನ್ನು ಬೆಳೆಸುವುದು, ಅಲ್ಲದೆ ವಿಧವಾ ವಿವಾಹ, ಹಾದರ ಇವುಗಳನ್ನು ಜಾತಿಯ ಹಿರಿಮೆಗೆ ಕಳಂಕಪ್ರಾಯವೆಂದು ಬಗೆದು ಕಟ್ಟುನಿಟ್ಟಾಗಿ ಇವು ಅಪರಾಧವೆಂದು ನಿಷೇಧಿಸಲಾಗಿದೆ. ಹಿಂದಿನ ದಿನಗಳಲ್ಲಿ ಜಾತಿಗೆ 'ಚೌಧುರಿ' ಎಂಬ ಹಿರಿಯ ಯಜಮಾನ ಇರುತ್ತಿದ್ದು, ಜಾತಿಗೆ ಕಳಂಕ ತರುವ ಕೆಲಸ ಮಾಡಿದವರನ್ನು ಬಹಿಷ್ಕಾರ, ದಂಡ, ಮುಂತಾದವುಗಳಿಂದ ಹದ್ದುಬಸ್ತಿನಲ್ಲಿಡಲಾಗುತ್ತಿತ್ತು. ಆದರೆ, ಇಂದಿನ ದಿನಗಳಲ್ಲಿ ಹಿರಿಯರನ್ನು ಗಣನೆಗೆ ತೆಗೆದುಕೊಳ್ಳದೆ, ಅಡ್ಡದಾರಿ ಹಿಡಿದು, ಭಂಡತನದಿಂದ ಹಳೆಯಕಟ್ಟುಪಾಡುಗಳು ಸಡಿಲಗೊಳ್ಳುತ್ತಿರುವುದು ಅಷ್ಟು ಗುಟ್ಟಾಗೇನೂ ಉಳಿದಂತೆ ಕಾಣುವುದಿಲ್ಲ.

**ಸೂರ್ಯವಂಶಿ ಲಾಡರು :**

ಸೂರ್ಯವಂಶಿ ಲಾಡರು, ಲಾಡರಲ್ಲಿ ಒಂದು ದೊಡ್ಡ ಪಂಗಡ. ಅವರಲ್ಲಿ ಅನೇಕ ಅಡ್ಡ ಹೆಸರುಗಳಿವೆ. ಬಿಳಗೀಕರ್, ಬುಜರೂಕರ್, ಚೆಂಡೂಕರ್, ಗೋವಿಂದ್‌ಕರ್, ಪರ್‌ಬುಕರ್ ಮತ್ತು ರಾಜಪುರೆ, ಸೂರ್ಯವಂಶಿ ಲಾಡರು ಮುಖ್ಯವಾಗಿ ಬಿಜಾಪುರ, ಧಾರವಾಡ, ಹುಬ್ಬಳ್ಳಿ, ಬೆಳಗಾವಿ ಮುಂತಾದ ಕಡೆ ನೆಲೆಸಿದ್ದಾರೆ. ಇವರ ಮುಖ್ಯ ಕಸುಬು ಕುರಿ, ಮೇಕೆಗಳನ್ನು ಕತ್ತರಿಸಿ ಅವುಗಳ ಮಾಂಸ ಮಾರಾಟ ಮಾಡುವ ಕಟುಕ ವೃತ್ತಿಯಲ್ಲಿದ್ದಾರೆ. ಪರಬುಕರ್, ಕಲೋಲ್ ಮುಂತಾದವರು ಮದ್ಯ ಮಾರಾಟ ಹಾಗೂ ಜಮೀನ್ದಾರಿ ವೃತ್ತಿಯಲ್ಲೂ ತೊಡಗಿದ್ದಾರೆ.

ಸೂರ್ಯ ವಂಶದ ರಾಜರಲ್ಲಿ ಪ್ರಮುಖರೆಂದರೆ, ಭೋಸಲೆ, ಸುರ್ವೆ, ಕಾಳಮುಖ, ಕ್ಷೀರಸಾಗರ, ಕದಮ, ಸುಧನ್ವ, ನಿಕ್ಕಮ, ಹಂಸಧ್ವಜ, ಧೀಟಕ, ಹಂಸಕೇತು, ಶೇಲಾರ, ಪ್ರೋಕ್ತಟ, ಮುಂತಾದವರು. ಇವರಲ್ಲಿ 'ಭೋಸಲೆ' ಎಂಬ ಉಪನಾಮದವ ಚಿತೋರ್ ರಾಣಾ ವಂಶಸ್ಥರಲ್ಲಿ ಮುಧೋಳದ ಜಹಗೀರಿ ಪಡೆದಿದ್ದ (ಕ್ರಿ.ಶ. ೧೪೬೮) ಬಹಿರೋಜಿಗೆ – ಬಹೇರ್‌ಜೀ ಅಥವಾ ಭೋಸಾಜಿಯಿಂದ ಈ ವಂಶಕ್ಕೆ ಭೋಸಲೆ ಎಂಬ ಉಪನಾಮ ಪ್ರಾಪ್ತವಾಗಿರಬೇಕು ಎಂದು ಹಲವು ಇತಿಹಾಸಕಾರರ ಅಭಿಮತವಾಗಿದೆ. ಇವರಲ್ಲಿ ಘೋರ್ಪಡೆ ಮನೆತನದವರಿಗೆ 'ಘೋರ್‌ಪಡ' ಎಂದರೆ 'ಉಡ'ದ ಸಹಾಯದಿಂದ ಖೇಳಸಾ ಕೋಟೆಯನ್ನು ಗೆದ್ದುದರಿಂದ ರಾಜಘೋರ್ಪಡೆ ಬಹಾದ್ದೂರ ಎಂಬ ಗೌರವಯುತ ಪದವಿಯ ಪರಿಣಾಮವಾಗಿ ಭೋಸಲೆಯವರ ಈ ಒಂದು ಶಾಖೆ ಘೋರ್ಪಡೆಯಾಯಿತು.

ಸೂರ್ಯವಂಶದವರಲ್ಲಿ ಅನೇಕ ಕುಳಿಗಳಿವೆ. ಅವುಗಳಲ್ಲಿ ಪ್ರಮುಖವಾದರು – ಭೋಸಲೆ, ಘೋರ್ಪಡೆಯಲ್ಲದೆ ನಕಾಸೆ, ನಾಯಿಕ, ರಾವುತ, ರಾವುಳ, ಗೋರೆ, ಕ್ಷೀರಸಾಗರ, ಲೋಖಂಡೆ, ಗಾಯಕವಾಡ, ಖಡಹೆ, ಕದಮ, ಪಾಟಕ, ರಾಣೆ, ಡೋಂಗರೆ, ನಿಕ್ಕಮ, ಘೋಡಕೆ, ಘಾಟಗೆ, ಮಡೀಕರ, ಮಧುಕರ, ಶಿಸೋದೆ, ಕಾಲೇಕರ, ಪತ್ರೆ, ಢೋಲೆ ಹಾಗೂ ಪ್ರತಿಹಾರ ಇತ್ಯಾದಿ.

ಸೂರ್ಯವಂಶದ ಕ್ಷತ್ರಿಯ ರಾಜರಲ್ಲಿ ಹನ್ನೆರಡು ಗೋತ್ರಗಳು –
''ಸೂರ್ಯವಂಶೋದ್ಭವಾನಾಂ ತು ಗೋತ್ರಾಣಿ ದ್ವಾದಶೈವಹಿ । ಪಂಚ
ವಿಶಂತಿ ಸೌಮ್ಯಾನಾಂ ಗೋತ್ರಾಣಿ ಮುನಿರಭ್ರುವೀತ್ ॥

ಸೂರ್ಯವಂಶೀಯರು ಸೂರ್ಯ ಗಾಯತ್ರಿ ವೇದ ಮಂತ್ರಗಳಿಂದ ವಿಷ್ಣು ಸೂರ್ಯಾದಿ ಉಪಾಸನ ಮಾಡಬೇಕು. ಸೂರ್ಯವಂಶಿಗಳಲ್ಲಿ ಹನ್ನೆರಡು ಕುಲದೇವತೆಗಳು – ಪ್ರಭಾವತಿ, ಕಾಳಿಕಾ ದುರ್ಗಾ, ಯೋಗೇಶ್ವರಿ, ಮಹಾಲಕ್ಷ್ಮೀ, ಇಂದ್ರಾಣಿ, ಚಂಡಿಕಾ, ತ್ವರಿತಾ, ಕಾಮಾಕ್ಷಿ, ಏಕವೀರಾ, ಅಂಬಿಕಾ ಹಾಗೂ ಮಹೇಶ್ವರಿ. ಆದರೆ, ಕರ್ನಾಟಕದಲ್ಲಿ ಇವರು ತಮ್ಮ ಸ್ಥಳೀಯ ದೇವ–ದೇವತೆಗಳನ್ನು ತಮ್ಮ ಮನೆತನದ ದೇವರುಗಳನ್ನಾಗಿ ಪೂಜಿಸುತ್ತಾರೆ. ಅವುಗಳಲ್ಲಿ ದುರ್ಗವ್ವ, ದ್ಯಾಮವ್ವ, ಹುಲಗವ್ವ, ಮಾರುತಿ, ಸಿದ್ರಾಯ, ಯಲ್ಲಪ್ಪ ಮುಂತಾದವು. ಸೂರ್ಯ ಇವರೆಲ್ಲರ ವಂಶವಾಹಿನಿಯ ಆವಾಹಕ. ಹಾಗಾಗಿ ಸೂರ್ಯೋಪಾಸನೆ ಇವರ ಅತಿ ಮುಖ್ಯ ಧ್ಯಾನ, ಪೂಜೆ ಹಾಗೂ ಮುಕ್ತಿ ಎನಿಸಿದೆ. ತುಳಸಿಗಿರಿಯಲ್ಲಿನ ಮಾರುತಿ ಗುಡಿ, ಪರಸಗಡದ ಯಲ್ಲವ್ವ ತಾಯಿ ಹಾಗೂ ಬಿಜಾಪುರದ ಸಿದ್ರಾಯಸ್ವಾಮಿ ಸೇವೆಗೆ ಇವರು ತಪ್ಪದೆ ಯಾತ್ರೆ ನಡೆಸುತ್ತಾರೆ.

ತಾವೆಲ್ಲ ಸೂರ್ಯವಂಶಕ್ಕೆ ಸೇರಿದವರೆಂದು ಅವರು ಅತ್ಯಂತ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಸೂರ್ಯವಂಶಿ ಲಾಡರ ಮತ್ತೊಂದು ವಿಶೇಷ ಪದ್ಧತಿಯೆಂದರೆ, ಇವರೆಲ್ಲ ಧಾರವಾಡ ಜಿಲ್ಲೆಯ ನವಲಗುಂದದಲ್ಲಿನ ಮುಸ್ಲಿಂ ಸಂತನೊಬ್ಬನಾದ ದರಗಾ **ಪವಲ್ ಮಲ್ಲಿಕ್**‌ನ ಸಮಾಧಿಗೆ ಪೂಜಿಸಲು ಹೋಗುತ್ತಾರೆ. ಹಿಂದೂಗಳ ಎಲ್ಲ ಹಬ್ಬ ಆಚರಣೆಗಳನ್ನು ಅವರು ಪಾಲಿಸುತ್ತಾರೆ. ವಿವಾಹ ಕಾರ್ಯಕ್ಕೆ ಬ್ರಾಹ್ಮಣ ಪುರೋಹಿತರನ್ನು ನೇಮಕ ಮಾಡಿಕೊಳ್ಳುತ್ತಾರೆ. ಇವರ ವಿವಾಹ ಸಂಪ್ರದಾಯಗಳು ಕೆಳಕಂಡಂತಿವೆ :

ಬಾಲ್ಯ ಹಾಗೂ ಪ್ರೌಢರ ಎರಡೂ ವಿವಾಹ ಪದ್ಧತಿಗಳಿವೆ. ಇಂದಿನ ಆಧುನಿಕ ದಿನಗಳಲ್ಲಿ ಬಾಲ್ಯವಿವಾಹ ಮರೆಯಾಗುತ್ತಿದೆ. ಸಮಾಜದಲ್ಲಿ ಶಿಕ್ಷಣದಿಂದ ಹೆಚ್ಚಿನ ಸಾಂಸ್ಕೃತಿಕ ಬೆಳವಣಿಗೆ ಕಂಡುಬರುತ್ತಿದೆ.

ವಿವಾಹ ನಿಷ್ಕರ್ಶೆ ಮಾಡಲು 'ಒಪ್ಪುಮಾತು' ಅಥವಾ ಇವರ ಭಾಷೆಯಲ್ಲಿ 'ಬಾಷ್ಪಗಿ' ಎನ್ನುವ ಶಾಸ್ತ್ರ, ಒಂದು ಪ್ರಶಸ್ತವಾದ ದಿನ ಹೆಣ್ಣಿನ ಅಥವಾ ಗಂಡಿನ ಮನೆಯಲ್ಲಿ ನಡೆಯುತ್ತದೆ. ವಧುವಾಗುವ ಹುಡುಗಿಗೆ ಒಂದು ಬೆಳ್ಳಿಯ ಕಂಠಹಾರ, ಬೆಳ್ಳಿಯ ಬಳೆಗಳು ಹಾಗೂ ಹೊಸ ಬಟ್ಟೆ ಬರೆ ಕೊಟ್ಟು ಉಡಿತುಂಬುವ ಶಾಸ್ತ್ರ ನಡೆಸಲಾಗುತ್ತದೆ. ಸಿಹಿಯೂಟದ ಭೋಜನದೊಂದಿಗೆ ಅಂದಿನ ಕಾರ್ಯಕ್ರಮ ಮುಕ್ತಾಯಗೊಳ್ಳುತ್ತದೆ.

ನಂತರ ವಿವಾಹಕ್ಕೆ ಒಂದು ಶುಭದಿನವನ್ನು ಬ್ರಾಹ್ಮಣ ಪುರೋಹಿತರಿಂದ ನಿಗಧಿಪಡಿಸಲಾಗುತ್ತದೆ. ಪುರೋಹಿತರು ಎರಡು ಚೀಟಿಗಳಲ್ಲಿ ಹೆಣ್ಣಿನ ಹಾಗೂ ಗಂಡಿನ ಹೆಸರು, ಮದುವೆ ದಿನಾಂಕ ಬರೆದು ಹೆಣ್ಣಿನ ಹೆಸರಿನ ಚೀಟಿಯನ್ನು ಆವರವರ ತಂದೆ ತಾಯಿಗಳಿಗೆ ನೀಡುತ್ತಾರೆ. ವಿವಾಹದ ಸಮಯದಲ್ಲಿ ಈ ಚೀಟಿಗಳನ್ನು ಮಡಚಿ ಬಟ್ಟೆಯಲ್ಲಿ

ಕಟ್ಟಿ, ಹೆಣ್ಣಿನ ಹಾಗೂ ಗಂಡಿನ ಕತ್ತಿಗೆ ನೇತುಹಾಕುತ್ತಾರೆ. ಈ ಸಂದರ್ಭದಲ್ಲಿ ಹುಡುಗನ ತಂದೆ ಹುಡುಗಿಗೆ ಎರಡು ಬಿಳಿಖಣ ಹಾಗೂ ಮೂರೂವರೆ ಪಾಪು ಅಕ್ಕಿಯನ್ನು ನೀಡುತ್ತಾನೆ. ವಿವಾಹಕ್ಕೆ ಮುಂಚಿತವಾಗಿ ಒಂದಿ ದಿನ ತಮ್ಮ ಮನೆ ದೇವರನ್ನು ಸಂತುಷ್ಟಗೊಳಿಸಲು ದೇವಕಾರ್ಯ ನೆರವೇರಿಸುತ್ತಾರೆ. ಅದೇ ಸಮಯದಲ್ಲಿ ಹೆಣ್ಣಿನ ಮನೆಯಲ್ಲಿ ಹೆಣ್ಣಿನ ಮೈಗೆ ಅರಶಿನ ಹಚ್ಚಿ ಐದು ಜನ ಮುತ್ತೈದೆಯರು ನಾಲ್ಕು ಕೊಡಗಳಲ್ಲಿ ನೀರು ತುಂಬಿ ನಾಲ್ಕು ಚೌಕಾಕಾರದಲ್ಲಿಟ್ಟು ಕೊಡಗಳ ಕತ್ತಿನ ಸುತ್ತ ಐದು ಎಳೆ ಹಸಿನೂಲನ್ನು ಕಟ್ಟಿ, ಮಧ್ಯೆ ಮಣೆ ಹಾಕು ಹೆಣ್ಣನ್ನು ಕೂಡ್ರಿಸಿ ನೀರೆರೆಯುತ್ತಾರೆ.

ಅದೇ ದಿನ ಅತ್ತಕಡೆ ಗಂಡಿನ ಮನೆಯವರು ಹೆಣ್ಣಿನ ಊರಿಗೆ ದಿಬ್ಬಣ ಹೊರಡುತ್ತಾರೆ. ಅಲ್ಲಿ ಹೆಣ್ಣಿನ ತಂದೆ ಹಾಗೂ ಅವರ ಸಂಬಂಧಿಕರು ಗಂಡಿನ ಕಡೆಯವರನ್ನು ಆದರದಿಂದ ಕರೆದುಕೊಂಡು ಹೋಗಿ ಅವರಿಗಾಗಿಯೇ ನಿಗದಿಪಡಿಸಿದ ಬಿಡಾರದಲ್ಲಿ ತಂಗಲು ವ್ಯವಸ್ಥೆ ಮಾಡುತ್ತಾರೆ. ವಿವಾಹದ ದಿನದಂದು ಈ ಮುಂಚೆ ನಡೆಸಿದಂತೆಯೇ ಚೌಕಾಕಾರದ ಸ್ಥಳದಲ್ಲಿ ಹೆಣ್ಣು ಮತ್ತು ಗಂಡಿಗೆ ಪ್ರತ್ಯೇಕವಾಗಿ ನೀರೆರೆಯುವ ಕಾರ್ಯ ನಡೆಯುತ್ತದೆ. ನಂತರ ಹೊಸ ಬಟ್ಟೆಗಳನ್ನುಟ್ಟು ಹೆಣ್ಣು ಗಂಡು ಸಿಂಗರಿಸಿಕೊಳ್ಳುತ್ತಾರೆ. ಹೆಣ್ಣಿಗೆ ಪದ್ಧತಿಯಂತೆ ಬಿಳಿಸೀರೆ ಹಾಗೂ ರವಿಕೆಯನ್ನು ತೊಡಿಸಲಾಗುತ್ತದೆ. ಗಂಡಿಗೆ, ತಲೆಗೆ ಪೇಟ ಹಾಗೂ ಹಣೆಗೆ ಉದ್ದನೆಯ ಕೆಂಪು ತಿಲಕವಿಡಲಾಗುತ್ತದೆ. ಗಂಡು ಮಂಗಳ ವಾದ್ಯಗಳೊಡನೆ ಕುದುರೆಯೇರಿ ಹೆಣ್ಣಿನ ಮನೆಗೆ ಮೆರವಣಿಗೆಯಲ್ಲಿ ಹೊರಡುತ್ತಾನೆ. ಜೊತೆಯಲ್ಲಿ ಬಂಧು-ಬಾಂಧವರು, ಗೆಳೆಯರು ಪಾಲ್ಗೊಳ್ಳುತ್ತಾರೆ.



ಸೂರ್ಯವಂಶೀಯರಲ್ಲಿ ವಿವಾಹ ಆಚರಣೆ

ಸೂರ್ಯವಂಶಿ ಲಾಡರ ವಿವಾಹದ ಅತಿಮುಖ್ಯ ವಿಶೇಷವಾದ ಭಾಗವೆಂದರೆ ಕನ್ಯಾದಾನದ ಪದ್ಧತಿ. ಹೆಣ್ಣಿನ ಬಿಡಾರದ ಚಪ್ಪರದಲ್ಲಿ ಗಂಡನ್ನು ಒಂದು ದೊಡ್ಡ ಬುಟ್ಟಿಯಲ್ಲಿ ಕೆಲವು ಧಾನ್ಯಗಳ ಹಾಗೂ ಒಂದು ಹಗ್ಗದ ಹುರಿಯ ಜೊತೆ ಬುಟ್ಟಿಯಲ್ಲಿ ನಿಲ್ಲಿಸುತ್ತಾರೆ. ಗಂಡಿನ ಎದುರು–ಬದುರಾಗಿ ಹೆಣ್ಣನ್ನು ಒಂದು ಬೀಸುವ ಕಲ್ಲಿನ ಮೇಲೆ ನಿಲ್ಲಿಸಲಾಗಿರುತ್ತದೆ. ಹಸಿ ನೂಲನ್ನು ತಂದು ಹೆಣ್ಣಿನ ಎಡಮಣಿಕಟ್ಟಿಗೂ ಅದರ ಇನ್ನೊಂದು ತುದಿಯನ್ನು ಗಂಡಿನ ಬಲಮಣಿಕಟ್ಟಿಗೂ ಕಟ್ಟಲಾಗುತ್ತದೆ. ಹೆಣ್ಣು–ಗಂಡಿನ ನಡುವೆ ಒಂದು ಬಿಳಿವಸ್ತ್ರದ ಅಂತರ್‌ಪಟ ಹಿಡಿಯಲಾಗುತ್ತದೆ. ಪುರೋಹಿತರು ವಿವಾಹ ಸಂದರ್ಭದ ಪವಿತ್ರ ಮಂತ್ರಗಳನ್ನು ಪಠಿಸುತ್ತಾರೆ. ನಂತರ ಹೆಣ್ಣು ಗಂಡಿನ ತಲೆಯ ಮೇಲೆ ಅಕ್ಷತೆ ಹಾಕಿ ಆಶೀರ್ವದಿಸಲಾಗುತ್ತದೆ. ಹಿರಿಯರು, ಬಂಧು–ಬಾಂಧವರು ಹರಸಿ ಆಶೀರ್ವದಿಸುತ್ತಾರೆ. ಹೀಗೆ ಕನ್ಯಾದಾನ ಶಾಸ್ತ್ರ, ತಾಳಿಕಟ್ಟುವುದರೊಂದಿಗೆ ಮುಕ್ತಾಯವಾಗುತ್ತದೆ. ಮಾರನೇ ದಿನ ಸ್ನಾನಾಹ್ನಿಕಗಳ ನಂತರ ಹೆಣ್ಣಿನ 'ಬಾರಾತ್' ಗಂಡಿನ ಬಿಡಾರದ ಕಡೆಗೆ ಸಾಗುತ್ತದೆ. ದಾರಿಯಲ್ಲಿ ಗ್ರಾಮದೇವತೆಯ ದೇವಸ್ಥಾನದಲ್ಲಿ ಮೆರವಣಿಗೆ ನಿಂತು ಪೂಜೆ ಮಾಡಿಸಿ ನಂತರ ಸಾಗುತ್ತಾರೆ.

ಸಂಪ್ರದಾಯದಂತೆ ಗಂಡಿನ ಮನೆಯಲ್ಲಿ ಗಂಡಿನ ತಾಯಿಯ ಕೈಗೆ ಹೆಣ್ಣಿನ ಕೈಯನ್ನಿತ್ತು ಹೆಣ್ಣನ್ನು ಒಪ್ಪಿಸುವ ಕಾರ್ಯಕ್ರಮ ಜರುಗುತ್ತದೆ. ಗಂಡಿನ ತಂದೆ ಹೆಣ್ಣಿನ ಪರಿವಾರದವರಿಗೆ ಏಳು ರೂಪಾಯಿಗಳನ್ನು ಗೌರವಸೂಚಕ ಉಡುಗೊರೆಯನ್ನಾಗಿ ನೀಡುತ್ತಾನೆ. ಮಾರನೇ ದಿನ ಹೆಣ್ಣಿನ ತಂದೆ ಔತಣಕೂಟವೇರ್ಪಡಿಸಿ ಬೀಗರಿಗೆ ಹೊಸಬಟ್ಟೆಯನ್ನಿತ್ತು ಅವರಿಗೆ ಹಾಗೂ ಬಂಧುಗಳಿಗೆ ಏಳು ರೂಪಾಯಿಯನ್ನು ಗೌರವಸೂಚಕವಾಗಿ ನೀಡುತ್ತಾನೆ.

ನಾಲ್ಕನೇ ದಿನ ಗಂಡಿನ ತಂದೆ ಔತಣಕೂಟವೇರ್ಪಡಿಸುತ್ತಾನೆ. ಕುಲಬಾಂಧವರೆಲ್ಲ ಭಾಗವಹಿಸುತ್ತಾರೆ. ಗಂಡಿನ ತಂದೆ, ಹೆಣ್ಣಿನ ತಂದೆ–ತಾಯಿಯವರಿಗೆ ಉಡುಗೊರೆಗಳನ್ನು ನೀಡಿ, ಕುಲಬಾಂಧವರಿಗೆ ಹೆಣ್ಣಿನ ಕಡೆಯವರು ನೀಡಿದ್ದ ಎರಡರಷ್ಟು ಹಣವನ್ನು ನೀಡುತ್ತಾರೆ. ಈ ಹಣವೆಲ್ಲ ಮದ್ಯಕ್ಕಾಗಿ ವೆಚ್ಚ ಮಾಡಲಾಗುತ್ತದೆ.

ಐದನೇ ದಿನ ಹೆಣ್ಣಿನ ಕಡೆಯವರು ತಮ್ಮ ಮನೆಗೆ ಹೊರಟು ಬರುತ್ತಾರೆ. ಇದರೊಂದಿಗೆ ಮದುವೆಯ ಕಾರ್ಯ ಮುಕ್ತಾಯಗೊಳ್ಳುತ್ತದೆ.

ಐದನೇ ದಿನ ಹೆಣ್ಣಿನ ಕಡೆಯವರು ತಮ್ಮ ಮನೆಗೆ ಹೊರಟು ಬರುತ್ತಾರೆ. ಇದರೊಂದಿಗೆ ಮದುವೆಯ ಕಾರ್ಯ ಮುಕ್ತಾಯಗೊಳ್ಳುತ್ತದೆ.

**ಸಾವು :** ಸೂರ್ಯವಂಶಿ ಲಾಡರಲ್ಲಿ, ಮಹಾರಾಷ್ಟ್ರದ ಸಂಪರ್ಕದಲ್ಲಿರುವವರು ಸತ್ತವರನ್ನು ಅಗ್ನಿಸ್ಪರ್ಶದಿಂದ ದಹನ ಮಾಡುತ್ತಾರೆ. ಬಿಜಾಪುರ ಮುಂತಾದೆಡೆಯ ಲಿಂಗಾಯಿತ ಕೋಮಿನ ಸಂಪರ್ಕವಿರುವ ಲಾಡರು ಶವವನ್ನು ಮಣ್ಣು ಮಾಡುತ್ತಾರೆ.

ಶವ ಸಂಸ್ಕಾರದ ನಂತರ ಬಂಧುಗಳು ಸ್ನಾನ ಮಾಡಿ ಮೃತರ ಮನೆಗೆ ಬಂದು ಅವರು ಸತ್ತ ಸ್ಥಳದಲ್ಲಿ ಇಡಲಾದ ನೀರು ತುಂಬಿದ ಮಡಕೆಗೆ ತಾವು ತಂದ ಹುಲ್ಲಿನ ಗರಿಕೆಯನ್ನು

ಹಾಕಿ, ದೀಪಕ್ಕೆ ಕೈಮುಗಿದು, ಹಿಂತಿರುಗುತ್ತಾರೆ. ಮೂರನೇ ದಿನ, ಸಂಸ್ಕಾರ ನಡೆಸಿದ ಸ್ಥಳಕ್ಕೆ ಹೋಗಿ ಅಕ್ಕಿ, ಬೇಳೆ, ಖರ್ಜೂರ, ತೆಂಗಿನಕಾಯಿ ಬಟ್ಟಲು, ಬೆಲ್ಲ ಅನ್ನ ಮತ್ತು ಗೋಧಿಯ ಸಣ್ಣ ಸಣ್ಣ ರೊಟ್ಟಿಗಳನ್ನು ಮಾಡಿ ದಹನ ಮಾಡಿದ ಸ್ಥಳದಲ್ಲಿಟ್ಟು ಬಂಧು, ಇತರ ಬಂಧುಗಳೂ ಅದರ ಮೇಲೆ ಕೆಲವು ಹನಿ ಹಾಲು ಸುರಿಯುತ್ತಾರೆ. ಎಲ್ಲರೂ ದೂರ ಹೋಗಿ ನಿಂತು ವಾಯಸ (ಕಾಗೆ)ವು ಬಂದು ಅದನ್ನು ತಿನ್ನುವ ತನಕ ನೋಡುತ್ತಾರೆ. ಒಂದು ಪಕ್ಷ ಕಾಗೆ ಬಾರದೆ ಇದ್ದರೆ ಎಲ್ಲರೂ ಮನಸ್ಸಿನಲ್ಲೇ ಸತ್ತವರ ಕ್ಷಮೆ ಕೇಳಿ, ಸತ್ತವರ ಮನಸ್ಸಿನ ಆಸೆಗಳೇನಾದರೂ ಇದ್ದರೆ, ಅವುಗಳನ್ನು ಪೂರೈಸುವುದಾಗಿ ಶಪಥ ಮಾಡುತ್ತಾರೆ. ಹಾಗೆ ನಿರ್ಧರಿಸಿದಾಗಲೂ ಕಾಗೆ ಬಂದು ಆಹಾರ ಮುಟ್ಟದಿದ್ದಲ್ಲಿ, ಆ ಆಹಾರವನ್ನು ಹಸುವಿಗೆ ತಿನ್ನಲು ನೀಡಲಾಗುತ್ತದೆ.

ಶವ ಹೊತ್ತ ವಾಹಕರಿಗೆ ಅವರ ಭುಜಗಳಿಗೆ ಮೊಸರು ಹಚ್ಚಿ ಸ್ನಾನಮಾಡಿಸಲಾಗುತ್ತದೆ. ಶವ ಹೊತ್ತ ಮೈಲಿಗೆ ಕಳೆಯಲು ಈ ಕ್ರಿಯೆ ಜರಗುತ್ತದೆ. ನಂತರ ಆ ನಾಲ್ಕೂ ಜನರಿಗೆ ಒಂದೇ ತಟ್ಟೆಯಲ್ಲಿ ಊಟ ಮಾಡಲು ಬಡಿಸಲಾಗುತ್ತದೆ. ಬಡಿಸಿದೆಲ್ಲವನ್ನೂ ಅವರು ನಾಲ್ಕು ಜನ ಪೂರ್ತಿ ತಿನ್ನದಿದ್ದಲ್ಲಿ ಉಳಿದಿದ್ದನ್ನು ಹಸುವಿಗೆ ನೀಡಲಾಗುತ್ತದೆ.

ಸಂಜೆ ಕುಲಬಾಂಧವರಿಗೆ ಪ್ರತಿ ಮನೆಗೊಬ್ಬರಂತೆ ಆಹ್ವಾನಿಸಿ ಮಾಂಸದೂಟ ಬಡಿಸಲಾಗುತ್ತದೆ. ಸಾವು ಸಂಭವಿಸಿದ ಹನ್ನೊಂದನೇ ದಿವಸ, ಸತ್ತ ವ್ಯಕ್ತಿಯ ಬೆಳ್ಳಿಯ ಪ್ರತಿರೂಪವೊಂದನ್ನು ಮಾಡಿಸಿ, ಅದನ್ನು ಮನೆಯ ಹಿರಿಯರ ಅಂತಹ ಪ್ರತಿಮೆಗಳೊಡನೆ ಒಂದು ಕಂಬಳಿ ಹಾಸಿ, ನದಿ ತೀರದ ಮರವೊಂದರ ಕೆಳಗಡೆ ಪೂಜಿಸಲಾಗುತ್ತದೆ. ವ್ಯಕ್ತಿಯ ಪ್ರತಿಮೆಗೆ ಹೆಣ್ಣು ಅಥವಾ ಗಂಡಿಗನುಸಾರವಾಗಿ ವಸ್ತ್ರಗಳನ್ನಿಟ್ಟು ಪೂಜಿಸಲಾಗುತ್ತದೆ. ಈ ಕಾರ್ಯಕ್ಕೆ ಬಂದ ಎಲ್ಲರಿಗೂ ಸಾಮೂಹಿಕ ಭೋಜನ ಏರ್ಪಡಿಸಲಾಗುತ್ತದೆ.

ಸೂರ್ಯವಂಶಿ ಲಾಡರಲ್ಲಿ ಕೆಲವರು ವೈಶಾಖಶುದ್ಧ ಶುಕ್ಲ ಪಕ್ಷದ ತೃತೀಯ ದಿನದಂದು ಶ್ರಾದ್ಧ ನಡೆಸುತ್ತಾರೆ. ಧಾರವಾಡದ ಲಾಡರಲ್ಲಿ ಸಾವು ಒಂದು ಕೆಟ್ಟ ಘಳಿಗೆಯಲ್ಲಿ ಆದ ಪಕ್ಷದಲ್ಲಿ ತಾವು ವಾಸಿಸುವ ಸತ್ತವನ ಮನೆಯನ್ನು ಮೂರು ತಿಂಗಳ ಕಾಲ ಬಿಟ್ಟು, ಮುಳ್ಳಿನ ಬೇಲಿ ಹಾಕಿ ಬೀಗ ಜಡೆಯುತ್ತಾರೆ. ಹಾಗೂ ಬೇರೊಂದು ಮನೆಯಲ್ಲಿ ವಾಸಮಾಡಲು ಹೋಗುತ್ತಾರೆ. ಸತ್ತ ವ್ಯಕ್ತಿಯ ಮನೆಯಲ್ಲೆ ವಾಸಿಸಿದರೆ, ಯಾವುದಾದರೂ ಕೆಡಕುಂಟಾಗಬಹುದೆಂಬ ನಂಬಿಕೆ ಇದೆ.

ಸೂರ್ಯವಂಶಿ ಲಾಡರು ಮಾಂಸಾಹಾರಿಗಳು. ಇವರು ಮದ್ಯಪಾನ ಸಹ ಮಾಡುತ್ತಾರೆ. ವಡ್ಡರು ಹಾಗೂ ಲಮಾಣಿಗಳು ಇವರ ಮನೆಯಲ್ಲಿ ಉಣ್ಣುತ್ತಾರೆ. ಆದರೆ ಸೂರ್ಯವಂಶಿಗಳು ಮಾತ್ರ ಅವರಲ್ಲಿ ಊಟ ಮಾಡುವುದಿಲ್ಲ. ಸೂರ್ಯವಂಶಿ ಲಾಡರು ಮನೆಯ ಭಾಷೆಯಾಗಿ ಹಿಂದೂಸ್ಥಾನಿ ಬಳಸುತ್ತಾರೆ. ಮಹಾರಾಷ್ಟ್ರದ ಲಾಡರು ಮರಾಠಿಯನ್ನು ತಮ್ಮ ಮನೆಮಾತಾಗಿ ಬಳಸುತ್ತಾರೆ.

**ಸುಗಂಧಿ ಲಾಡರು :**

ಕರ್ನಾಟಕದಲ್ಲಿ ನೆಲೆಸಿರುವ ಲಾಡರಲ್ಲಿ ಸುಗಂಧಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇವರು ಅತಿಹೆಚ್ಚಿನ ಸಂಖ್ಯೆಯಲ್ಲಿ ಬಿಜಾಪುರ, ಮೈಸೂರು, ಗುಲ್ಬರ್ಗಾ, ಹುಬ್ಬಳ್ಳಿ, ಧಾರವಾಡ, ಬೆಳಗಾಂ, ಸವಣೂರು ಮುಂತಾದೆಡೆ ನೆಲೆಸಿದ್ದಾರೆ. ಲಾಠ ಸಾಮ್ರಾಜ್ಯದ ಅತಿ ಪ್ರಾಚೀನ ಕಾಲದಿಂದಲೂ **ಇವರು ಸುಗಂಧ ದ್ರವ್ಯಗಳಾದ ಅತ್ತರ್, ಅನೇಕ ಪರಿಮಳಗಳು, ಊದುಬತ್ತಿ ಪೂಜಾ ಸಾಮಗ್ರಿಗಳಾದ ಅರಸಿನ, ಕುಂಕುಮ, ಶ್ರೀಗಂಧ, ಕವಡೆಗಳು ಮಿಕ್ಕ ಇತರ ವಸ್ತುಗಳ ವ್ಯಾಪಾರ ನಡೆಸುತ್ತಾ ಬಂದಿದ್ದಾರೆ. ಹಾಗಾಗಿ ಸುಗಂಧ ದ್ರವ್ಯಗಳ ಮಾರಾಟಗಾರರು 'ಸುಗಂಧಿ'ಗಳೆಂದೂ, ಲಾಡ ಸಾಮ್ರಾಜ್ಯದಿಂದ ವಲಸೆ ಬಂದವರಾದ್ದರಿಂದ 'ಲಾಡ'ರೆಂದು ಹೆಸರು ಪಡೆದಿದ್ದಾರೆ. ಇವರಲ್ಲದೆ ಹಲವರು ಪನ್‌ಸಾರಿ ವಸ್ತುಗಳ (ಗ್ರಂಥಿಗೆ) ಅಡಿಕೆ, ವೀಣ್ಯದೆಲೆ ಮುಂತಾದವನ್ನು ಮಾಡುವವರೂ ಇದ್ದಾರೆ.**

ಸುಗಂಧಿ ಲಾಡರಲ್ಲಿ ಅನೇಕ ಅಡ್ಡ ಹೆಸರುಗಳಿವೆ. ಅವರಲ್ಲಿ ಗಾಡೇಕರ್, ಲಾಲಶೆ, ಮೇಗರ್‌ರಾಜ್, ಉಣಾಲೆ, ಶತಿಬರಾಂಗಲೆ, ಗಾಂಜೇಕರ್, ನವಾತೆ ಇತ್ಯಾದಿಗಳು ಪ್ರಮುಖವಾದರು. ಮರಾಠ ಜನಾಂಗದಲ್ಲಿನ ಹಲವಾರು ಪದ್ಧತಿಗಳು, ಸಂಪ್ರದಾಯಗಳು ಇವರಲ್ಲೂ ಬಳಕೆಯಲ್ಲಿವೆ. ಇವರು ಮರಾಠಿ ಹಾಗೂ ಹಿಂದೂಸ್ತಾನಿಗಳನ್ನು ಹೆಚ್ಚು ಬಳಸುತ್ತಾರೆ. ಕರ್ನಾಟಕದಲ್ಲಿ ನೆಲೆಸಿರುವವರು ಕನ್ನಡವನ್ನೂ ಬಳಕೆ ಮಾಡುತ್ತಾರೆ.

ಸುಗಂಧಿ ಲಾಡರಲ್ಲಿನ ಕೆಲವು ಪದ್ಧತಿಗಳು ಅತಿ ವಿಶೇಷವಾಗಿವೆ. ಅವುಗಳಲ್ಲಿ ಮುಖ್ಯವಾದದ್ದು ವೈವಾಹಿಕ ಸಂಬಂಧಗಳು. ಇವರಲ್ಲಿ ಸೋದರತ್ತೆಯ ಮಗಳನ್ನು ಮದುವೆಯಾಗುವುದು ನಿಷಿದ್ಧ. ಆದರೆ, ಸೋದರ ಮಾವನ ಮಕ್ಕಳನ್ನು ವಿವಾಹವಾಗಬಹುದಾಗಿದೆ. ಒಬ್ಬ ಗಂಡಸು ಬೇಕಾದರೆ ಅಕ್ಕ–ತಂಗಿಯರಿಬ್ಬರನ್ನೂ ಒಟ್ಟಿಗೆ ವಿವಾಹವಾಗಬಹುದು. ಅಂತೆಯೇ ಅಣ್ಣ ತಮ್ಮಂದಿರಿಬ್ಬರು ಅಕ್ಕ–ತಂಗಿಯರಿಬ್ಬರನ್ನೂ ವಿವಾಹವಾಗಬಹುದು. ಬಾಲ್ಯ ವಿವಾಹ ಹಾಗೂ ಪ್ರೌಢ ವಿವಾಹಗಳೆರಡೂ ಪದ್ಧತಿಗಳು ಬಳಕೆಯಲ್ಲಿದ್ದವು. ಆದರೆ, ಇಂದಿನ ಆಧುನಿಕ ಪ್ರಗತಿಪರ ವಿಚಾರಗಳಿಂದ ಪ್ರಭಾವಿತರಾಗಿರುವ ಯುವ ಪೀಳಿಗೆ ಬಾಲ್ಯ ವಿವಾಹವನ್ನು ಉತ್ತೇಜಿಸುತ್ತಿಲ್ಲ. ಬ್ರಾಹ್ಮಣ ಪುರೋಹಿತರ ಸಮಕ್ಷಮ ಮಂಗಳ ಕಾರ್ಯಗಳು ನಡೆಯುತ್ತವೆ.

ಮುಂಜಿ ಮಾಡುವ ಪದ್ಧತಿ ಇವರಲ್ಲಿದೆ. ಬಾಲಕರು ಹತ್ತು ವರ್ಷ ಪ್ರಾಯ ದಾಟುವುದಕ್ಕೆ ಮುಂಚೆ ಯಜ್ಞೋಪವೀತ ಧಾರಣೆ ನಡೆಸಲಾಗುತ್ತದೆ. ಆದರೆ ಅದಕ್ಕಾಗಿ ವಿಶೇಷ ಆಚರಣೆಗಳ್ಯಾವುವೂ ಇರುವುದಿಲ್ಲ. ಬಹುಪತ್ನಿತ್ವ ಇವರಲ್ಲಿ ಬಳಕೆಯಲ್ಲಿದೆ. ಆದರೆ ಬಹುಪತಿತ್ವ ಪದ್ಧತಿ ಆಚರಣೆಯಲ್ಲಿ ಕಂಡುಬರುವುದಿಲ್ಲ.

ವಿವಾಹ ಪದ್ಧತಿಯು ಸುಗಂಧಿ ಲಾಡರಲ್ಲಿ ಮರಾಠರಂತೆ ಸರಳ. ವಿವಾಹಕ್ಕೋಸ್ಕರ ಪ್ರಸ್ತಾಪ ಗಂಡಿನ ತಂದೆಯ ಕಡೆಯಿಂದ ಬರುತ್ತದೆ. ಗಂಡಿನ ತಂದೆಯು ಹೆಣ್ಣಿನ ತಂದೆಗೆ ಐವತ್ತು ರೂಪಾಯಿಗಳನ್ನು 'ಹೆಣ್ಣಿನ ತೆರ'ವಾಗಿ ಕೊಡಬೇಕಾಗುತ್ತದೆ. ಅರಸಿನದ ಶಾಸ್ತ್ರ,

ಶಕುನ ನೋಡುವುದು, ಅಂತರ್ಪಟ ಹಿಡಿಯುವುದು, ಗಂಗೆ ಪೂಜೆ, ಗಂಡನ್ನು ಕುದುರೆಯ ಮೇಲೆ ಮೆರವಣಿಗೆಯಲ್ಲಿ ಕರೆತರುವುದು ಹಾಗೂ ಮತ್ತೊಂದು ಅತಿ ಮುಖ್ಯ ಆಚರಣೆ ವೈದೀಕ ಸಂಪ್ರದಾಯದ ಲಾಜಹೋಮ ಪ್ರಮುಖವಾದ ಆಚರಣೆಗಳು. ಅವಲ್ಲದೆ ಗೋಂದಳದ ಶಾಸ್ತ್ರವೂ ಅವಶ್ಯಕವಾಗಿ ಒಂದು ಭಾಗವಾಗಿರುತ್ತದೆ. ಮತ್ತೊಂದು ವಿಶೇಷವೆಂದರೆ ಗಂಡು–ಹೆಣ್ಣನು ಮರದ ಹಲಗೆಯ ಮೇಲೆ ನಿಲ್ಲಿಸಿ ಧಾರೆಯೆರೆಯುತ್ತಾರೆ.

ಸುಗಂಧಿಗಳಲ್ಲಿ ವಿಧವಾ ವಿವಾಹಕ್ಕೆ ಸಮ್ಮತಿ ಇದೆ. ಆದರೆ ಮತ್ತೊಂದು ವಿಶೇಷವೆಂದರೆ ವಿಧವೆಯು ತನ್ನ ಗತಿಸಿದ ಪತಿಯ ಕಡೆಯ ಬಳಗದವರನ್ನು ವಿವಾಹವಾಗುವಂತಿಲ್ಲ. ಕೆಲವೊಂದು ಆಚಾರಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗಲೂಬಹುದು. ವಿಧವಾ ವಿವಾಹ ಆಚರಣೆಯು ರಾತ್ರಿ ಹೊತ್ತು ನಡೆಯುತ್ತದೆ. ಕುಲಬಾಂಧವರು ಈ ಆಚರಣೆಗಾಗಿ ಒಟ್ಟಾಗಿ ಸೇರಿದರೂ ಸಹ ಹೆಚ್ಚಾಗಿ ಪಾಲ್ಗೊಳ್ಳುವುದಿಲ್ಲ, ಪ್ರತಿಯಾಗಿ ಹೊರಗಡೆ ಕುಳಿತಿರುತ್ತಾರೆ. ಕೇವಲ ಕೆಲವೇ ಮಂದಿ ಶಾಸ್ತ್ರಗಳಲ್ಲಿ ಪಾಲ್ಗೊಳ್ಳುತ್ತಾರೆ. ಬ್ರಾಹ್ಮಣ ಪುರೋಹಿತರೊಬ್ಬರು ವಧುವಿಗೆ ಒಂದು ಕಂಠಮಾಲೆ ನೀಡಿ ಅದನ್ನು ಆಕೆಯೇ ಧರಿಸಿಕೊಳ್ಳುತ್ತಾಳೆ. ನಂತರ ಪುರೋಹಿತರು ಹೆಣ್ಣಿನ ಸೆರಗಿನ ಚುಂಗನ್ನು ಗಂಡಿನ ಮೇಲ್ವಸ್ತ್ರದ ಕೊನೆಗೆ ಗಂಟು ಹಾಕುತ್ತಾರೆ. ಇದರೊಂದಿಗೆ ವಿವಾಹ ವಿಧಿಗಳು ಮುಗಿಯುತ್ತವೆ. ಪದ್ಧತಿಯಂತೆ ಜನಾಂಗದ ಬಂಧು ಬಾಂಧವರಿಗೆ ಭೋಜನ ಏರ್ಪಡಿಸಲಾಗುತ್ತದೆ.



ಕ್ಷತ್ರಿಯ ಲಾಡರ ವಿವಾಹ ಪದ್ಧತಿ

ಗಂಡ ಹೆಂಡತಿ ಪರಸ್ಪರ ಒಂದುಗೂಡಿ ಜೀವಿಸಲು ಇಷ್ಟಪಡದಿದ್ದರೆ ಜನಾಂಗದ ಮುಖಂಡರ ಸಮ್ಮುಖದಲ್ಲಿ ಇವರು ವಿಚ್ಛೇದನ ಪಡೆಯಲು ಸಮ್ಮತಿ ಇದೆ. ಅಷ್ಟೇ ಅಲ್ಲದೆ

ಹೆಂಡತಿಯ ನಡತೆಯು ಸರಿಯಿಲ್ಲದಿದ್ದರೂ ಸಹ ವಿಚ್ಛೇದನ ಪಡೆಯಬಹುದು. ಈ ಸಂದರ್ಭದಲ್ಲಿ ಹಿಂದೂ ವಿವಾಹ ಕಾನೂನನ್ನು ಪಾಲಿಸಲಾಗುತ್ತದೆ.

ಸುಗಂಧಿಲಾಡರು ಹಿಂದೂ ಧರ್ಮದ ಶೈವಪಂಥೀಯರು. ಇವರು ಪೂಜಿಸುವ ದೇವ ದೇವತೆಗಳೆಂದರೆ – ಅಂಬಾ ಭವಾನಿ, ಖಂಡೋಬಾ ಅಥವಾ ಮೈಲಾರಲಿಂಗೇಶ್ವರ, ಮಾರುತಿ, ವಿಠ್ಠಲ ಪಾಂಡುರಂಗ, ಭೈರೋಬಾ, ಮಾಸೋಬಾ ಮತ್ತು ನರಸೋಬಾ, ಇವರು ಮುಸ್ಲಿಂ ಸಂತ ದವಳ ಮಲ್ಲಿಕ್‌ನ ಸಮಾಧಿಗೂ ನಡೆದುಕೊಳ್ಳುವ ಪದ್ಧತಿ ಇದೆ (ಮುಸ್ಲಿಂ ಸಂತ). ಈ ದೇವರು, ದೇವತೆಗಳಿಗೆ ಹರಕೆ, ದಾನ ಮುಂತಾದವನ್ನು ಮಂಗಳವಾರ ಅಥವಾ ಶುಕ್ರವಾರದ ದಿನಗಳಂದು ಅರ್ಪಿಸಲಾಗುತ್ತದೆ. ಹರಕೆಯನ್ನು ದೇವರ ಹುಂಡಿಗೆ, ಅರ್ಚಕರಿಗೆ ಅಥವಾ ಭಕ್ತರಿಗೆ ನೀಡಲಾಗುತ್ತದೆ.

ಸತ್ತವರ ಶವ ಸಂಸ್ಕಾರ ಪದ್ಧತಿಯೂ ಎಲ್ಲಾ ಹಿಂದೂ ಜನಾಂಗದವರಲ್ಲಿ ಇದ್ದಂತೆಯೇ ಇದೆ. ಸತ್ತವರನ್ನು ದಹನ ಮಾಡಲಾಗುತ್ತದೆ. ಮೂರು ವರ್ಷಕ್ಕೆ ಕೆಳಪಟ್ಟ ಮಕ್ಕಳ ಶವವನ್ನು ಹೂಳಲಾಗುತ್ತದೆ. ದಹನ ಕ್ರಿಯೆಯ ನಂತರ ಅಸ್ತಿ ಹಾಗೂ ಬೂದಿಯನ್ನು ನದಿಯಲ್ಲಿ ವಿಸರ್ಜಿಸಲಾಗುತ್ತದೆ. ಸತ್ತವರ ಆತ್ಮಶಾಂತಿ ಹಾಗೂ ಮುಕ್ತಿಗಾಗಿ ಶ್ರಾದ್ಧ ಕರ್ಮಾದಿಗಳನ್ನು ಮತ್ತು ಮಹಾಲಯ ಅಮಾವಾಸ್ಯೆಯ ದಿನ, ಸತ್ತ ಹಿರಿಯರಿಗೆ ತಿಲತರ್ಪಣ ನೀಡಲಾಗುತ್ತದೆ. ಇವರಿಗೂ ತುಳಜಾ ಭವಾನಿ ಕುಲದೇವತೆ.

ಸುಗಂಧಿಲಾಡರು ಅತಿ ಹೆಚ್ಚಾಗಿ ವ್ಯಾಪಾರದಲ್ಲೇ ತೊಡಗಿದ್ದಾರೆ. ನೌಕರಿ ಮಾಡುವವರ ಸಂಖ್ಯೆ ಕಡಿಮೆ. ಇವರ ಮುಖ್ಯ ಕಸುಬು ಸುಗಂಧ ದ್ರವ್ಯಗಳನ್ನು ಮಾರಾಟ ಮಾಡುವುದು. ಅಷ್ಟೇ ಅಲ್ಲದೆ ಅವರಲ್ಲಿ ಧಾನ್ಯವರ್ತಕರೂ, ಕುರಿ ಕೋಳಿ ಸಕಾಣಿಕೆದಾರರೂ ಇದ್ದಾರೆ. ಸುಗಂಧಿಗಳು ಸಸ್ಯಹಾರದ ಜೊತೆ, ಮಾಂಸ, ಮೀನು, ಕೋಳಿ ಇವುಗಳನ್ನೂ ತಿನ್ನುತ್ತಾರೆ. ಇವರಲ್ಲಿ ಮದ್ಯಪಾನವೂ ಉಂಟು. ಸುಗಂಧಿಗಳು ಮರಾಠಾಕುಣಬಿಗಳ ಮನೆಯಲ್ಲಿ ಊಟ ಮಾಡುತ್ತಾರೆ.

ಸುಗಂಧಿಲಾಡರು ಇತರ ಲಾಡ ಜನಾಂಗಗಳಂತೆಯೇ ದಕ್ಷಿಣ ಗುಜರಾತಿನ ಲಾಡ ರಾಜ್ಯದಿಂದ ವಲಸೆ ಬಂದವರು. ಇವರು ಲಾಠದೇಶದಲ್ಲಿ ನೆಲೆಸಿದ್ದು ಅಲ್ಲಿ ದುರ್ಗಾಕ್ಷಾಮ ಬಂದಾಗ ಸುಮಾರು ೧೪ನೇ ಶತಮಾನದಲ್ಲಿ ಮಹಾರಾಷ್ಟ್ರಕ್ಕೆ ವಲಸೆ ಬಂದು, ಅವರಲ್ಲಿ ಕೆಲವು ಗುಂಪುಗಳು ಕರ್ನಾಟಕ, ಆಂಧ್ರಗಳಲ್ಲಿ ಬಂದು ನೆಲೆಸಿರುತ್ತಾರೆ. ಮಹಾರಾಷ್ಟ್ರದ ಸೊಲ್ಲಾಪುರ, ಕೊಲ್ಹಾಪುರ, ಪುಣೆ, ಸತಾರಾ ಪಂಡರಾಪುರಗಳಲ್ಲಿ ಸುಗಂಧಿಲಾಡರು ಹೆಚ್ಚಾಗಿ ಕಾಣಸಿಗುತ್ತಾರೆ. ಕರ್ನಾಟಕದಲ್ಲಿ ಗುಲ್ಬರ್ಗಾ, ಬಿಜಾಪುರ, ಗುಬ್ಬಳ್ಳಿ, ಧಾರವಾಡಗಳಲ್ಲಿ ನೆಲೆಸಿದ್ದಾರೆ.

**ಹೈದರಾಬಾದಿನ ಲಾಡಬಜಾರ್** : ಸುಗಂಧಿಲಾಡರು ಆಂಧ್ರದ ಭಾಗಗಳಲ್ಲಿ ತಮ್ಮ ವ್ಯಾಪಾರದ ದಸೆಯಿಂದ ನೆಲೆಸತೊಡಗಿದರು. ಹೈದರಾಬಾದಿನ ನಿಜಾಮನ ಆಸ್ಥಾನದಲ್ಲಿ ಸುಗಂಧ ದ್ರವ್ಯಗಳಿಗೆ ಹೆಚ್ಚಿನ ಬೇಡಿಕೆ ಇದ್ದದ್ದನ್ನು ಕಂಡ ಸುಗಂಧಿಗಳು, ಹೈದರಾಬಾದ್

ಪ್ರದೇಶದಲ್ಲಿ ನೆಲೆಸಿ ನಿಜಾಮನ ಸಂಸ್ಥಾನಕ್ಕೆ ಅಗತ್ಯವಾದ ಸುಗಂಧ ವಸ್ತುಗಳನ್ನು ಸರಬರಾಜು ಮಾಡತೊಡಗಿದರು. ಆದ್ದರಿಂದ, ಲಾಡರು ಅತಿ ಶೀಘ್ರದಲ್ಲೇ ಶ್ರೀಮಂತರಾಗತೊಡಗಿದರು. ಇದನ್ನು ಕಂಡ ನಿಜಾಮನ ಕುಲಬಾಂಧವರಿಗೆ ಸಹಜವಾಗಿ ಲಾಡರ ಮೇಲೆ ಹೊಟ್ಟೆಕಿಚ್ಚು ಆರಂಭವಾಯಿತು. ಸುಗಂಧಿಲಾಡರು ಸ್ವಲ್ಪ ಕಾಲದಲ್ಲೇ ಚಾರ್‌ಮಿನಾರ್‌ನ ಬಳಿ ತಮ್ಮ ವ್ಯಾಪಾರಿ ಮಳಿಗೆಗಳನ್ನು ತೆರೆದು ವೈಭವದಿಂದ ವ್ಯಾಪಾರ ಮಾಡತೊಡಗಿದರು. ಇಂದಿಗೂ ಚಾರ್‌ಮಿನಾರ್ ಬಳಿಯ ಮುಖ್ಯ ವ್ಯಾಪಾರೀ ರಸ್ತೆ 'ಲಾಡ ಬಜಾರ್' ಎಂದು ಪ್ರಖ್ಯಾತವಾಗಿದೆ.

ಸುಲ್ತಾನನ ಮನಸ್ಸು ಗೆದ್ದಿದ್ದ ಲಾಡರು ಅನೇಕ ಸುಗಂಧ ದ್ರವ್ಯಗಳನ್ನು, ಅವನ ಅಸಂಖ್ಯಾತ ರಾಣಿಯರಿಗೆ ಬೇಕಾದ ಅನೇಕ ಬಗೆಯ ಶೃಂಗಾರ ಸಾಧನಗಳನ್ನು ಲಾಡರು ಪೂರೈಸುತ್ತಿದ್ದುದರಿಂದ, ಅವರಿಗೆ ಉತ್ತಮ ಸ್ಥಾನಮಾನಗಳು ಲಭ್ಯವಾದವು. ಆದರೆ, ನಿಜಾಮನ ಆಸ್ಥಾನದ ಇತರ ಶ್ರೀಮಂತ ವರ್ಗದವರಿಗೆ ಲಾಡರ ಉನ್ನತಿ ಸಹಿಸಲಾಗಲಿಲ್ಲ. ಅವರು ಗುಟ್ಟಾಗಿ ಒಬ್ಬ ಸರದಾರನನ್ನು ಮಾರುವೇಷದಿಂದ ಲಾಡರು ತಮ್ಮ ಸುಗಂದ ವಸ್ತುಗಳನ್ನು ತಯಾರಿಸುತ್ತಿದ್ದ ಕಡೆಯಲ್ಲಿ ಕೆಲಸಕ್ಕಾಗಿ ನೇಮಿಸಿದರು. ಈತನು ಯಾರಿಗೂ ಅನುಮಾನ ಬರದಂತೆ, ಲಾಡರ ನಂಬಿಕೆ ಸಂಪಾದಿಸಿ, ಒಂದು ದಿನ ಅವರೆಲ್ಲ ಅಂಬಾಭವಾನಿ ಪೂಜಾ ಸಮಾರಂಭದಲ್ಲಿ ನಿರತರಾಗಿದ್ದಾಗ, ಯಾರಿಗೂ ತಿಳಿಯದಂತೆ, ಆಸ್ಥಾನಕ್ಕೆ ಸರಬರಾಜಾಗುವ ಸುಗಂಧ ದ್ರವ್ಯಗಳಲ್ಲಿ ಸತ್ತ ಹೆಗ್ಗಣಗಳನ್ನು ಮುಳುಗಿಸಿಬಿಟ್ಟ. ಈ ವಿಷಯ ತಿಳಿಯದ ಲಾಡ ವ್ಯಾಪಾರಿಗಳು, ಅದೇ ಸುಗಂಧಗಳನ್ನು ಎಂದಿನಂತೆ ಅಚ್ಚುಕಟ್ಟಾಗಿ ಶೀಷೆಗಳಲ್ಲಿ ತುಂಬಿ ಅರಮನೆಗೆ ತಲುಪಿಸಿದರು. ಆದರೆ, ಆ ವಸ್ತುಗಳನ್ನು ಬಳಸಿದಾಗ ಅವುಗಳಿಂದ ಬರುತ್ತಿದ್ದ ಕೆಟ್ಟ ವಾಸನೆಯಿಂದ ಕ್ರೋಧಗೊಂಡ ನಿಜಾಮನು, ಅವುಗಳನ್ನು ಸರಬರಾಜು ಮಾಡಿದ ಲಾಡ ವ್ಯಾಪಾರಿಗಳ ಶಿರಚ್ಛೇದನ ಮಾಡಲು ಆಜ್ಞಾಪಿಸಿದನು. ನಿಜಾಮನ ಆಜ್ಞೆ ಹಾಗೂ ಶ್ರೀಮಂತರ ಪಿತೂರಿಯ ವಿಚಾರವನ್ನು ತಮ್ಮ ಗುಪ್ತಚಾರರಿಂದ ಅರಿತು, ಮುಂದಿನ ಅಪಾಯವನ್ನು ಗ್ರಹಿಸಿ ಲಾಡರೆಲ್ಲ ರಾತ್ರೋರಾತ್ರಿ ವೇಷ ಮರೆಸಿಕೊಂಡು ಸಂಸಾರ ಸಮೇತ ಪರಾರಿಯಾದರು. ಕಡೆಗೆ ಹೈದರಾಬಾದ್ ಕರ್ನಾಟಕದ ಭಾಗಗಳಾಗಿರುವ ಗುಲ್ಬರ್ಗಾ, ಬಿಜಾಪುರ, ಮುಂತಾದ ದೂರ ದೂರದ ಊರುಗಳಲ್ಲಿ ಹೋಗಿ ನೆಲೆಸಿದರು. ಈಗಲೂ ಈ ಭಾಗಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸುಗಂಧಿಗಳಿರುವುದನ್ನು ಕಾಣಬಹುದು.

**ಎಲಿಗಾರ್ ಕ್ಷತ್ರಿಯ ಲಾಡರು :** ಲಾಠದೇಶದ ಪ್ರಮುಖ ಪಟ್ಟಣಗಳಾದ ಭರೂಚ್, ಸೂರತ್ ಹಾಗೂ ಚೋರಾಸಿ ಪ್ರದೇಶಗಳಿಂದ ತಾಂಬೂಲ ಚರ್ವಣಕ್ಕೆ ಅಗತ್ಯವಾದ ಎಲೆ, ಅಡಿಕೆ, ಜಾಯಿಕಾಯಿ, ಜಾಪತ್ರೆ, ಏಲಕ್ಕಿ, ಲವಂಗ ಮುಂತಾದವುಗಳನ್ನು ಹೊರದೇಶಗಳಾದ ಗ್ರೀಸ್, ಇಟಲಿ, ಈಜಿಫ್ಟ್ ಪರ್ಷಿಯಾ ಹಾಗೂ ಅರೆಬಿಯಾಗಳಿಗೆ ರಫ್ತು ಮಾಡುವ ಉದ್ಯೋಗವನ್ನು ಲಾಡ ಎಲಿಗಾರರು ಮಾಡುತ್ತಿದ್ದರು. ಅಷ್ಟೇ ಅಲ್ಲದೆ, ಸಿಂಧ್, ಕಛ್, ರಜಪುಟಾಣ, ಮಧ್ಯಪ್ರದೇಶ ಹಾಗೂ ದೆಹಲಿವರೆಗೂ ಅಂತರದೇಶೀಯ

ಮಾರುಕಟ್ಟೆಯಲ್ಲಿ ರಾಜರ ಅಂತಃಪುರಗಳಿಗೆ ಈ ವಸ್ತುಗಳು ಸರಬರಾಜಾಗುತ್ತಿದ್ದವು. **''ಲಾಡರು ಉತ್ತಮ ವ್ಯಾಪಾರಿಗಳಾಗಿದ್ದು ಅತ್ಯಂತ ಸತ್ಯನಿಷ್ಠರೂ, ಸ್ವಧರ್ಮಪಾಲಕರೂ, ಏಕಪತ್ನೀ ವ್ರತಸ್ಥರೂ ಆಗಿರುತ್ತಿದ್ದರು''.** ಹೀಗೆಂದು ಮಾರ್ಕೋಪೋಲೋ ಎಂಬ ಇಟಲಿಯ ಪ್ರವಾಸೀ ಇತಿಹಾಸಕಾರ ತನ್ನ ವೃತ್ತಾಂತದಲ್ಲಿ ಪ್ರಸ್ತಾಪಿಸಿದ್ದಾರೆ.

ಎಲಿಗಾರ ಲಾಡರೂ ಸಹ ವ್ಯಾಪಾರ ಮಾಡುವುದು, ಇದರ ಜೊತೆ ಸರಂಜಾಮುಗಳನ್ನು ಪ್ರದೇಶದಿಂದ ಪ್ರದೇಶಕ್ಕೆ ಸಾಗಾಣಿಕೆ ಮಾಡುವುದೂ ಅಲ್ಲದೆ ತಮ್ಮ ಕ್ಷಾತ್ರ ಧರ್ಮಕ್ಕನುಗುಣವಾಗಿ, ಸಮಯ ಬಂದಾಗ ತಮ್ಮ ದೊರೆಗಳ ಪರವಾಗಿ ಯುದ್ಧಗಳಲ್ಲಿ ತಮ್ಮ ಪರಾಕ್ರಮ ಮೆರೆಸಿ, ಯುದ್ಧದಲ್ಲಿ ಹೋರಾಡುತ್ತಿದ್ದರು. ಇವರು ಎಲ್ಲಾ ಕ್ಷತ್ರಿಯ ಲಾಡರಂತೆ ಜಾತಕರ್ಮಾದಿ ಸಂಸ್ಕಾರಗಳನ್ನು ಪಾಲುಸುತ್ತಾ ಉತ್ತಮ ಕುಲಾಚಾರವನ್ನು ಹೊಂದಿದ್ದಾರೆ. ಇವರೂ ಸಹ ಕುಲದೇವತೆ ತುಳಜಾಪುರದ ಅಂಬಾ ಭವಾನಿ ಮಾತೆಯನ್ನು ಪೂಜಿಸುತ್ತಾರೆ. ಇದಲ್ಲದೆ ಶೈವ, ವೈಷ್ಣವ ಸಂಪ್ರದಾಯಗಳನ್ನೂ ಪಾಲಿಸುವವರಿದ್ದಾರೆ.

ಎಲಿಗಾರ ಲಾಡರಲ್ಲಿ ಅನೇಕ ಮನೆತನಗಳಿವೆ. ಅವುಗಳಲ್ಲಿ ಮುಖ್ಯವಾದವು ಎಲಗಾರ್, ಕೊಟಬಾಗಿ, ಗರಗ, ಹೊಳೆಹೊಸೂರು, ದೇವಲಪುರ್‌ಕರ್, ಸವಣೂರ, ಮದುರೆ ಹಾಗೂ ಲಾಡ ಎಂಬ ಅನೇಕ ಅಡ್ಡ ಹೆಸರುಗಳಿಂದ ಕರೆಯಲ್ಪಡುತ್ತಾರೆ. **ಹೆಚ್ಚಾಗಿ ಇವರ ಸಂಬಂಧಗಳು ಸೊಲ್ಲಾಪುರ, ಗರಗ, ದೊಡ್ಡವಾಡ, ಕೊಟಬಾಗಿ, ತಡಕೋಡ, ಬೈಲಹೊಂಗಲ, ಯಡಹಳ್ಳಿ, ಉಪ್ಪಿನಬೆಟಗೇರಿ, ಸಂಪಗಾಂವ್, ಅಣ್ಣಿಗೇರಿ, ಬಾಸೀವಾಡಿ, ಮುನವಳ್ಳಿ, ಸವದತ್ತಿ ಹಾಗೂ ಬೆಳಗಾಂ ಗಳಲ್ಲಿ ನೆಲೆಸಿದ್ದಾರೆ.** ಇವರು ಒಟ್ಟು ಜನಸಂಖ್ಯೆ ಧಾರವಾಡ, ಹುಬ್ಬಳ್ಳಿ, ಸವಣೂರುಗಳನ್ನೂ ಸೇರಿದರೆ ಸರಿಸುಮಾರು ನಾಲ್ಕು ಸಾವಿರದಷ್ಟು. ಎಲಿಗಾರ ಲಾಡರು ಧಾರವಾಡಕ್ಕೆ ವಲಸೆ ಬಂದ ಪ್ರಸಂಗವೂ ಸ್ವಾರಸ್ಯಕರವಾದದ್ದು. ಪೇಶ್ವೆಗಳ ಸಂಗದ ವಿರಸ ಕಟ್ಟಿಕೊಂಡ ಬಾಬಾನಗರ (ಬಿಜಪುರ)ದ ದೇಸಾಯ ಮನೆತನದ ಈ ಎಲಿಗಾರ ಲಾಡರು ಅಲ್ಲಿಂದ ವಲಸೆ ಹೊರಟು ಧಾರವಾಡ ಪ್ರದೇಶದಲ್ಲಿ ಬಂದು ನೆಲೆಸಿದ್ದಾರೆ.

ಎಲೆ, ಅಡಿಕೆ ವ್ಯಾಪಾರದ ಜೊತೆ ವ್ಯವಸಾಯ ಹಾಗೂ ಇನ್ನಿತರ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಇತ್ತೀಚೆಗೆ ಸರ್ಕಾರಿ ನೌಕರಿಯಲ್ಲಿ ತೊಡಗಿರುವವರೂ ಸಹ ಕಂಡುಬರುತ್ತಾರೆ. **ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ದುಡಿಯುತ್ತಿರುವ ಶ್ರೀ ಬಾಬು ಹೊಳಿಹೊಸೂರು, ಶ್ರೀ ಎಂ.ಎಲ್. ಎಲಿಗಾರ್, ಅಬ್ಕಾರಿ ಹಾಗೂ ಸುಂಕ ಇಲಾಖೆಯಲ್ಲಿ ಉಪ ಆಯುಕ್ತರಾಗಿದ್ದ ಶ್ರೀ ವಿ.ಪಿ. ಕೊಟಬಾಗಿ, ಭಟ್ಕಳದ ವರಿಷ್ಠ ಪೊಲೀಸ್ ಅಧಿಕಾರಿ ಶ್ರೀ ಶಂಕರ್ ಹೊಳಿಹೊಸೂರ್, ಪ್ರಸಿದ್ಧ ವಕೀಲ ಅರುಣ ಎಂ. ಕೊಟಬಾಗಿ, ಬ್ಯಾಂಕ್ ಅಧಿಕಾರಿಯಾಗಿರುವ ಶ್ರೀ ಎನ್.ಕೆ. ಕೊಟಬಾಗಿ, ನಿವೃತ್ತ ಅಧಿಕಾರಿ ಆರ್.ಆರ್.ಎಲಿಗಾರ್, ಮುಂತಾದವರು ಕೆಲವು ಮುಖ್ಯ ವೃತ್ತಿಪರ ಅಧಿಕಾರಿಗಳಾಗಿದ್ದಾರೆ. ಧಾರವಾಡದ ಮಾರುಕಟ್ಟೆಯಲ್ಲಿ ಎಲೆ, ಅಡಿಕೆ ವ್ಯಾಪಾರಿಯಾಗಿದ್ದ**

**ಶತಾಯುಷಿ ಕೀರ್ತಿಶೇಷ ಹನುಮಂತಪ್ಪ ಎಲಿಗಾರರ ಸುಪುತ್ರ ಶ್ರೀ ರಾಮಚಂದ್ರಪ್ಪ ಫಕೀರಪ್ಪ, ಕೃಷ್ಣಪ್ಪ, ಅಲ್ಲದೆ ಇತ್ತೀಚಿನ ಪೀಳಿಗೆ ರಾಜಕೀಯದಲ್ಲಿ ಜನಪ್ರಿಯತೆ ಗಳಿಸಿರುವ ರವಿಂಧ್ರ ಎಲಿಗಾರ್ ಮುಖ್ಯರು.**

ಎಲ್ಲಾ ಕ್ಷತ್ರಿಯ ಲಾಡರಲ್ಲಿರುವಂತೆ ಎಲಿಗಾರರಲ್ಲೂ ಅನೇಕ ಗೋತ್ರಗಳಿವೆ. ಕಶ್ಯಪ, ವಿಶ್ವಾಮಿತ್ರ, ವಶಿಷ್ಠ, ಕೌಶಿಕ, ಕಪಿಲ ಮುಂತಾದವು ಮುಖ್ಯವಾದವು. ಇವರು ಎಲ್ಲಾ ಕ್ಷತ್ರಿಯ ಲಾಡರಂತೆ ಅನುಸರಿಸುವ ಕೆಲವು ಹಬ್ಬ, ಆಚರಣೆಗಳೆಂದರೆ, ಯುಗಾದಿ, ನಾಗಪಂಚಮಿ, ಶ್ರಾವಣ, ಗಣೇಶಚತುರ್ಥಿ, ವಟಸಾವಿತ್ರಿ, ನವರಾತ್ರಿ, ಮಹಾಶಿವರಾತ್ರಿ, ವಿಜಯದಶಮಿ, ದೀಪಾವಳಿ, ಹೋಳಿ ಲಕ್ಷ್ಮೀಪೂಜೆ, ಮಕರ ಸಂಕ್ರಾಂತಿ, ರಾಮನವಮಿ, ಕೃಷ್ಣಜನ್ಮಾಷ್ಟಮಿ, ಹನುಮಜಯಂತಿ, ದತ್ತಜಯಂತಿ, ಆಷಾಡ ಏಕಾದಶಿ, ಶ್ರಾವಣ, ಸೋಮವಾರ ಇತ್ಯಾದಿ. ಇವರಲ್ಲಿ ಒಂದು ವಿಶಿಷ್ಟವಾದ ಆಚರಣೆ ಎಂದರೆ – 'ರೊಟ್ಟಿ ಪಂಚಮಿ' ಹಬ್ಬ.

ರೊಟ್ಟಿ ಪಂಚಮಿ ಹಬ್ಬವನ್ನು ವಿನಾಯಕ ಚತುರ್ಥಿಯ ಹಿಂದಿನ ದಿವಸ, ತ್ರಯೋದಶಿಯ ದಿನ ಆಚರಿಸುತ್ತಾರೆ. ಆ ದಿನ ಮನೆಯಲ್ಲಿ ತಯಾರಿಸುವ ಗೋಧಿಹಿಟ್ಟು, ಗೋಧಿ ನುಚ್ಚು ಸುಮಂಗಲಿಯರಿಂದ, ತುಂಬಾ ಸಂಪ್ರದಾಯಗಳೊಡನೆ, ಬೀಸುವ ಕಲ್ಲಿನಲ್ಲಿ ಮನೆಯಲ್ಲೇ ತಯಾರಿಸಲಾಗುತ್ತದೆ. ಅಂದು ಓದಿಹುಗ್ಗಿ, ಗೋಧಿ ರೊಟ್ಟಿ (ಇದನ್ನು ರೊಟ್ಟಾ ಎನ್ನುತ್ತಾರೆ). ಕಡ್ಲೆಕಾಳು ಗುಗ್ಗರಿ, ರವೆಯ ತಂಬಿಟ್ಟು ತಯಾರಿಸುತ್ತಾರೆ. ಆ ದಿನದ ಅಡಿಗೆಯಲ್ಲಿ ಈರುಳ್ಳಿ, ಬೆಳ್ಳುಳ್ಳಿ ನಿಷಿದ್ಧ. ಆ ದಿನದ ಅಡುಗೆಯನ್ನು ಪೂಜೆ, ಪ್ರಸಾದದಂತೆ ಮನೆಯವರು ಮಾತ್ರ ಉಣ್ಣುತ್ತಾರೆ. ಆ ದಿನ ಅವರ ಬಂಧು–ಬಾಂಧವರು, ಸ್ನೇಹಿತರು ಅವರ ಮನೆಗಳಿಗೆ ಭೇಟಿ ನೀಡುವುದಿಲ್ಲ. ಅಕಸ್ಮಾತ್ ತಿಳಿಯದೆ ಅನಿವಾರ್ಯವಾಗಿ ಬಂದರೆ, ಅವರಿಗೆ ಮನೆಯಲ್ಲಿ ಊಟ ಹಾಕುವುದಿಲ್ಲ. ಪ್ರತಿಯಾಗಿ ಹೊರಗಡೆ ಯಾವುದಾದರೂ ಖಾನಾವಳಿ ಅಥವಾ ಹೋಟೆಲ್‌ನಲ್ಲಿ ಊಟ ಕೊಡಿಸಿ ಕಳಿಸುತ್ತಾರೆ. ಎಲಿಗಾರ್ ಲಾಡರು ತಮ್ಮ ವಿವಾಹ ಸಂಬಂಧಗಳನ್ನೂ ಇತರ ಲಾಡ ಕ್ಷತ್ರಿಯ ಪಂಗಡಗಳಾದ ಸುಗಂಧಿ, ಮರಾಠಾಕ್ಷತ್ರಿಯ ಲಾಡ್ ಹಾಗೂ ಮಹಾರಾಷ್ಟ್ರದ ಕ್ಷತ್ರಿಯ ಲಾಡರೊಂದಿಗೆ ಇರಿಸಿಕೊಂಡಿದ್ದಾರೆ.

ಎಲಿಗಾರ್ ಕ್ಷತ್ರಿಯ ಲಾಡರು ತಮ್ಮ ಮನೆಮಾತನ್ನು 'ಕನ್ನಡ'ವೆಂದು ತಿಳಿಸುತ್ತಾರೆ. ಬಹುಷಃ ದಕ್ಷಿಣ ಗುಜರಾತಿನಿಂದ ವಲಸೆ ಬಂದ ಹೊಸತರಲ್ಲಿ ಚೌರಾಸಿ ಭಾಷೆಯನ್ನಾಡುತ್ತಿದ್ದರು. ಆದರೆ ಮಹಾರಾಷ್ಟ್ರಕ್ಕೆ ಗುಳೆಹೋದ ಇವರು, ನಂತರ ಅಲ್ಲಿಂದ ಕರ್ನಾಟಕಕ್ಕೆ ವಲಸೆ ಬಂದಿರುತ್ತಾರೆ. ಈ ಪರಿವರ್ತನೆಯ ಸಂದರ್ಭದಲ್ಲಿ, ಪ್ರಾದೇಶಿಕ ಅಗತ್ಯಗಳಿಗನುಗುಣವಾಗಿ ಕ್ರಮೇಣ ಚೌರಾಸಿಯನ್ನು ಬದಿಗೊತ್ತಿ ಕನ್ನಡವನ್ನು ಅಪ್ಪಿಕೊಂಡಿರುವ ಸಂದರ್ಭಗಳೇ ಹೆಚ್ಚೆನ್ನಬಹುದು. ಇವರಲ್ಲಿ ಇತ್ತೀಚೆಗೆ ಸಾಕ್ಷರತೆ ಹೆಚ್ಚುತ್ತಿದೆ. ವ್ಯಾಪಾರೀ ಜನಾಂಗವಾದ ಇವರಿಗೆ ಶಿಕ್ಷಣಕ್ಕೆ ಅವಕಾಶಗಳು ಕಡಿಮೆಯಾಗಿದ್ದವು. ಆದರೆ, ಒಂದೆಡೆ ಭದ್ರವಾದ ನೆಲೆಕಂಡುಕೊಂಡ ಇವರು ಕ್ರಮೇಣ

ವಿದ್ಯಾಭ್ಯಾಸದ ಪ್ರಾಮುಖ್ಯತೆಯನ್ನು ಮನಗಂಡು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಿದ್ದರ ಪ್ರಭಾವದಿಂದ ಇಂದು ಪುರುಷರಲ್ಲಿ ಶೇ. ೬೫–೭೦ ಸಾಕ್ಷರತೆ ಹಾಗೂ ಸ್ತ್ರೀಯರಲ್ಲಿ ಶೇ. ೩೫–೪೯ ಸಾಕ್ಷರತೆಯಿದೆ. ಕೇವಲ ಶೇ.೧೦ ರಷ್ಟು ಜನ ಸರ್ಕಾರೀ ಹುದ್ದೆಗಳಲ್ಲಿದ್ದಾರೆ.

ಎಲಿಗಾರ್ ಲಾಡ ಕ್ಷತ್ರಿಯರು ಭಾರತದ ಎಲ್ಲಡೆ ಪಸರಿಸಿದ್ದಾರೆ. ಎಲಾ ವ್ಯಾಪಾರ ಇವರ ಮುಖ್ಯ ಕಸುಬಾದ್ದರಿಂದ ಮಹಾರಾಷ್ಟ್ರ, ಗುಜರಾತ್, ಮಧ್ಯಪ್ರದೇಶ ಮುಂತಾದೆಡೆ 'ಪಾನಾರಿ' ಗಳೆಂದೂ, ಕರ್ನಾಟಕದ ಕೆಲವೆಡೆ ವೀಳ್ಯ ಕ್ಷತ್ರಿಯರೆಂದೂ, ಬನಾರಸ್ ಹಾಗೂ ಉತ್ತರ ಪ್ರದೇಶದ ಭಾಗಗಳಲ್ಲಿ 'ಚೌರಾಸಿ' ಗಳೆಂದೂ ಕರೆಯಲ್ಪಡುತ್ತಾರೆ. ತಾಂಬೂಲ ಚರ್ವಣದಲ್ಲಿ ವೀಳ್ಯದೆಲೆ, ಅಡಿಕೆ, ಸುಣ್ಣ, ಜಾಯಿಕಾಯಿಗಳಾದ ನಾಲ್ಕನ್ನು 'ಚಾರಾ' (ಎಂದರೆ ನಾಲ್ಕು) ಎಂದೂ 'ರಸ' ಎಂದರೆ ಚೌರಾ+ರಸ ಚತುರ್ ರಸಗಳುಳ್ಳದ್ದ ತಾಂಬೂಲವಾದ್ದರಿಂದ ಇದನ್ನು ಮಾರುವವರು 'ಚೌರಾಸಿ' ಗಳೆಂದೂ ಕರೆಯಲ್ಪಡುತ್ತಾರೆ. ಬನಾರಸ್ ಒಂದರಲ್ಲೇ ಚೌರಾಸಿಗಳ ಸಂಖ್ಯೆ ೧–೨ ಲಕ್ಷದಷ್ಟು ಇದ್ದಿರಬಹುದು.

ಎಲಿಗಾರ್ ಲಾಡ ಕ್ಷತ್ರಿಯರಲ್ಲಿ ಆಚರಣೆಯಲ್ಲಿರುವ ಮುಖ್ಯ ಸಂಸ್ಕಾರಗಳೆಂದರೆ, ಚೌಲ, ಉಪನಯನ, ವಿವಾಹ, ಗರ್ಭದಾನ, ನಾಮಕರಣ, ಅಂತ್ಯ ಸಂಸ್ಕಾರಗಳು ಮುಖ್ಯವಾದವು. ಗಂಡು ಮಕ್ಕಳಿಗೆ ಹತ್ತು ವರ್ಷ ಮೀರುವ ಮೊದಲೇ ಉಪನಯನ ಆಚರಿಸುತ್ತಾರೆ. ಬಾಲ್ಯವಿವಾಹ ಪದ್ಧತಿ ತುಂಬಾ ಹಿಂದಿನ ದಿನಗಳಲ್ಲಿ ಬಳಕೆಯಲ್ಲಿದ್ದರೂ ಇಂದಿನ ಆಧುನಿಕ ವೈಚಾರಿಕತೆಯ ದಿನಗಳಲ್ಲಿ ಆ ಪದ್ಧತಿ ಕಣ್ಮರೆಯಾಗಿದೆ. ವಿಧವಾ ವಿವಾಹ ಪದ್ಧತಿಯು ಬಳಕೆಯಲ್ಲಿಲ್ಲ. ಇತರೇ ಲಾಡ ಕ್ಷತ್ರಿಯರಲ್ಲಿರುವಂತೆಯೇ ವಿವಾಹದ ವಿಧಿವಿಧಾನಗಳು ಎಲಿಗಾರರಲ್ಲಿಯೂ ಅದೇ ರೀತಿಯಲ್ಲಿವೆ. ಸತ್ತವರನ್ನು ಸುಡುವುದರ ಮೂಲಕ ಶವ ಸಂಸ್ಕಾರ ನಡೆಸಲಾಗುತ್ತದೆ. ಸತ್ತ ಮೂರನೇ ದಿನ ಅಸ್ತಿ ಹಾಗೂ ಬೂದಿಯನ್ನು ನದಿಯಲ್ಲಿ ವಿಸರ್ಜಿಸಲಾಗುತ್ತದೆ. ಹತ್ತನೇ ದಿನದ ದಾಯಾದಿಗಳ ಮಿಲನದ ನಂತರ ಹನ್ನೆರಡು ಹಾಗೂ ಹದಿಮೂರನೇ ದಿನಗಳಂದು ಸಾಮೂಹಿಕ ಭೋಜನ, ಪಿಂಡಪ್ರಧಾನ ಇತ್ಯಾದಿಗಳು ಜರಗುತ್ತವೆ. ಮುಂಜಿಯಾಗುವ ಮುಂಚೆ ಸತ್ತ ಚಿಕ್ಕ ಮಕ್ಕಳ ಶವಗಳನ್ನು ಹೂಳಲಾಗುತ್ತದೆ. ಮಹಾಲಯ ಅಮಾವಾಸ್ಯೆಯ ದಿನ ತಮ್ಮ ಪೂರ್ವಜರಿಗೆ ತಿಲತರ್ಪಣ ನೀಡುವ ಪದ್ಧತಿ ಇದೆ.


ತುಳಜಪುರದ ತುಳಜಭವಾನಿ ಮಾತ

ಲಾಡರ ಎಲ್ಲಾ ಕ್ಷತ್ರಿಯರೂ ತಮ್ಮ ಕುಲದೇವತೆ ಭವಾನಿ ಮಾತೆಯೆಂದು ಪರಿಗಣಿಸುವುದರ ಜೊತೆಗೆ ತಮ್ಮ ತಮ್ಮ ಮನೆದೇವರುಗಳನ್ನು ಮಾತ್ರ ಬೇರ ಬೇರೆಯವನ್ನು ಹೊಂದಿರುತ್ತಾರೆ. ಸಿದ್ದೇಶ್ವರ, ದತ್ತಾತ್ರೇಯ, ಶ್ರೀನಿವಾಸ, ಪಂಢರಾಪುರ ವಿಠ್ಠಲ ಘುಂತಾದವನ್ನು ತಮ್ಮ ಮನೆದೇವರನ್ನಾಗಿ ಪೂಜಿಸುತ್ತಾರೆ. ಅಲ್ಲದೆ, ಮೈಲಾರಲಿಂಗೇಶ್ವರ ಒಕ್ಕಲಿನವರು ಹೆಚ್ಚಿನ ಮನೆತನದವರಿದ್ದಾರೆ. ಹೀಗೆ ಮೈಲಾರಕ್ಕೆ ಸೇವೆಗೆ ಹೋದಾಗ ಅಲ್ಲಿ 'ಖಾದಿಮನೆ'ಯಲ್ಲಿ ಉಳಿದುಕೊಳ್ಳುವ ಪದ್ಧತಿ ಇದ. ಹೆಚ್ಚಿನ ಸಂಖ್ಯೆಯಲ್ಲಿ ತುಳಜಾಭವಾನಿಯ ಮಹಾರಾಷ್ಟ್ರದ ತುಳಜಾಪುರದ ತಾಯಿಯ ಸೇವೆಗೆ ಕ್ಷತ್ರಿಯ ಲಾಡರು ಹೋಗುತ್ತಾರೆ. ಅಂತೆಯೇ ಮೈಲಾರದ ರಥೋತ್ಸವದ ಜಾತ್ರೆಗೆ, ಸೌದತ್ತಿಯ ಎಲ್ಲವ್ವ ತಾಯಿಯ ಜಾತ್ರೆಯಲ್ಲೂ ಪಾಲ್ಗೊಳ್ಳುತ್ತಾರೆ. ರೇಣುಕಾ ಎಲ್ಲವ್ವ, ಭವಾನಿ, ಮೈಲಾರೇಶ್ವರ ಎಲ್ಲರೂ ದುಷ್ಟಶಕ್ತಿಯ ವಿರುದ್ಧ ಹೋರಾಡಿದ ಶಕ್ತಿಯ ರೂಪಗಳು. ದೇವರ ಆರಾಧನೆಯಲ್ಲಿ ಎಳೆಯುವ ತೇರಿಗೆ ತನ್ನದೇ ಆದ ವಿಶಿಷ್ಟ ವ್ಯಾಖ್ಯಾನವಿದೆ.

ತೇರನ್ನು ಆಧ್ಯಾತ್ಮಿಕವಾದ ಸಂಕೇತಕ್ಕೆ ಹೋಲಿಸಲಾಗುತ್ತದೆ. ತೇರು ದೇಹಕ್ಕೆ ಪ್ರತೀಕವಾಗಿದೆ. ಉತ್ಸವ ಮೂರ್ತಿಯನ್ನು ಪಲ್ಲಕ್ಕಿ ಇಲ್ಲವೇ ತೇರಿನಲ್ಲಿಟ್ಟು ದೇವಾಲಯದ ರಥದ ಬೀದಿಯಲ್ಲಿ ಎಳೆಯುವುದು ಆದರ ಶ್ರೇಷ್ಠತೆ ಹಾಗೂ ಔನ್ನತ್ಯವನ್ನು ಸಾರಲಿಕ್ಕೋಸ್ಕರವೆನಿಸುತ್ತದೆ. ಜಾತ್ರೆಯಲ್ಲಿ ಒಂದು ಕಡೆ ಉತ್ಸವ ಮೂರ್ತಿಯ ಮೆರವನಿಗೆ ನಡೆಯುತ್ತಿದ್ದರೆ, ಇನ್ನೊಂದೆಡೆ ದೇವರಿಗೆ ಹರಕೆ ತೀರಿಸುವ ಉರುಳುಸೇವೆ, ಸಿಡಿ ಆಡುವುದು, ಕೆಂಡ ತುಳಿಯುವುದು, ಶಸ್ತ್ರ ಹಾಕಿಸಿಕೊಳ್ಳುವುದು, ಮುಡುಪು ಕಟ್ಟಿಡುವ ಸಂಪ್ರದಾಯಗಳು ತಮ್ಮದೇ ಆದ ವಿಶಿಷ್ಟತೆಯನ್ನು ನಂಬುಗೆಯನ್ನಾಧರಿಸಿ ನಡೆಯುತ್ತವೆ.

### ಬೆಲಗೂರು–ಮೈಸೂರಿನ ಕ್ಷತ್ರಿಯ ಲಾಡರು :

ಲಾಡಕ್ಷತ್ರಿಯ ಜನಾಂಗದವರಲ್ಲಿ ಮೈಸೂರು, ಬೆಂಗಳೂರು, ಬೆಲಗೂರು, ಬಾಣಾವರ, ಚಿತ್ರದುರ್ಗ ಪ್ರದೇಶಗಳಲ್ಲಿ ನೆಲೆಸಿರುವವರು ತಮ್ಮದೇ ಆದ ಆಚರಣೆಗಳನ್ನು ಹೊಂದಿದ್ದಾರೆ. ಇವರೂ ಸಹ ಲಾಡದೇಶ (ದಕ್ಷಿಣ ಗುಜರಾತ್) ದಿಂದ ಮಹಾರಾಷ್ಟ್ರಕ್ಕೆ ವಲಸೆ ಬಂದು, ತದನಂತರ ಕರ್ನಾಟಕದಲ್ಲಿ ಬಂದು ನೆಲೆಸಿದ್ದಾರೆ. ಇವರ ಮನೆಮಾತೂ ಸಹ ಚೌರಾಸಿ. ಆದರೆ, ಪ್ರಾದೇಶಿಕೆ ಭಾಷೆಗಳ ಪ್ರಭಾವದಿಂದ ಇವರ ಭಾಷೆಯಲ್ಲಿ ಹೆಚ್ಚಿನ ಉರ್ದು ಪದಗಳು ನುಸುಳಿ ಬಂದಿವೆ. ಇವರೂ ಸಹ ತಮ್ಮ ಕುಲದೇವತೆ ಅಂಬಾಭವಾನಿಯ ಪೂಜೆ ನಡೆಸುತ್ತಾರೆ. ಹಿಂದೂಗಳ ಎಲ್ಲ ಹಬ್ಬಗಳನ್ನೂ ಇವರು ಆಚರಿಸುತ್ತಾರೆ.

ಮೂಲತಃ ಲಾಟದೇಶದಿಂದ ವಲಸೆ ಬಂದ ಈ ಲಾಡರು ಬಿಜಾಪುರ್ ಅದಿಲ್‌ಷಾಹಿ ಅದರ ಸಾಮ್ರಾಜ್ಯದಲ್ಲಿ ಇವರ ಪೂರ್ವಜರು ಆಶ್ರಯ ಪಡೆದವರಾಗಿದ್ದರೆಂಬುದು ಇತಿಹಾಸವನ್ನು ಕೆದಕಿದಾಗ ತಿಳಿದುಬರುವ ಅಂಶವಾಗಿದೆ. ಇವರ ಆಚಾರ ವಿಚಾರಗಳು,

ಹಬ್ಬಹರಿದಿನಗಳು ಆಚರಣೆ ಮುಂತಾದವು ಇತರ ಕ್ಷತ್ರಿಯ ಲಾಡರಂತೆಯೇ ಇವೆ. ಆದರೆ, ಮದುವೆ ಆಚರಣೆಯಲ್ಲಿ ಕೆಲವು ವಿಭಿನ್ನ ಶಾಸ್ತ್ರಗಳು ವಿಶೇಷ ರೀತಿಯವಾಗಿವೆ.

**ಅರಸಿನ ಸಿಕ್ಸಾ :** ವೀಳ್ಯಶಾಸ್ತ್ರ, ನಿಮಿತ್ತ ನೋಡುವುದು, ಅರಸಿನ ಶಾಸ್ತ್ರ ಮುಂತಾದವುಗಳ ನಂತರ ಧಾರೆಯೆರೆಯಬೇಕಾದರೆ ಹೆಣ್ಣನ್ನು ಒಂದು ಬುಟ್ಟಿಯಲ್ಲಿ ನಿಲ್ಲಿಸಿ ಬುಟ್ಟಿಗೆ ಹಸಿ ನೂಲಿನ ಸುರಿಗೆ ಸುತ್ತಿ, ಅದೇ ರೀತಿಯಲ್ಲಿ ಮದುವೆಯ ಗಂಡಿಗೂ ಒಂದು ಬುಟ್ಟಿಯಲ್ಲಿ ನಿಲ್ಲಿಸಿ ಸುರಿಗೆ ಸುತ್ತಿ ಅವಕ್ಕೆ ಅರಸಿನ ಕುಂಕುಮ, ಹೂ ಹಾಕಿ ಪೂಜಿಸಿ, ಅನಂತರ ಧಾರೆಯೆರೆಯುತ್ತಾರೆ. ಲಗ್ನದ ಶಾಸ್ತ್ರಗಳಲ್ಲಿ ಹೂಚೆಂಡಾಟ, ನೀರಿನಲ್ಲಿ ಉಂಗುರ ಹುಡುಕುವುದು, ಸಿಕ್ಸಾ ಎಂಬ ಮೂಲಿಕೆಯ ಲೆಪವನ್ನು ಗಂಡು, ಹೆಣ್ಣಿನ ಮುಖಕ್ಕೆ ಹಾಗೂ ಹೆಣ್ಣು, ಗಂಡಿನ ಮುಖಕ್ಕೆ (ರುಬ್ಬುವ) ಲೇಪಿಸುವ ಪದ್ಧತಿ, ನಂತರ ಅರಸಿನದ ಲೇಪವನ್ನು ಪರಸ್ಪರ ಕೈ, ಕಾಲು ಮುಖಗಳಿಗೆ ಹಚ್ಚುವ ಶಾಸ್ತ್ರದ ಸಂಪ್ರದಾಯವಿದೆ.

ಈ ಕ್ಷತ್ರಿಯ ಲಾಡರಲ್ಲಿ ಮಹಾರಾಷ್ಟ್ರದಲ್ಲಿರುವಂತೆ ಅನೇಕ ಘರಾಣಾಗಳಿವೆ. ಪ್ರತಿಯೊಂದು ಘರಾಣಾಕ್ಕೂ ಒಂದು ವಿಶೇಷ ಹೆಸರಿರುತ್ತದೆ. ಒಂದೇ ಘರಾಣಾಕ್ಕೆ ಸೇರಿದವರು ಪರಸ್ಪರ ಸಹೋದರರಾಗುತ್ತಾರೆ. ಗೋತ್ರ ಪದ್ಧತಿಯಂತೆಯೇ ಒಂದೇ ಘರಾಣಾದವರಲ್ಲಿ ಪರಸ್ಪರ ವಿವಾಹ ಸಂಬಂಧ ನಿಷಿದ್ಧ. ಇವರಲ್ಲಿ ಕೆಲವು ಪ್ರಮುಖ ಘರಾಣಾಗಳೆಂದರೆ . ಮುರತ್‌ಕರ್, ಭಗತ್, ನಗರ್‌ಕರ್, ದಿನ್‌ದಿನೆ, ದಲಾತ, ಅನಂತ್‌ಕರ್ ಪನ್‌ಸಾರಿ ಮುಂತಾದ ಸುಮಾರು ಹದಿನಾಲ್ಕು ಘರಾಣಾಗಳಿವೆ. ಪ್ರತಿಘರಾಣಾಕ್ಕೂ ತನ್ನದೇ ಆದ ಮನೆದೇವರುಗಳಿವೆ. ಉದಾಹರಣೆಗೆ ಮುರತ್‌ಕರ್ ಘರಾಣಾದವರು ದತ್ತಾತ್ರೇಯಮನೆದೇವರಾದರೆ, ಭಗತ್ ಘರಾಣಾದವರಿಗೆ ಅಂಬಾಭವಾನಿ, ಇದೇ ರೀತಿಯಲ್ಲಿ ತಿರುಪತಿ ಶ್ರೀನಿವಾಸ, ನಂಜನಗೂಡಿನ ನಂಜುಂಡೇಶ್ವರ, ಸೌದತ್ತಿ ಎಲ್ಲಮ್ಮ ತಾಯಿ, ಮೈಲಾರಲಿಂಗೇಶ್ವರ ಮುಂತಾದವುಗಳಿವೆ.

ಮೈಸೂರಿನ ಕ್ಷತ್ರಿಯ ಲಾಡರಲ್ಲಿ ಪಾಲಕಾಲಾಡರೆಂಬ ಒಂದು ಉಪಪಂಗಡ ಕಂಡುಬರುತ್ತದೆ. ಇವರನ್ನು ಸಾಕು ಮಕ್ಕಳು ಅಥವಾ ಹಳೇ ಮಕ್ಕಳು ಎಂದೂ ಕರೆಯುತ್ತಾರೆ. ಇವರಲ್ಲಿ ಕಾಳೋಲಾಡ್ ಎಂಬ ಉಪಪಂಗಡವೂ ಸಹ ಕಂಡುಬರುತ್ತದೆ. ಪಾಲಕಾಲಾಡರನ್ನು ಇತರ ಕ್ಷತ್ರಿಯಲಾಡರು ಅಷ್ಟಾಗಿ ಸ್ವೀಕರಿಸಿರಲಿಲ್ಲ. ಇವರನ್ನು ಸಾಮಾಜಿಕವಾಗಿ ಬಹಿಷ್ಕರಿಸಲಾಗಿತ್ತು, ಆದರೆ ಕೆಲವು ಯುವಕರು ಹೋರಾಟ ನಡೆಸಿ ಇವರನ್ನೂ ಸಹ ಇತರ ಕ್ಷತ್ರಿಯ ಲಾಡರೊಂದಿಗೆ ಸರಿಸಮನಾಗಿ ನೋಡುವಂತೆ ಒತ್ತಡ ಹಾಕಿದ್ದರ ಪರಿಣಾಮ, ಈಗಿನ ಅವರಲ್ಲಿನ ಭಿನ್ನಾಭಿಪ್ರಾಯಗಳು ಕಡಿಮೆಯಾಗುತ್ತಿವೆ. ಇವರಲ್ಲಿ ಹೆಚ್ಚಿನವರು ವ್ಯಾಪಾರಿ ಜನಾಂಗದವರು. ಮೈಸೂರಿನಲ್ಲಿ ಈ ಕ್ಷತ್ರಿಯ ಲಾಡರು ಸುಮಾರು ೧೯೫೦ರ ಸಮಯದಲ್ಲಿ ತಮ್ಮದೇ ಆದ ಕ್ಷತ್ರಿಯ ಲಾಡರ ಸಂಘ ಸ್ಥಾಪಿಸಿಕೊಂಡರು. ಹೆಚ್.ಕೃಷ್ಣಾಜಪ್ಪ, ಎಂ.ಆರ್. ಬಾಲಯ್ಯ, ಎಂ.ಎಸ್.ಗೋಪಾಲ್, ಎಂ.ಬಿ.ಸೀನಪ್ಪ, ಟಿ.ನಂಜಪ್ಪ, ಎಂ.ಎಸ್.ರಾಮಚಂದ್ರ, ಟಿ.ಹಿರಿಗಣ್ಣ ಹಾಗೂ ಸಿ.ಎಂ. ಯೋಗಾನಂದ ಈ ಜನಾಂಗದ ಮುಖಂಡರಲ್ಲಿ ಕೆಲವರು.

ಪರಂಪರಾನುಗತವಾಗಿ ಬಂದ ಯಜಮಾನಿಕೆಯಿಂದ ಎಲ್ಲರನ್ನೂ ಅಂಕುಶದಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದ ಮುಖಂಡರು ಒಂದು ಕಡೆ, ಇದನ್ನು ದಬ್ಬಾಳಿಕೆಯೆಂದು ಧಿಕ್ಕರಿಸಿ ಸಮರ ಸಾರಿದ ಯುವಕರ ಗುಂಪೊಂದು ಕಡೆ ಹೀಗೆ ಪರಸ್ಪರ ಜಗಳಗಳಿಂದ ಜನಾಂಗದಲ್ಲಿ ಒಡಕು ಪ್ರಾರಂಭವಾಗಿ ಬಹಳ ಕಾಲ ಇದು ಶೀತಲ ಯುದ್ಧವಾಗಿ ಮುಂದುವರೆಯಿತು. ಈ ಭಿನ್ನಾಭಿಪ್ರಾಯಗಳು ಕಡಿಮೆಯಾಗಿ ಜನಾಂಗದವರೆಲ್ಲ ಒಂದುಗೂಡುವ ಮನಸ್ಸು ಮಾಡಿದಂತಿದೆ. ಮೈಸೂರು ಕ್ಷತ್ರಿಯ ಲಾಡರು ಬೆಲಗೂರು, ಬೆಂಗಳೂರು, ಬಾಣಾವರ, ನರಸಿಂಹರಾಜಪುರ ಹಾಗೂ ತುಮಕೂರಿನ ಕ್ಷತ್ರಿಯ ಲಾಡರ ಸಮೂಹಗಳಲ್ಲಿ ವಿವಾಹ ಸಂಬಂಧಗಳನ್ನಿಟ್ಟು ಕೊಂಡಿದ್ದಾರೆ. ಪ್ರಗತಿಪರ ವಿಚಾರಗಳುಳ್ಳ ಕೆಲವು ಯುವಕರು ಆಧುನಿಕ ಯುಗದ ಬದಲಾವಣೆಗಳಿಗೆ ಸ್ಪಂದಿಸತೊಡಗಿದ್ದಾರೆ. ಸುಶಿಕ್ಷಿತರ ಸಂಖ್ಯೆ ಹೆಚ್ಚಾಗುತ್ತಿದೆ. ಕೆಲವು ಕಂದಾಚಾರ ಪದ್ಧತಿಗಳನ್ನು ಕೈಬಿಡಲಾಗಿದೆ. ಮೈಸೂರಿನ ಲಾಡರು ರೆಡ್ಡಿ ಜನಾಂಗದವರ ಸಹಕಾರದಿಂದ ಮೈಸೂರಿನ ಚಾಮುಂಡಿ ಬೆಟ್ಟದಲ್ಲಿ ದೇವಾಲಯದ ಬಳಿ ವಿಶ್ರಾಂತಿ ಧಾಮವೊಂದನ್ನು ನಿರ್ಮಿಸಿದ್ದಾರೆ. ವ್ಯಾಪಾರ, ವಹಿವಾಟುಗಳ ಕ್ಷೇತ್ರದಲ್ಲಿ ಮೈಸೂರಿನ ಲಾಡರು ಸಾಕಷ್ಟು ಮುಂದಿದ್ದಾರೆ. ವಿದ್ಯುತ್ ಉಪಕರಣಗಳ ಮಳಿಗೆ, ಮಸಾಲೆ ಹಾಗೂ ಸಾಂಬಾರ ವಸ್ತುಗಳ ತಯಾರಿಕೆ. ದಿನಸಿ ಸಾಮಗ್ರಿ, ಹೋಟೆಲ್ ಉದ್ಯಮ, ಸಣ್ಣ ಕೈಗಾರಿಕಾ ಕ್ಷೇತ್ರ ಹೀಗೆ ಹಲವು ಹತ್ತು ವಿಭಾಗಗಳಲ್ಲಿ ನಿಷ್ಣಾತರೆನಿಸಿದ್ದಾರೆ.

**ಮರಾಠ ಕ್ಷತ್ರಿಯ ಲಾಡರು**

ಕ್ಷತ್ರಿಯ ಲಾಡರ ಒಂದು ಪ್ರಮುಖ ಆಚರಣೆಯೆಂದರೆ ಶಕ್ತಿ ದೇವತೆಯ ಪೂಜಾ ಆಚರಣೆ ಹಾಗೂ ಪ್ರಾಣಿ ಬಲಿ. ಆಶಾಢಮಾಸ ಅಥವಾ ಶೂನ್ಯಮಾಸದಲ್ಲಿ ಶುಕ್ರವಾರ ಅಥವಾ ಮಂಗಳವಾರದಂದು ಈ ಆಚರಣೆ ಸೋಮವಂಶೀಯರಲ್ಲಿ ವೈಷ್ಣವ ಹಾಗೂ ಶೈವ ಎರಡೂ ಪಂಥಗಳಿವೆ. ಎಲ್ಲಾ ದೇವರುಗಳನ್ನು ಇವರು ಪೂಜಿಸುತ್ತಾರೆ. ಇತರ ಕ್ಷತ್ರಿಯರಲ್ಲಿರುವಂತೆಯೇ ಇವರಲ್ಲೂ ಕೆಲವೆಡೆ ರಾತ್ರಿ ವಿವಾಹ ಪದ್ಧತಿ ಸಹ ಇದೆ. ಬೆಂಗಳೂರಿನಲ್ಲಿರುವ ಇವರ ಸಮಾಜದ ಸಂಘವು ಶಾಲಾ, ಕಾಲೇಜುಗಳನ್ನು ಸ್ಥಾಪಿಸಿ, ಪ್ರಗತಿಯತ್ತ ಸಾಗಿದೆ.

**ಸೋಮವಂಶ ಕ್ಷತ್ರಿಯ ಲಾಡರು**

ಸೋಮವಂಶ ಕ್ಷತ್ರಿಯರಲ್ಲಿನ ಒಂದು ಸಾಮಾಜಿಕ ಘಟನೆ ಹೇಗೆ ಜನಾಂಗವನ್ನು ಇಬ್ಭಾಗ ಮಾಡಿತು ಎಂಬುದನ್ನು ಈ ಕೆಳಕಂಡ ಪ್ರಸಂಗದಿಂದ ತಿಳಿಯಬಹುದು.

ಅರಸಿದ್ಧಿ ಎಂಬುವನು ಸೋಮವಂಶ ಕ್ಷತ್ರಿಯ ಜನಾಂಗದ ಒಬ್ಬ ಬಲಶಾಲಿ ಸರದಾರ. ಈತನು ಆದಿಲ್‌ಷಾಹಿ ದರಬಾರಿನಲ್ಲಿ ಸರದಾರನಾಗಿದ್ದ. ಸೋಮವಂಶದ ಮನೆತನದವರೊಬ್ಬರ ಮರಣವಾದಾಗ, ಅವರ ಶವ ಸಂಸ್ಕಾರಕ್ಕೆ ಈ ಸರದಾರ ಕುದುರೆಯನ್ನೇರಿ ಸ್ಮಶಾನಕ್ಕೆ ಹೋಗಿ ಕೆಳಗಿಳಿಯದೆಯೇ, ಸಂಸ್ಕಾರದಲ್ಲಿ ಭಾಗವಹಿಸಿ

ಹಿಂತಿರುಗಿದ. ಇದರಿಂದ ಜನಾಂಗದ ಇತರರೆಲ್ಲ ಕೋಪಗೊಂಡರು. ಈತ ತನ್ನ ಚಾಳಿಯನ್ನು ಬಿಡದೆ ಮುಂದುವರೆಸಿದ. ಇದರಿಂದ ಜನಾಂಗದ ಇತರರೆಲ್ಲ ಆ ಸರದಾರನ ವಂಶದವರ ಶವಸಂಸ್ಕಾರಕ್ಕೆ ಕುದುರೆಯನ್ನೇರಿ ಹೋಗಿ ಸಂಸ್ಕಾರದಲ್ಲಿ ಭಾಗವಹಿಸಿ ಹಿಂತಿರುಗಿದರು. ಅಷ್ಟೇ ಅಲ್ಲದೆ ಅರಸಿದ್ದಿಯ ಸಂಬಂಧಿಕರ ಎಂಟು ಮನೆಯವರನ್ನೂ ಜನಾಂಗದಿಂದ ಬಹಿಷ್ಕಾರ ಹಾಕಿದರು. ಈ ಬಹಿಷ್ಕಾರ ಬಹಳ ಕಾಲ ಮುಂದುವರೆಯಿತು.

ಜನಾಂಗದ ಹಿರಿಯರೆಲ್ಲ ಇದರ ಬಗ್ಗೆ ಚಿಂತಿಸತೊಡಗಿದರು. ಇದು ಹೀಗೇ ಮುಂದುವರೆದರೆ ಸಮಾಜದ ಒಡಕು ದೊಡ್ಡದಾಗುವ ಚಿಂತೆ ಅವರನ್ನಾವರಿಸಿತು. ಕಡೆಗೊಮ್ಮೆ ಡಿ.ವೈ. ಪವಾರ್ ಎಂಬ ಜನಾಂಗದ ಒಬ್ಬ ವ್ಯಕ್ತಿಯ ವಿವಾಹವು ಬುರ್‌ಬುರೆ ಮನೆತನದಲ್ಲಿ ನಿಶ್ಚಯವಾಯಿತು. ಹೀಗೆ ಎರಡೂ ಗುಂಪುಗಳು ಒಂದಾಗುವ ಅವಕಾಶ ಬಂದೊದಗಿತು. ಕಡೆಗೆ ಒಂದು ಸಮಾರಂಭ ಏರ್ಪಡಿಸಿ, ಅರಸಿದ್ಧಿ ಮನೆತನದವರ ಕಡೆಯಿಂದ ಬಂದ ಅಹವಾಲನ್ನು ಒಪ್ಪಿ ಸ್ವೀಕರಿಸಿ ಎರಡೂ ಗುಂಪುಗಳನ್ನು ಒಂದುಗೂಡಿಸಲಾಯಿತು.

ಪಟ್ಟೇಗಾರರಲ್ಲಿ ಇದ್ದ ಮತ್ತೊಂದು ತೊಡಕೆಂದರೆ 'ಇಸ್ತಾರ್ತಿ' ಎಂಬ ಪದ್ಧತಿ. ಇದರಂತೆ ಗಂಡು ಇವರ ಜನಾಂಗದ್ದಾದರೆ, ಹೆಣ್ಣು ಬೇರೆ ಜಾತಿಯದಾಗಿ, ಅವರಿಬ್ಬರ ಅಂತರ್ಜಾತೀಯ ವಿವಾಹ. ಇದನ್ನು ಕುಲಬಾಂಧವರನೇಕರು ತಿರಸ್ಕರಿಸಿದರು. ಇಂತಹ ಅಂತರ್ಜಾತೀಯ ವಿವಾಹಗಳು ಜನಾಂಗದಲ್ಲಿ ಹೆಚ್ಚಾಗತೊಡಗಿದಾಗ, ಕ್ರಿ.ಶ. ೧೯೭೬ರಲ್ಲಿ ಹುಬ್ಬಳ್ಳಿಯಲ್ಲಿ ಸಮಾಜದ ಎಲ್ಲಾ ಬಂಧುಗಳು ಸೇರಿ ಒಂದು ಸಮಾವೇಶ ನಡೆಸಿದರು. ಅಲ್ಲಿ ಸಮಾಲೋಚನೆ ನಡೆಸಿ, ಇಂತಹ ಅಂತರ್ಜಾತೀಯ ವಿವಾಹಗಳ ಬಹಿಷ್ಕಾರ ಹಿಂತೆಗೆದುಕೊಳ್ಳಲಾಯಿತು.

ಸೋಮವಂಶ ಕ್ಷತ್ರಿಯರು ಹೆಚ್ಚಿನ ಶಕ್ತಿದೇವತೆಗಳನ್ನು ಆರಾಧಿಸುತ್ತಾರೆ. ರೇಣುಕಾಮಾತೆ, ಸವದತ್ತಿಯ ಎಲ್ಲಮ್ಮತಾಯಿ, ಕೊಲ್ಲಾಪುರದ ಲಕ್ಷ್ಮಿದೇವಿ, ತುಳಜಾಪುರದ ಅಂಬಾಭವಾನಿ, ದುರ್ಗೆ, ಚಾಮುಂಡೇಶ್ವರಿ, ಆದಿಶಕ್ತಿ ರೂಪಗಳನ್ನು ಪೂಜಿಸುತ್ತಾರೆ. ದೇವಿಯನ್ನು ಸಂತೃಪ್ತಿಪಡಿಸಲು ಬಲಿ ನೀಡುವ ಪದ್ಧತಿಯೂ ಇದೆ. ಮಿಕ್ಕ ಎಲ್ಲಾ ಪದ್ಧತಿಗಳೂ ಹೆಚ್ಚು ಕಡಿಮೆ ಇತರ ಕ್ಷತ್ರಿಯ ಪಂಗಡಗಳಲ್ಲಿರುವಂತೆಯೇ ಇದೆ.

## ಲಾಡರಲ್ಲದ ಲಾಡರು/ಚೌಹಾಣ್ ಲಾಡ್ :

ಈ ಮುಂಚೆಯೇ ಚರ್ಚಿಸಿರುವಂತೆ ಲಾಠದೇಶವು ಅತಿ ಪ್ರಾಚೀನವಾದುದು. ಲಾಠದೇಶದಲ್ಲಿ ವಾಸಿಸುತ್ತಿದ್ದವರೆಲ್ಲಾ 'ಲಾಡ' ಎಂದು ಕರೆಯಲ್ಪಡುತ್ತಿದ್ದರು. ತಮಿಳುನಾಡಿನಲ್ಲಿ ವಾಸಿಸುವವನು ತಮಿಳ, ಮಲೆಯಾಳದಲ್ಲಿ ವಾಸಿಸುವವ ಮಲೆಯಾಳಿ, ಪಂಜಾಬ್‌ನವರು ಪಂಜಾಬಿ, ಬಂಗಾಳದವನು ಬಂಗಾಳಿ, ಅಂತೆಯೇ ಲಾಠದೇಶದವನು 'ಲಾಡ' ನೆನಿಸಿದ್ದಾನೆ. ಈ ಲಾಠದೇಶದಲ್ಲೂ ಚತುರ್ವರ್ಣಗಳಿದ್ದವು. ಮಹಾವೀರನ ಆಗಮನದ ನಂತರ ಲಾಠದೇಶದಲ್ಲೂ ಜೈನಧರ್ಮಕ್ಕೆ ಮತಾಂತರಗಳಾದವು. ರಾಷ್ಟ್ರಕೂಟ

ದೊರೆಗಳು ಲಾಠರಾಜ್ಯ ಹಾಗೂ ಮಹಾರಾಷ್ಟ್ರಗಳನ್ನು ಆಳುತ್ತಿದ್ದಾಗ ಜೈನಧರ್ಮ ಹರಡಲು ಪ್ರಾಮುಖ್ಯತೆ ನೀಡಿದರು. ಹೀಗಿದ್ದಾಗ, ಈಗಿನ ಸಾಂಗ್ಲಿಯಿಂದ ಸತಾರಾದವರೆಗ ಸಣ್ಣಪುಟ್ಟ ಸಾವಂತರು ಆಳುತ್ತಿದ್ದರು. ಕರಾಡ್ ಪ್ರದೇಶ ಜೈನಲಾಡ ಪ್ರಮುಖನಿಂದ ಆಳಲ್ಪಡುತ್ತಿತ್ತು. ಅನೇಕ ಜೈನ ಬಸದಿಗಳ ನಿರ್ಮಾಣ, ಗ್ರಂಥಾಲಯಗಳು, ಶುಶ್ರೂಷಾಲಯಗಳು ಸ್ಥಾಪಿತವಾಗಿದ್ದವು. ಜೈನ ಮಂದಿರಗಳಲ್ಲಿ ವೈಭವದ ಪೂಜೆ, ಆಚರಣೆಗಳು ನಡೆಯುತ್ತಿದ್ದವು. ಜೈನ ಮಂದಿರಗಳಲ್ಲಿ ವೈಭವದ ಪೂಜೆ, ಆಚರಣೆಗಳು ನಡೆಯುತ್ತಿದ್ದವು. ಜೈನ ಮಠಗಳಲ್ಲಿ ಆಹಾರ, ಔಷಧಿಗಳನ್ನು ಬಡಬಗ್ಗರಿಗೆ ಹಂಚುವ ವ್ಯವಸ್ಥೆ ಇತ್ತು. ಇಂತಹ ಪ್ರಶಾಂತ ಆಡಳಿತದ ಸಮಯದಲ್ಲಿ ಸುಮಾರು ಕ್ರಿ.ಶ. ೧೧೫೮ರಲ್ಲಿ ಈ ಮಹಾರಾಷ್ಟ್ರದ ಕರಾಡ್ ಜೈನ ಪ್ರಾಂತ್ಯದ ಮೇಲೆ ಮರಾಠಾ ಚೌಹಾಣರ ಸೈನ್ಯ ದಾಳಿ ಮಾಡಿತು. ಜೈನಧರ್ಮೀಯರು ಅಹಿಂಸಾ ಪಾಲನೆ ಮಾಡುತ್ತಿದ್ದರಿಂದ, ಈ ದಾಳಿಯಲ್ಲಿ ಲಾಡಜೈನರ ಮಾರಣ ಹೋಮವಾಯಿತು. ಹೆಂಗಸರು ಮಕ್ಕಳಗಳನ್ನು ಸಹ ಚೌಹಾಣ ಸೈನಿಕರು ನಿರ್ದಯವಾಗಿ ಕೊಂದು ಹಾಕಿ ರಾಜ್ಯ ಆಕ್ರಮಿಸಿದರು. ಕಡೆಗೆ ಪ್ರಾಂತ್ಯದ ಒಡೆಯನ ವಿಧವೆ ಲಾಡೂಬಾಯಿ ಮಾತ್ರ ಬದುಕುಳಿದಿದ್ದಳು. ಚೌಹಾಣ ಸರದಾರರು ಹಿರಿಯಳಾದ ಸರದಾರನ ಹೆಂಡತಿಯ ಬಳಿ ಹೋಗಿ ಆದ ಘಟನೆಗೆ ಕ್ಷಮೆ ಕೇಳಿದರು. ಲಾಡೂಬಾಯಿ ಇಚ್ಛೆಪಟ್ಟಲ್ಲಿ ಆಕೆ ಸ್ವತಂತ್ರಳೆಂದೂ ಎಲ್ಲಿಗೆ ಬೇಕಾದರೂ ಹೊರಟು ಹೋಗಬಹುದೆಂದು ತಿಳಿಸಿದರು. **ಲಾಡಬಾಯಿಯು ತನ್ನವರನ್ನೆಲ್ಲಾ ಕಳೆದುಕೊಂಡದ್ದಕ್ಕಾಗಿ ದುಃಖಿಸುತ್ತಾ, ತನ್ನ ವಂಶ ತನ್ನ ತಲೆಗೆ ಕೊನೆಯಾಗಬಾರದೆಂದೂ, ಆದಕಾರಣ ಇನ್ನು ಮುಂದೆ ಈ ಚೌಹಾಣ ಮರಾಠರು ತಮ್ಮ ಮುಂದಿನ ಪೀಳಿಗೆಗೆ ತಮ್ಮ ಹೆಸರಿನ ಜೊತೆ 'ಲಾಡ' ಎಂಬ ಅಡ್ಡ ಹೆಸರನ್ನು ಸೇರಿಸಿಕೊಳ್ಳಬೇಕೆಂದು ಕೇಳಿಕೊಂಡಳು. ಸರದಾರನ ಮನಕರಗಿ, ಇನ್ನು ಮುಂದೆ ತಮ್ಮ ವಂಶಜರೆಲ್ಲ 'ಲಾಡ' ಹೆಸರನ್ನು ಹೊಂದುವುದಾಗಿ ವಾಗ್ದಾನ ಮಾಡಿದನು.**

ಚೌಹಾಣ ಮರಾಠ ಸರದಾರನು ಲಾಡೂಬಾಯಿಗೆ ಕೊಟ್ಟ ಮಾತಿನಂತೆ, ಕ್ರಿ.ಶ. ೧೧೫೮ರ ನಂತರ ಬಂದ ಅಗ್ರೋಜಿ, ಭೈರೋಜಿ, ಹೀರೋಜಿ ಇವರುಗಳು ತಮ್ಮ ಹೆಸರಿನ ಮುಂದೆ 'ಲಾಡ' ಎಂದು ಸೇರಿಸಿಕೊಂಡರು. ತದನಂತರ ನಾನಾಜಿ, ಅವನ ನಾಲ್ಕು ಮಕ್ಕಳು, ಹೀಗೆ ಇಪ್ಪತ್ತೆರಡು ತಲೆಮಾರುಗಳು ಸಾಂಗ್ಲಿ, ಕುಂಡಲ್, ಕರಾಡ್, ವರಾಡ್, ಸತಾರಾ ಮುಂತಾದೆಡೆ ನೆಲೆಸಿ, ಆ ತಲೆಮಾರಿನ ಡಾಕ್ಟರ್ ಸುಧಾಕರ್ ಸತಾರಾದಲ್ಲಿ ವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಬಳಿ ಈ ಇಪ್ಪತ್ತೆರಡು ತಲೆಮಾರಿನ ಹೆಸರುಗಳ ವಂಶವೃಕ್ಷ ಸುರಕ್ಷಿತವಾಗಿದೆ. ಎಲ್ಲಾ ಮರಾಠ ಜನಾಂಗದ ಕ್ಷತ್ರಿಯರಂತೆಯೇ ಇವರ ಆಚಾರ– ವಿಚಾರಗಳೂ ಸಹ ಇವೆ.

### ವಿವಿಧ ಕ್ಷೇತ್ರಗಳಲ್ಲಿ ಲಾಡರ ಖ್ಯಾತಿ :

ಕರ್ನಾಟಕದ ಲಾಡ ಜನಾಂಗದವರು ಅನೇಕ ಕ್ಷೇತ್ರಗಳಲ್ಲಿ ದುಡಿದು ಖ್ಯಾತಿಗಳಿಸಿದ್ದಾರೆ. ವೈದ್ಯಕೀಯ ಕ್ಷೇತ್ರ, ಶಿಕ್ಷಣ, ಚಲನಚಿತ್ರ ಹಾಗೂ ರಂಗಮಂಚದ

ಕಲಾವಿದರು, ಉದ್ಯಮಕ್ಷೇತ್ರ, ಸಾಹಿತ್ಯ, ತಾಂತ್ರಿಕ ಜ್ಞಾನ, ಸಂಗೀತ, ವ್ಯಾಪಾರ, ಹೋಟೆಲ್ ಉದ್ಯಮ ಹೀಗೆ ನಾನಾ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರನ್ನು ಕಾಣಬಹುದಾಗಿದೆ. ರಾಜಕೀಯದಲ್ಲೂ ಪಾರ್ಲಿಮೆಂಟ್‌ನ ರಾಜ್ಯಸಭಾ ಸಂಸ್ಯದ **ಅನಿಲ್‌ಲಾಡ್**, **ಸಂತೋಷಲಾಡ್** ಹೆಸರಿನ ಕರ್ನಾಟಕದ ಶಾಸಕರು, **ಎಸ್.ಎನ್.ಕೃಷ್ಣಯ್ಯ**, **ವಿಶ್ವನಾಥ್ ಬಾಬಣ್ಣಲಾಡ್** ಹಾಗೂ **ಲತಾಕೃಷ್ಣ** ಹೆಸರುವಾಸಿಯಾಗಿದ್ದಾರೆ.



ಸಂಸದ ಶ್ರೀ ಅನಿಲ್‌ಲಾಡ್ ಹಾಗೂ ಲಾಡ ಸಮಾಜದ ಪದಾಧಿಕಾರಿಗಳು

## ಲಾಡರ ಭಾಷೆ ಹಾಗೂ ಸಾಹಿತ್ಯ :

ಲಾಠದೇಶವು ಅತ್ಯಂತ ಪ್ರಾಚೀನ ಸಾಹಿತ್ಯ ಪರಂಪರೆಯನ್ನು ಹೊಂದಿತ್ತು, 'ಲಾಠ'ದ ಭಾಷೆಯನ್ನು 'ಲಾಠಿ' ಎಂದು ಕರೆಯಲಾಗುತ್ತಿತ್ತು, ಇತಿಹಾಸಕಾರ ಹಾಗೂ ಭಾಷಾಶಾಸ್ತ್ರಜ್ಞ ಜ.ಎ.ಗ್ರಿಯರ್‌ಸನ್ ಎಂಬುವನು ಕ್ರಿ.ಶ. ೧೯೧೧ರಲ್ಲಿ ಸಮೀಕ್ಷೆ ನಡೆಸಿದ ಕೃತಿ 'ಲಿಂಗ್ವಿಸ್ಟಿಕ್ ಸರ್ವೆ ಆಫ್ ಇಂಡಿಯಾ (ಭಾಗ-IX) ದಲ್ಲಿ ಬೆರಾರ್‌ನ ಅಚಲಪುರ್ ಪ್ರದೇಶದಲ್ಲಿ ಪ್ರಚಲಿತವಿದ್ದ 'ಲಾಡಿ' ಭಾಷೆಯ ಒಂದು ನಮೂನೆಯನ್ನು ಪ್ರಸ್ತುತ ಪಡಿಸುತ್ತಾ ಸುಮಾರು ಮೂವತ್ತೈದು ಸಾವಿರ ಜನ ಅಂದು ಈ ಭಾಷೆ ಮಾತನಾಡುತ್ತಿದ್ದ ಪ್ರದೇಶವನ್ನು ಗುರ್ತಿಸಿ ಆ ಭಾಷೆಯಲ್ಲಿ ಒಂದು ಕಥೆಯನ್ನು ಪರಾಮರ್ಶಿಸಿದ್ದಾರೆ. ಗುಜರಾತಿನ ಚೌರಾಸಿ ಪ್ರದೇಶದಲ್ಲಿ ಇದರ ಹುಟ್ಟು ಹಾಗೂ ಬೆಳವಣಿಗೆ ಕಂಡಿದ್ದರಿಂದ 'ಲಾಠಿ'ಯನ್ನು 'ಚೌರಾಸಿ' ಎಂದೂ ಕರೆಯುತ್ತಾರೆ.

**'ಲಾಠಿ' ಭಾಷೆಯನ್ನು ಬರೆಯಲು ದೇವನಾಗರಿ ಲಿಪಿ ಬಳಸಲಾಗುತ್ತಿತ್ತು, ದೇವನಾಗರಿ ಲಿಪಿ ಗುಜರಾತಿನಲ್ಲಿ ಜನ್ಮತಾಳಿತು. ಶ್ರೀ ನಂದುಲಾಲ್‌ಡೇ ರಚಿಸಿರುವ 'ದಿ**

**ಜಿಯೋಗ್ರಾಫಿಕಲ್ ಡಿಕ್ಷನರಿ ಆಫ್ ಏನ್‌ಷಿಯಂಟ್ ಅಂಡ್ ಮೀಡಿಯಲ್ ಇಂಡಿಯಾ' ಎಂಬ ಕೃಷಿ (ಓರಿಯಂಟ್ ಬುಕ್ ೧೯೭೧ರ ಆವೃತಿ, ಪುಟ ೧೧೪) ಯಲ್ಲಿ ಹೇಳಿರುವಂತೆ, ''ಲಾಠದ ನಗರ ಬ್ರಾಹ್ಮಣರು ನಾಗರೀ ರೂಪವನ್ನು ಕಂಡುಹಿಡಿದರು, ದೇವನಾಗರಿಯು ಬ್ರಾಹ್ಮೀ ಲಿಪಿಯಿಂದ ಹುಟ್ಟಿತು.''** ಇದಲ್ಲದೆ, ವಾಗ್ಭಟಾಲಂಕಾರದ ಮೇಲೆ ಸಿಂಹದೇವಗಣಿಯ ವಿವರಣೆಯಲ್ಲಿ ಹೇಳಿರುವಂತೆ, ''ಲಾಠಿ ಭಾಷಯು ವಿನೋದ ಹಾಗೂ ಲಾಸ್ಯಗಳಿಗೆ ಹೆಸರಾಗಿದೆ''. (ಕೆ.ಎಂ. ಮುನ್ಷಿಯವರ 'ಗುಜರಾತ್ ಹಾಗೂ ಅದರ ಸಾಹಿತ್ಯ' ಎಂಬ ಕೃತಿ ಪುಟ ೩೨) ಅದೇ ಕೃತಿಯಲ್ಲಿ ಹೇಳಿರುವಂತೆ ''ಗೌಡೀಯಾಃ ಸಂಸ್ಕೃತಸ್ಥಾ ಪರಿಚಿತರುಚಯಾ ಪ್ರಾಕೃತೆ ಲಾಠದೇಶ್ಯಾಃ''.

ಡಿ.ಸಿ. ಸರ್ಕಾರ್ ರವರು ತಮ್ಮ ಕೃತಿ 'ಪ್ರಾಕೃತಿ ಭಾಷೆಯ ವ್ಯಾಕರಣ' ಎಂಬ ಕೃತಿಯಲ್ಲಿ ತಿಳಿಸಿರುವಂತೆ – ***''ಸಂಶೋಧನೆಯ ಪ್ರಮಾಣದಲ್ಲಿ ಲಾಠಿ ಭಾಷೆಯ ತೌಲನಿಕ ದೃಷ್ಟಿ ಹೆಚ್ಚೆನ್ನಬಹುದು.''***

ಕವಿ ರಾಜಶೇಖರ ಹಾಗೂ ಸೊಡ್ಡಾಲರು ಲಾಠಪ್ರದೇಶದ ಅತ್ಯಂತ ಪ್ರಸಿದ್ಧ ಕವಿಗಳೆನಿಸಿದ್ದರು. 'ಗುರ್ಜರ ದೇಶದ ವೈಭವ'ವೆಂಬ ಕೆ.ಎಮ್.ಮುನ್ಷಿಯವರ ಕೃತಿಯಲ್ಲಿ ತಿಳಿಸಿರುವಂತೆ – **''ಲಾಠ ಪ್ರದೇಶದ ಸ್ತ್ರೀಯರು ಕೇವಲ ಲಾವಣ್ಯವತಿಯರಷ್ಟೇ ಅಲ್ಲದೆ ಸುಮಧುರ ಭಾಷಿಣಿಯರೂ ಆಗಿದ್ದರು''** ಎನ್ನುತ್ತಾರೆ. ಲಾಠದೇಶದಲ್ಲಿ ಜನ್ಮತಾಳಿದ ಬೌದ್ಧ ಭಿಕ್ಷು ಧರ್ಮಗುಪ್ತನು ಚೀಣಾ ಪ್ರವಾಸ ಕೈಗೊಂಡು ಧರ್ಮ ಹಾಗೂ ತತ್ವಜ್ಞನ ಪ್ರಸಾರ ಮಾಡಿ, ಚೀಣಾದ ಹಾಗೂ ಭಾರತದ ಭೌಗೋಳಿಕ ವಿವರಣೆಗಳ್ಳುಳ್ಳ ಪ್ರವಾಸ ಕಥನ ರಚಿಸಿದ. ಆದರೆ, ದುರಾದೃಷ್ಟವಶಾತ್ ಆ ಕೃತಿ ಲಭ್ಯವಿಲ್ಲ. (ಭಾರತೀಯರ ಸಂಸ್ಕೃತಿ ಹಾಗೂ ಇತಿಹಾಸ' ಭಾ–III ಪುಟ ೬೦೧) **''ಝೂರಮೆಂಚಗೊ ಎಂಬ ತತ್ವಜ್ಞಾನಿ ಭರೂಚದಲ್ಲಿ ಹುಟ್ಟಿದ. ಧರ್ಮ ಪ್ರಚಾರಕ್ಕಾಗಿ ಲಾಠದೇಶದಿಂದ ಗ್ರೀಸ್ ದೇಶಕ್ಕೆ ಪ್ರವಾಸ ಮಾಡಿ ಅಲ್ಲಿಯೇ ಮರಣಹೊಂದಿದ.''** (ಪುರಾಣೋಮಾ ಗುಜರಾತ್ – ಕೆ.ಎಂ. ಮುನ್ಷಿ), ಪುಟ ೧೧೮). 'ಲಾಠ್ಯಾಯನ' ಎಂಬ ಸಂಸ್ಕೃತ, ಸೂತ್ರ ರೂಪದ ಗ್ರಂಥವು, ಲಾಠದೇಶದ ಅದರಲ್ಲೂ ಮುಖ್ಯವಾಗಿ ಲಾಡ ಬ್ರಾಹ್ಮಣರ ಇತಿಹಾಸ ತಿಳಿಸುವ ಆಧಾರ ಗ್ರಂಥವಾಗಿದೆ.

ಕ್ರಿ.ಶ. ೧೮೮೯ ರಲ್ಲಿ ರೆವರೆಂಡ್ ಜಿ. ಮೆಕಾಲಿಸ್ಟರ್ ಎಂಬ ಭಾಷಾಶಾಸ್ತ್ರಜ್ಞನು ಸಂಶೋಧನೆ ನಡೆಸಿ ಚೌರಾಸಿ ಭಾಷೆಯನ್ನು ಮಾತನಾಡುತ್ತಿದ್ದವರ ಸಂದರ್ಶನ ನಡೆಸಿ, ಅವರ ಭಾಷೆಯ ಒಂದು ನಮೂನೆಯನ್ನು ಪ್ರಕಟಿಸಿದ್ದಾನೆ. (ಇದೇ ಕೃತಿಕಾರನ 'ಲಿಂಗ್ವಿಸ್ಟಿಕ್ ಫೀಚರ್ಸ್ ಆಫ್ ಚೌರಾಸಿ ಆರ್ ಲಾಡಿ' ಎಂಬ ಪುಸ್ತಕ ನೋಡಿ) ಅವನ ಪ್ರಕಾರ ಚೌರಾಸಿಯು ಇಂಡೊ–ಆರ್ಯನ್ ಕುಟುಂಬದ ಒಂದು ಶಾಖೆಯಾಗಿದೆ. ಈ ಭಾಷೆಯು ಮರಾಠಿ, ಗುಜರಾತಿ ಹಾಗೂ ರಾಜಾಸ್ತಾನಿ ಭಾಷೆಗಳ ಮಿಶ್ರಣವಾಗಿದೆ.

ಮಹಾರಾಷ್ಟ್ರದ ಪಿ.ಎಲ್. ವೈದ್ಯರವರ ೧೯೩೧ ರಲ್ಲಿ ಪ್ರಕಟಿಸಿರುವ **'ಜಸಹರು**

ಚರಿಯು' ಎಂಬ ಪ್ರಾಚೀನ ಕೃತಿ ಗಮನಸೆಳೆಯುತ್ತದೆ. ಈ ಕೃತಿಯನ್ನು ಸಂಗ್ರಹಿಸಿದ ಶ್ರೀ ವೈದ್ಯರವರು ತಿಳಿಸುವಂತೆ – ***''ಜಸಹರು ಚರಿಯು ಕೃತಿಯ ಹಸ್ತಪ್ರತಿ ಸೂರತ್‌ನಲ್ಲಿ ರಚಿತಗೊಂಡು ಬಿರಾರ್‌ನ ಕಾರಂಜಾಕ್ಕೆ ರವಾನಿಸಲ್ಪಟ್ಟಿತು''***. ಸಂಪಾದಕರು ಈ ಕೃತಿಯಲ್ಲಿನ ಭಾಷೆಯ ಬಗ್ಗೆ ಏನನ್ನೂ ಹೇಳಿಲ್ಲ. ಆದರೆ, ಅದು ಅಪಭ್ರಂಶವೆಂಬುದು ಸರ್ವವಿಧಿತ. ಲಾಡಕಾರಂಜಾದಲ್ಲಿರುವ ಪದ್ಮಾವತಿ ಬಸದಿಯಲ್ಲಿನ 'ಪಂಚಮೇರು ಕೃತಿ'ಯಲ್ಲಿನ ನಂದೀಶ್ವರ ಪೂಜಾವಿಧಾನದಲ್ಲಿ ವಿವರಿಸಿರುವಂತೆ ***''ಭಗವಂತನ ಸ್ತುತಿ ಮಾಡಬೇಕಾದರೆ ಚೌರಾಸಿಯಲ್ಲಿ ಮಾಡು, ಪುಣ್ಯಪ್ರದ''*** ಎಂಬುದಾಗಿ ತಿಳಿಸಲಾಗಿದೆ.

ಲಿಪಿ ಇಲ್ಲದೆ ಚೌರಾಸಿ ಭಾಷೆ ಸೊರಗಿದೆ. ಇತ್ತೀಚಿನ ದಿನಗಳಲ್ಲಿ ಈ ಭಾಷೆ ನಶಿಸಿ ಹೋಗುತ್ತಿದೆ. ಗುಜರಾತಿನಲ್ಲಿ ಹುಟ್ಟಿದ ಈ ಭಾಷೆ, ಅಲ್ಲೇ ಇದಕ್ಕೆ ಸ್ಥಾನವಿಲ್ಲವಾಗಿದೆ. ಗುಜರಾತಿಯ ಪ್ರಾಬಲ್ಯದಲ್ಲಿ ಅಲ್ಲಿನ ಲಾಡರು ಚೌರಾಸಿಯನ್ನು ಸಂಪೂರ್ಣ ಮರೆತಿದ್ದಾರೆ. ಮಹಾರಾಷ್ಟ್ರದಲ್ಲೂ ಮರಾಠಿ ಭಾಷೆಯ ಪ್ರಾಬಲ್ಯದಿಂದ ಚೌರಾಸಿ ಮಾಯವಾಗಿದೆ. ಕರ್ನಾಟಕದಲ್ಲಿ ಮಾತ್ರ ಈ ಭಾಷೆ ಜೀವಂತವಾಗಿದೆ. ಆದರೆ ಇಂದಿನ ಪೀಳಿಗೆ ತಮ್ಮ ಈ ಪರಂಪರಾನುಗತ ಭಾಷೆಯನ್ನು ಮಾತನಾಡಲು ಸಂಕೋಚಪಟ್ಟುಕೊಂಡು ಅಲಕ್ಷ್ಯ ಮಾಡುತ್ತಿದ್ದಾರೆ. ಇದು ಹೀಗಯೇ ಮುಂದುವರೆದಲ್ಲಿ ಇಲ್ಲೂ ಈ ಭಾಷೆ ಕಣ್ಮರೆಯಾಗುವ ದಿನಗಳು ದೂರವಿಲ್ಲ. ಲಾಡ ಬಂಧುಗಳು ತಮ್ಮ ಮಾತೃ ಭಾಷೆಯನ್ನು ಮಾತನಾಡಲು ನಾಚಿಕೆಪಟ್ಟುಕೊಳ್ಳಬೇಕಾಗಿಲ್ಲ. ಚೌರಾಸಿ ಭಾಷೆಯನ್ನು ಉಳಿಸಿ, ತಮ್ಮ ಮುಂದಿನ ಪೀಳಿಗೆಗಾಗಿ ಅದನ್ನು ಬೆಳೆಸಿದಲ್ಲಿ ಮಾತ್ರ ಈ ಭಾಷೆ ಉಳಿಯಬಲ್ಲದು.



**ಕ್ಷತ್ರಿಯ ಮರಾಠಾ ಲಾಡರಲ್ಲಿ ವಿವಾಹ ಪದ್ಧತಿ**

# ಲಾಠ ದೇಶ ಹಾಗೂ ಅದರ ಭಾಷೆ ಲಾಠಿ

ಲಾಠ ದೇಶದಲ್ಲಿ 'ಲಾಠಿ' ಎಂಬುದು ಲಾಕ್ಷಣಿಕ ಭಾಷಾ ಶಾಸ್ರ. ಇದು 'ಲಾಠಿರೀತಿ' ಎಂದೇ ಪ್ರಖ್ಯಾತವಾಗಿತ್ತು. ಅಂದಿನ ಸಾಹಿತ್ಯದಲ್ಲಿ ಲಾಠಿಯ ಬಳಕೆ ಹಾಸ್ಯ ಲಾಸ್ಯಗಳಿಗೂ ಪ್ರಸಿದ್ಧಿಯಾಗಿತ್ತು. ಅಂದಿನ ಜೈನ ಕಾವ್ಯಗಳಲ್ಲಿ ಲಾಠಿಯ ಬಳಕೆ ಯಥೇಚ್ಛವಾಗಿ ಕಾಣಸಿಗುತ್ತದೆ. ಲಾಠಿಯಿಂದ ಅಪಭ್ರಂಶರೂಪದಲ್ಲಿ ಜನಿಸಿದ ಉಪಭಾಷೆಯನ್ನು ಲಾಡಿ ಅಥವಾ ಚೌರಾಸಿ ಎಂದು ಕರೆಯುತ್ತಾರೆ. ಜಿ.ಎ. ಗ್ರಿಯರ್ ಸನ್ ಮಹಾಶಯ ಲಾಡಿ ಬಾಷೆಯ ಬಗ್ಗೆ ಹಾಗೂ ಅದನ್ನು ಮಾತನಾಡುವ ಪ್ರದೇಶಗಳನ್ನು ತನ್ನ ಕೃತಿ, ಲಿಂಗ್ ವಿಸ್ಟಿಕ್ ಸರ್ವೆ ಆಫ್ ಇಂಡಿಯಾದಲ್ಲಿ ಗುರುತಿಸಿದ್ದಾನೆ. ರೆವರೆಂಡ ಮೆಕಾಲಿಸ್ಟರ್ ಸಹ ಲಾಡಿ ಅಥವಾ ಚೌರಾಸಿ ಭಾಷೆಯ ನಮೂನೆಯನ್ನು ತನ್ನ ಕೃತಿಯಲ್ಲಿ ಪ್ರಸ್ತುತ ಪಡಿಸಿದ್ದಾನೆ.

## ಕ್ಷತ್ರಿಯ ಲಾಡರ ಸಾಹಿತ್ಯ – ಚೌರಾಸಿ ಭಾಷೆ

ಚೌರಾಸಿ ಅಥವಾ ಲಾಡಿ ಎಂದು ಕರೆಯಲ್ಪಡುವ ಗುಜರಾತೀ ಮಿಶ್ರಿತ ಮರಾಠಿ ಭಾಷೆಯನ್ನು ಮಾತನಾಡುವ ಲಾಡರು ತಮ್ಮ ಆಡುಮಾತಿನ ಬಗೆಗಾಗಲೀ ವಾಕ್‌ರೂಪದ ಅಭಿದ್ಯಾತ್ಯಾತ್ಮಕ ಸಾಹಿತ್ಯದ ಬಗ್ಗೆಯಾಗಲಿ ಇದುವರೆಗೂ ಯಾರೂ ಸಮಗ್ರ ಅಧ್ಯಯನ ನಡೆಸಿದಂತೆ ಕಾಣುವುದಿಲ್ಲ. ಈ ಜನರ ಸಮಗ್ರ ಬದುಕು ಮತ್ತು ಸಂಸ್ಕೃತಿಯನ್ನು ಅಭ್ಯಸಿಸುವ ಪ್ರಯತ್ನ ಇನ್ನೂ ಆಗಬೇಕಾಗಿದೆ. ಸಾಂಪ್ರದಾಯಿಕ ರೀತಿಯಲ್ಲಿ ಬದುಕು ನಡೆಸುವ ಲಾಡರು ಕರ್ನಾಟಕ ಪ್ರವೇಶಿಸಿದ ನಂತರ ಹೈದರಾಲಿ, ಟಿಪ್ಪುಸುಲ್ತಾನ್‌ರ ಬಳಿ ಸೈನಿಕರಾಗಿ ಸೇವೆ ಸಲ್ಲಿಸಿ, ನಂತರ ಮೈಸೂರಿನ ಒಡೆಯರ್ ದೊರೆಗಳ ಬಳಿ ರಾಹುತರಾಗಿದ್ದರು. ಈ ಸಮಯದಲ್ಲಿ ಅವರ ಭಾಷೆಯ ಮೇಲೆ ಹಿಂದೂಸ್ತಾನಿ ಹಾಗೂ ಕನ್ನಡ ಭಾಷೆಗಳ ಪ್ರಭಾವ ಉಂಟಾಗಿರುವುದು ಸ್ಪಷ್ಟವಾಗಿ ಅದರಲ್ಲಿನ ಅನೇಕ ಪದಗಳ ಸೇರ್ಪಡೆ ಸಾಕ್ಷಿಯಾಗಿದೆ. ಅತಿ ಕಡಿಮೆ ಸಂಖ್ಯೆಯಲ್ಲಿ ಮಾತನಾಡುವ ಇವರ ಭಾಷೆ ಚೌರಾಸಿಗೆ ಲಿಪಿ ಇಲ್ಲ.

ಚೌರಾಸಿಯಂತಹ ಅನೇಕ ಉಪಭಾಷೆಗಳು ನಡೆಸಿಹೋಗುತ್ತಿದ್ದರೂ ಕೂಡ, ಚೌರಾಸಿ ಲಾಡರಿಂದ ಇನ್ನೂ ಉಳಿದು ಕೊಂಡಿರುವುದು ಆ ಭಾಷೆ ಮಾತನಾಡುವವರ ಧೃಡ ನಿರ್ಧಾರ ಮತ್ತು ಪರಂಪರೆಯನ್ನು ಉಳಿಸಿ ಬೆಲೆಸುವ ಛಲ ಮುಖ್ಯವಾಗಿದೆ ಎನ್ನಬಹುದು.

ಚೌರಾಸಿ ಭಾಷೆಯಲ್ಲಿನ ಸಾಹಿತ್ಯದ ಕೆಲವು ಪ್ರಕಾರಗಳು ಈ ಕೆಳಕಂಡಂತೆ ಲಭ್ಯವಾಗಿದೆ.

i) ಗಾದೆಗಳು

ii) ಒಗಟುಗಳು

iii) ಸಂಪ್ರದಾಯದ ಹಾಡುಗಳು

iv) ಶಬ್ದಕೋಶ
v) ವ್ಯಾಕರಣ
vi) ಕಥೆಗಳು
vii) ಭಾಷೆಯ ನಮೂನೆ

ಲಾಡರ ಗಾದೆಗಳು, ಒಗಟುಗಳು ಭಾಷೆಗೆ ಒಂದು ಮೆರುಗನ್ನು ನೀಡುತ್ತವೆ. ಅವು ಭಾಷೆಯನ್ನು ಕೇವಲ ಸಮೃದ್ಧಿಗೊಳಿಸುವುದಷ್ಟೇ ಅಲ್ಲದೆ ಲಾಡಜನಾಂಗದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ತಮ್ಮದೇ ಆದ ರೀತಿಯಲ್ಲಿ ಶ್ರೀಮಂತಗೊಳಿಸುತ್ತದೆ. ಪ್ರಸುತ್ತ ಪ್ರಚಲಿತವಾಗಿರುವ ಕೆಲವೊಂದು ಗಾದೆಗಳನ್ನು ಹಾಗೂ ಒಗಟುಗಳನ್ನು ಇಲ್ಲಿ ನೀಡಲಾಗಿದೆ. ಅಂತೆಯೇ ಕೆಲವೊಂದು ಗಾದೆಗಳನ್ನು ಹಾಗೂ ಒಗಟುಗಳನ್ನು ನೀಡಲಾಗಿದ. ಅಂತೆಯೇ ಕೆಲವೊಂದು ಪರಂಪರಾನುಗತವಾಗಿ, ಮದುವೆ, ನಾಮಕರಣ ಹಸೆಗಳ ಸಂದರ್ಭದಲ್ಲಿ ಬಳಕೆಯಲ್ಲಿರುವ ಸಂಪ್ರದಾಯದ ಹಾಡುಗಳನ್ನೂ, ಮಾತೆ ಅಂಬಾಭವಾನಿಯ ಕುರಿತ ಸ್ತುತಿಯನ್ನು ನೀಡಲಾಗಿದೆ.

ಈ ಭಾಷೆ ಉಳಿಯಬಲ್ಲದು.

### i) ಲಾಡಿ ಅಥವಾ ಚೌರಾಸಿಯ ಕೆಲವು ಗಾದೆ ಮಾತುಗಳು :

ಯಾವುದೇ ಭಾಷೆಯಲ್ಲೂ ಗಾದೆಮಾತುಗಳು ಮುಖ್ಯಪಾತ್ರವಹಿಸುತ್ತವೆ. ''ವೇದ ಸುಳ್ಳಾದರೂ ಗಾದೆ ಸುಳ್ಳಾಗದು'' ಎನ್ನುವ ಗಾದೆಯೇ ಇದಕ್ಕೆ ಸಾಕ್ಷಿ. ಗಾದೆಗಳು ಭಾಷೆಯನ್ನು ಶ್ರೀಮಂತಗೊಳಿಸುವುದಷ್ಟೇ ಅಲ್ಲದೆ, ಅವು ಸಾಮಾಜಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ಜೀವಂತವಾಗಿರಿಸುತ್ತವೆ. ಲಾಡರಲ್ಲಿ ಪ್ರಚಲಿತವಿರುವ ಕೆಲವು ಗಾದೆಮಾತುಗಳು ಕೆಳಕಂಡಂತಿವೆ :

೧) ಮಸ್ತ್ಕೈಕೆ ಸಸ್ತೋಕ್ ಕಳಿಯಾಂತ ಗೋಬರ ಜಕೂಸ್ ರ್ಥಸೇ.
(ಅಗ್ಗ ಹಾಗೂ ವಿಪುಲವೆಂದು ಕೊಂಡರೆ ರದ್ದಿಯಂತೆಯೇ ಇರುತ್ತದೆ)

೨) ಅಜ್ಜಾ ಕಮಾಯೆತೆ ಒತ್ತೀ ನಾತೀಕೊ ಲಂಗೋಟೀಕ.
(ಅಜ್ಜ ಗಳಿಸಿದ್ದೆಲ್ಲಾ ಮೊಮ್ಮಗನ ಪುಟಗೋಸಿಗೆ)

೩) ಎಕ್ ದೋಳಾಕ್ ಚುನ್ನಾ, ಎಕ್ ದೋಳಾಕ್ ನೋಣಿ.
(ಒಂದು ಕಣ್ಣಿಗೆ ಸುಣ್ಣ, ಒಂದ್ ಕಣ್ಣಿಗೆ ಬೆಣ್ಣೆ)

೪) ಚೌಳ್ ದಾಳ್ ಲೈರಯಾಂತ ಜ್ಯೆಜಾಗ ನೆಂಟ್ನೇ ಕಯಾಂ.
(ಅಕ್ಕಿ ಬೇಳೆ ತಂದಿದ್ರೆ ಉಂಡ್ಹೋಗೇ ನೆಂಟ ಅಂದ್ರಂತೆ)

೫) ಕಾಶಿಕ್ ಗಯಾಂತ್ಯೆ ಕಾಟ್ ಚುಕ್ಕೇನ್ಯೆ.
(ಕಾಶೀಗ್ ಹೋದ್ರೂ ಕಾಟ ತಪ್ಪಿಲ್ಲ)

೬) ಹಮಿ ಖಾಸ್ತೆಸ್ ಕೊಂಡಾ, ಹಿಟ್ಟುಕ್ ಕುಕ್ರಾ ಪೋಸ್ಯಾಂಜಕ್
ನಾವ್ ತಿನ್ನೋದೇ ಹೊಟ್ಟು : ಹಿಟ್ಟಿಗೆ ನಾಯಿ ಸಾಕಿದ್ರಂತೆ.

೭) ಪುಟ್ಕೋ ಗಾಂಡ್ ರಾಕ್ಲೇಕೆ ಪಾಣೇಕ್ ಊಡ್ಯಾಂಜಕು
(ಮಣ್ಣಿನ ಕುಂಡಿ ಇಟ್ಕೋಂಡು ನೀರಿಗೆ ಹಾರಿದ್ರಂತೆ.)

೮) ಲಂಗೋಟಿ ಕಾಂಯ್ ಘಾಣು ಕಯಾಂತ್ ಹಮೀ ಸೇತೇ ಜಾಗಾ ದೇಕಿ ಕೈಯೋ.
(ಪುಟಗೋಸಿ ಯಾಕೆ ವಾಸನೆ ಅಂದ್ರೆ ನಾನಿರೋ ಸ್ಥಳ ಎಂಥದ್ದು ಅಂತಂತೆ.)

೯) ದೌಡ್ ಜಾಣಾರೀಕ್ ಪಾಂಯ ಹಸೇಪ್ ಥಾಂಬಸ್ ಕಾವ್?
(ಓಡಿಹೋಗುವವಳ ಕಾಲು ಹಸೆಮಣೆ ಮೇಲೆ ನಿಲ್ಲುತ್ತಾ?)

೧೦) ಸೇತೇ ಕಿವಾಡ್ ತೋಡ್ ದೇಯ್ಕೆ ರಾತೋತ್ತಿ ಕುಕ್ರಾದೌಡಾಂಯಾ.
(ಇರೋ ಬಾಗಿಲು ದಾನ ಮಾಡಿ ರಾತ್ರಿ ಎಲ್ಲಾ ನಾಯಿ ಓಡಿಸ್ದಂಗೆ.)

೧೧) ನವ್ರಿ ಮರೀತ್ ಕಾವ್, ನವ್ರಾ ಮರೇತ್‌ಕಾವ್, ಬಾಜಾಕೊ ದುಡ್ಡುಕ್ ಮೋಸನ್ನೆ ಕಯೋ.
(ಮದುವಣಗಿತ್ತಿ ಸತ್ತರೇನು, ಮದುವಣಗೆ ಸತ್ತರೇನು, ವಾದ್ಯದ ದುಡ್ಡಿಗೆ ಮೋಸವಿಲ್ಲ ಅಂದ.)

೧೨) ಹತ್ತೀಕ್ ಬಿಕ್‌ಕೇ ಬಿಲ್ಯೆಕ ದೂದ್ ಲಾಂಯಾ ಜಕು.
(ಆನೆಮಾರಿ ಸಾಕಿದ ಬೆಕ್ಕಿಗೆ ಹಾಲು ಕೊಂಡು ತಂದ ಹಾಗೆ.)

೧೩) ಡುಕ್ಕೂರ್ ಕತ್ತೋ ಬಡೋ ಹುಯೇತ್ಕಾವ್ ಹತ್ತೀ ಹೋಂಗೋ.
(ಹಂದಿ ಎಷ್ಟೆತ್ತರಕ್ ಬೆಳೆದ್ರೂ ಆನೇ ಆದೀತೆ?)

ಗಾದೆ ಮಾತುಗಳಷ್ಟೇ ಅಲ್ಲ, ಲಾಡ ಭಾಷೆಯು ಒಗಟುಗಳಿಂದಲೂ ಶ್ರೀಮಂತವಾಗಿದೆ. ಒಗಟುಗಳು ಬುದ್ಧಿಶಕ್ತಿಯನ್ನು ಚುರುಕುಗೊಳಿಸಿ, ಆತ್ಮವಿಶ್ವಾಸ ಬೆಳೆಸುತ್ತವೆ. ಎಲ್ಲಾ ಭಾಷೆಗಳಲ್ಲಿ ಒಗಟುಗಳಿರುತ್ತವೆ. ಚೌರಾಸಿ ಭಾಷೆಯ ಕೆಲವು ಒಗಟುಗಳನ್ನು ಈ ಕೆಳಗೆ ಕೊಡಲಾಗಿದೆ. ನೀವೂ ಯೋಚಿಸಿ ಉತ್ತರಿಸಿ.

**ii) ಒಗಟುಗಳು :**

೧) ದೇಕ್ನೇಕ್ ನನ್ಹೋಣ, ಮೀಸೀಮ್ ಬಡೋಣ.
೨) ಹಮ್ರೋ ಗಾಂವ್‌ಕೊ ಜವಾನು, ನೆಂಟಾಣೆ ಆವಸ್ತೆ ಅಲ್ಡಾಯ್ಕೆ ಕಸ.
೩) ಚಿಣಿಮಿಣಿ ಕಸ್ತೇ ಚೀಡಿ, ಚಿಂತಾಮಣಿ ಕಸ್ತೇ ತಳು; ಸುಕ್ಕೇತ್ ಚೀಡಿ ಮರ್ರಾಸ್.

* ಲಾಡರು ತಮ್ಮ ಮೂಲವಾದ ನೆಲೆ ಗುಜರಾತನ್ನು ತೊರೆದರೂ ಸಹ ತಮ್ಮ ಮೂಲ ಭಾಷೆಯ ಸಂಬಂಧಗಳನ್ನು ತೊರೆದುಕೊಳ್ಳದೆ ಉಳಿಸಿಕೊಂಡಿರುವುದು, ತಮ್ಮ ಪರಂಪರೆಯ ಆಡುಭಾಷೆಯನ್ನು ಬಿಡದೆ ಇನ್ನೂ ಉಳಿಸಿಕೊಂಡಿರುವುದು ವಿಶೇಷವೇ ಸರಿ.

೪) ಕಾಂಗಯಾಂತ್ಯೆ ಪಾಚೇಸ್ ಆವಸ್.

೫) ಮರೇತೆ ಮಡಾ ಮಾರ್ಕಟ್‌ಮೆ ಬಿಕ್ಕಂಚೇ.

೬) ಎಕ್ಲೋ ಗೋಸಾಯೀಕ್ ಮಾತಾಪ್ ರತ್ತೋ ಟೋಪಿ

೭) ನ್ಹನ್ಹೋ ರಹೇತ್ಯೆ ಘರೊತ್ತಿ ಜಪ್ಪಸ್.

೮) ಪಾಣೆಮ್ ಉಬುಜ್‌ಕೆ ಪಾಣೇ ಥಿಯೇತ್ ಮರಸ್.

೯) ಉಜ್ಯೋ ಮಾಣುಸ್‌ಕ ಕಾಳೋ ಪೇಟಾ.

೧೦) ಜುಟ್ ಸೇ ಭಟ್ಟಾ ನಂವಾ, ಪಾಣೇ ಸೆ ಭೀರೀ ನಂವಾ

೧೧) ಭ್ಯೆರ್ ಹಳೇದ್‌ಕೊ ರಂಗು, ಭಿತ್ತರ್ ರತ್ತೋ, ಒಮ್ಮೋ ಲ್ಯೆತಿ ಕಾಳಾ ಸ್ಯೆನಿಕುಣೆ.

೧೨) ಏಕ್ ಬುಡೀಕ್ ಆಂಗೊತ್ತೀ ಖಜ್ಜಿ.

೧೩) ಜೀಜಿ ಜೋರಂದೇ ದೌಡಸ್, ಭ್ಯೆಣ್ ಲ್ಯೆತೀ ನಿಧಾನ್

೧೪) ಊಡಸ್ ಚೀಡೀ ನಂವಾಂ, ಗಿಲ್ಲಸ್ ರಾಕ್ಷಸ್ ನಂವಾ; ಹಮಿಕೂಣು?

೧೫) ಸನ್ಹೋ ಖಾಂಚ್, ರುಪ್ಪೇ ಭಿರ್‌ಕಾವಂಚ್.

**ಉತ್ತರಗಳು :**

**೧) ಸೀಗಡಿ, (೨) ಕಾಗೆ, (೩) ದೀಪ, (೪) ನೆರಳು, (೫) ಮೀನು, (೬) ಬೆಂಕಿಕಡ್ಡಿ (೭) ತೆಂಗಿನಕಾಯಿ, (೮) ಉಪ್ಪು, (೯) ಬೆಂಕಿಕಡ್ಡಿ (೧೦) ತೆಂಗಿನಕಾಯಿ, (೧೧) ಪರಂಗಿಹಣ್ಣು (೧೨) ಹಾಗಲಕಾಯಿ, (೧೩) ಗಡಿಯಾರ, (೧೪) ವಿಮಾನ, (೧೫) ಹಲಸಿನಹಣ್ಣು**

## iii) ಸಂಪ್ರದಾಯದ ಹಾಡುಗಳು :

ಲಾಡರಲ್ಲಿ ಪ್ರಚಲಿತವಿರುವ ಕೆಲವು ಹಾಡು–ಹಸೆಗಳು ತಾವು ನೆಲೆನಿಂತ ಪರಿಸರದ ಭಾಷೆ ಕನ್ನಡದಲ್ಲಿವೆ. ಇತ್ತೀಚಿನ ದಿನಗಳಲ್ಲಿ ತರುಣರು ಶಿಷ್ಟ ಭಾಷೆಯನ್ನಾಡುತ್ತಾ ತಮ್ಮ ಮನೆಮಾತು ಚೌರಾಸಿಯನ್ನು ಅಲಕ್ಷ್ಯ ಮಾಡಿದ್ದಾರೆ. ತಮ್ಮ ಮನೆಭಾಷೆಯಲ್ಲಿ ಮಾತನಾಡುವುದು ಅನಾಗರೀಕವೆಂದು ತಿಳಿಯುವವರಿದ್ದಾರೆ. ಆದರೂ ಸಹ ಭಾಷೆ ತನ್ನದೇ ಆದ ನೆಲೆಯನ್ನು ಕಂಡುಕೊಂಡಿದೆ. ಮನೆಯಲ್ಲಿ ತಾಯಂದಿರುವ ತಮ್ಮ ಮಕ್ಕಳಿಗೆ ಚೌರಾಸಿಭಾಷೆ ಮಾತನಾಡುವುದನ್ನು ಕ್ರಮಬದ್ಧವಾಗಿ ಅಭ್ಯಾಸಮಾಡಿಸಬೇಕಾಗಿದೆ. ಈ ಭಾಷೆ ಉಳಿಯಬೇಕಾದರೆ ಅವರಿಂದಲೇ ಸಾಧ್ಯ, ಇವರ ಸಂಪ್ರದಾಯದ ಹಾಡುಗಳು ಕೆಲವು ವೈಶಿಷ್ಟ್ಯಗಳನ್ನು ನಿರೂಪಿಸುತ್ತವೆ.

ಕಾರಂಜ್ಯಾತಿ ಆಯಾಂತೇ ಲಾಡುಣೇ ಹಮೀ
ಸೌಧಾಫರ್ ವಂಶುಕಾ ಕ್ಷತ್ರಿಯ ಕುಲಕಾಣೀ।
ಅಂಬಾ ಭವಾನಿ ಮಾಯ್‌ಕಾ ನೇಕ್ರುಣೇ ಹಮೀ
ಬೇಪಾರ್ ಸಾಪಾರ್ ಕರ್ಲೇಕೆ ಜೀವನ್ ಕರ್ನಾರಾ॥
ಕುಂಕೋ ಸಾಮೇಯ್ ಮಾತಾ ಹಮೀ ಬಗಾವ್‌ತಾ ನಯೀ
ಸೀದಾ ಸಾದಾ ರಾಸ್ತಾತೀ ಕಮಾಂಯ್ ಖಾಣಾರಾ॥
ಕಮಾವಸ್ತೇ ಯುವ್ಡೋ ಒವ್ಡೋ ಉಣೋ ಹುಯೇತ್ಯೆ
ದೌಲತ್ ದರ್ಬಾರ್‌ಮಂತೂ ಕೈ ಉಣೋ ನೈ ಹಮೀ॥
ಹಮ್ರಾ ಬಾಯ್ಕೋಣೇ ಸುದ್ದಾ ಫಮ್ಜೋಲ್ ಕರ್ನಾರಾ
ಅಗಲ್ ಬಗಲ್ಲಾಂಕೊ ಜೌಳ್ ಬಡ್ಯೆ ಕೊಚ್ನಾರಾ॥
ಫರ್‌ಮೆ ಪಿತ್ತಳ್ ಸ್ಟೀಲ್ ಪಾತ್ರೇಕ್ ಗತ್‌ನೈ ರಹೇತ್ಯೆ
ಸನ್ನೋರುಪ್ಪೋ ರೇಷಮು ರುಗ್ಡಾ ಹೋಣೋ ಇಂಕ॥
ಕಾರಂಜ್ಯಾತೀ ಆಯಾಂತೇ ಲಾಡುಣೇ ಹಮೀ
ಸೌದಾಫರ್ ವಂಶುಕಾ ಕ್ಷತ್ರಿಯ ಕುಲ್‌ಕಾಣೀ
ಅಂಬಾ ಭವಾನಿ ಮಾಂಯ್‌ಂಕಾ ನೇಕ್ರುಣೇ ಹಮೀ।
ಬೇಪಾರ್ ಸಾಪಾರ್ ಕರ್ಲೇಕೆ ಜೀವನ ಕರ್ನಾರಾ॥
ಕುಂಕೋ ಸಾಮೆಯ್ ಮಾತಾ ಹಮೀ ಬಗಾವ್‌ತಾ ನಯೀ
ರಾಹುತುಣೇ ಕೈಕೆ ನಾವ್ ಕಳಿಯಾಸ್ತಿಣೇ॥
ವಾಚ್–ಲಿಕ್ಯ್ಯಾ ನೈತೆ ಎ ಹಮ್ರಾ ಬಾಯ್ಕೋಣೇ
ದುಸ್ರಾಂಕೆತ್ನೀ ಭಲ್ಲೋ ಭೇಜಾಸೇತಿಣೇ॥
ನಾಕ್ ದೋಳಾವಮ್ ದೇಕ್ಣೇಕೆ ಭಲ್ಲೋ ಸಜ್ರಾ ಸೇ
ಯ್ಹಾಂವ್ಹಾಂ ಏಕ್ ದುಯ್ ಕಾಳಾಪೇಳಾ ಲಾಡುಣೇಯ್ ಸೇ।
ಕಮಾವಸ್ತೇ ಎವ್ಡೊ ಒವ್ಡೋ ಉಣೊ ಹುಯೇತ್ಯೆ
ದೌಲತ್ ಫಮ್‌ಜೋಲ್ ಕರಸ್ತೆಮ್ಮೇ ಉಣೋ ನೈ ಇಣೇ॥
ಸಿಲ್ವರ್ ಸ್ಟೀಲ್ ಪಾತ್ರೇಣೇ ಅನ್ನುಕ್ ನೈತ್ಯೆ
ಸನ್ನೋ ರುಪ್ಪೋ ರೇಷುಮ್ ರುಗ್ಡಾ ಹೇಣೋ ಇಂಕ।

ಉಂಕೊ ಇಂಕೊ ಜಾಳ ಭಲ್ಲೋ ಬಡ್ಯೆ ಕೊಬ್ನಾರಾ
ಮೆಹನತ್ ಕರ್ತ್ಯಾ ಪೇಟ ಭರ್‍ಲ್ಲೇಕ್ ಜೀವನ ಕರ್ನ್ಯಾರಾ ||
ದಾಳ್‌ಕೆಮ್ಬ್ರೀ ಧ್ಯೆಂ ಭಾತ್ ಖಾಲೇಕ್ ಸೇತಿಣೇ
ಕಾಟೀಪ್ಪುರ್ಲ್ಲೋ ಮಚ್ಲೀಕೆಮಟೀ ಘೋಡಣ್ಣೈತಿಣೇ ||

**ಭಟ್ಟೀಕೊ ಶಾಸ್ತರ್:**

ನೇಕ್ರೂಕ್ ಲಾವೋಮ್ಮಾ ನೇಕ್ರೂಕ್ ಪಾಲ್ನಾಮ್ ಘಾಲೋಮ್ಮಾ
ನೇಕ್ರೂ ರಡ್ತೋಸ ಕಾಂಯ್‌ಕಿ ನೇಕ್ರೂ ರಡ್ತೋ ಸೆ–
ಹಾಂಸ್ತೋ ಖೇಲ್ತೋ ಹುತ್ತೇತೆ ಏ ನೇಕ್ರೂ ರಡ್ತೋಸೆ |
ನೇಕ್ರೂಕ್ ಲಾವೋಮ್ಮಾ ದೂದ್ ಫಿವಾಯ್‌ಕೆ ಪಾಲ್ನಾಮ್ ಘಾಲೋಮ್ಮಾ ||
ನಾವ್ ರಾಕೋಮ್ಮಾ ನೇಕ್ರೂಕ್ ನಾವ್ ರಾಕೋಮ್ಮಾ
ಬಡಾಣೆ ಒತ್ತೀ ಜಮ್ಕೀ ಏಕ್ ನಾವ್ ರಾಕೋಮ್ಮಾ |
ಮಂಗ್ಳಾರೆ ಉಬ್ಜೀರ್‍ಧ್ಯೈತ ಮಂಗ್ಳಾ ಕವೋಗ ಒಕ ಮಂಗ್ಳಾ ಕವೋಗ
ಶುಕ್ರಾರ ಉಜ್ಜೀರ್‍ಧ್ಯೈತ ಲಕ್ಷ್ಮು ಕವೋಗ ಒಕ ಲಕ್ಷ್ಮು ಕವೋಗ
ಗುಂಡಕೊ ಭಂಡಾ ಲಾವೋಗ ಪಾಲ್ನಾಕ್ ಶಾಸ್ತರ್ ಕರೋಗ
ಬೀಗಾಣೆ ಆಯಾಂ ದೇಕೋ ಉಂಕ ಭಿತ್ತರಕ್ ಬುಲಾವೋಗ
ಫಿವ್‌ಣೇಕ್ ಪಾನಕ್ ಲಾಕ್ಯಾವೊ | ನೇಕ್ರೂಕ್ ಲಾವೋಮ್ಮ
ನೇಕ್ರೂಕ್ ಪಾಲ್ನಾಮ್ ಘಾಲೋಮ್ಮಾ ||
ತುಮ್ರಾ ಬೀಗಾಂಕ್ ಪುಚ್ಚಮ್ಮಾ ಉಣೆ ಕಾವ್ ನಾಂವ್ ರಾಕಂಚೀ
ನೇಕ್ರೂಕ್ ಕಸಾ ಬುಲಾವಂಚೀ ||
ನಂಜುಂಡಪ್ಪ ಹಮ್ರೋ ಅಜ್ಜಾ ವೈಸ್‌ನಾವ್ ರಾಕಂಚ
ಹಮೀ ವಸಾಸ್ ಬುಲಾವಂಚೀ –
ಕಾಂಯ್ ಕಯಾಂತ್ ಏ ದಾಲ್ಲಾ ಬೇಟಾ ಆಟೂಣ್ ರಾಕ್ಲಿವೋ
ಮಂಗ್ಳಾ, ಲಕ್ಷ್ಮೀ ಒತ್ತೀ ನಾಂವ್ ತುಬ್ರಾ ಬೇಟೀಂಕ
ಓ ನಾವ್ ತುಮ್ರಾ ನೇಕ್ರೂಂಕ
ನಂಜುಂಡಪ್ಪ ನರಸಿಂಹಯ್ಯ ಹಮ್ರಾ ನೇಕ್ರೂಂಕ ||

**ಘರ್ ಭರಾವಸ್ತೇ ಶಾಸ್ತುರು (ಮನೆ ತುಂಬಿಸಿ ಕೊಡುವ ಶಾಸ್ತ್ರದ ಹಾಡು)**

(ಇನ್ನೂ ಯಾಕೆ ಬರಲಿಲ್ಲವ್ವಾ ಹುಬ್ಬಳ್ಳಿಯಂವಾಂ – ಹಾಡಿನ ಧಾಟಿ)

ಎತ್ತಾದಿನ್ ಹಮ್ರೀ ಬೇಟೀ ಆಜ್‌ತಿ ತುಮ್ರೀಣ
ಒಪ್ಪಸ್ಲಿವೋ ತುಮ್ರೋ ಘರ್‌ಕ ಹಮ್ರಾ ಬೀಗಾಣೋ।
ಅಟ್ರಾ ಬರ್ಸು ಫೂಲ್‌ಜಕ್ ದೇಕ್ಲೇಕ್ ಹಮೀ ಪೋಸ್ಯಾಂಚೇ
ತುಮ್ರೊ ಘರ್‌ಮ್ಯೆ ನಿಖ್ಯೇ ದೇಕ್ಲಿವೊ ಹಮ್ರೋ ನೇಕ್ರೂಕ॥

ಕಂಯಾಂ ಜಕೂ ಸುಣ್ನೋ ಬೇಟೀ ಜವಾಬ್ ದೇಣ್ಣವಾಂ
ಆಜ್‌ತೀ ತೋರಾ ಮಾಯ್‌ಬಾಪೂಣೆ ಒತ್ತೀ ಊಣೇಸು।
ಘರ್ ಕೊ ಕಾಮಕಾಜ್ ಒತ್ತೀ ಕರ್‌ನೋ ಗೊಣಗಣ್ಣವಾಂ ತೂ
ದೇವರ್ ಜೇಟ್ಟಿ ಒತ್ತಿಂಕ್ ಜೋಳುಯ್ ನಿಖ್ಯೇಣ್ ಹೋಯ್ರುಣೋ॥

ಅಂಗೀರಸ ಗೋತ್ರುಕೇಣ ಹುಯ್ತೀ ಆಬ್ಲೋಗಿ
ಪ್ರಭುಮುನಿ ಗೋತ್ರುಕೇಣ ಹೋಯ್‌ಗಯ್ ಎಕೋ ಉಪ್ಪೂರು।
ಸಾಸೂ ಸಸ್ರಾಕ್ ಸೇವಾ ಕರಿ ತಕ್ ನಿಖ್ಯೋ ಹೋಸೇ
ಭವಾನೆಮ್ಮಾ ನಿಖ್ಯೇ ರಾಕಂದ್ ತುಮ್ರಾ ಘರ್‌ಕಾಂಕ॥

ಜಮ್ಮೀತೇ ಘರುಕ್ ನಿಖ್ಯೋ ನಾಂವ್ ಲಾವ್ ಬಿಸ್ರೂ ನಕ್ಕೋ
ನೇಕ್ರೂ ಬಾಳಾ ಭರ್ಕೇ ಹೋಂದ ವಂಶೋದ್ಧಾರಕ।
ದೋಳಾವ್ ಪಾಣೀ ಘಾಲೋ ನಕ್ಕೋ ಬೀಗಾಣೇ ತುಮೀ
ಎತ್ತಾದಿನ್‌ತೀ ತುಮ್ರೀ ಬೇಟೀ, ಆಜ್‌ತೀ ಹಮ್ರೀಣ॥

**(ಹೆಣ್ಣುಕಳುಹಿಸಿ ಕೊಡುವುದು) ಘರ್ ಭರಾಯ್ ದೇಸ್ತೇ**

ನಿಕ್ಕೀನೌರೀ ಮಾಯ್‌ಕ್ಕೊ ಘರ್‌ತೀ –
ಫೇರ್‌ಕೇ ದೇಕ್‌ತೀ ಸೇ ... ಅಮ್ಮಾಕ್ ಬುಲಾವ್‌ತೀಸೇ।
ಜಣೇತೆ ಮಾಯ್ ಜೋಳ್ ಬಾತ್‌ಕರಸ್ತಬ್ಬು ನಲ್ಡಿಭಾಂದ್ಲಿಯೋ .... ದೋಳಾ
ಭರ್‌ಕೇಭಾಂಡ್ಲಿಯೊ ಘರ್‌ತೀ ಸೌರೀನಿಕ್ಕೀಸೇ॥
ಯೋಚ್ನಾಕರ್‌ನಕ್ಕೋ ಬೇಟೀ ಮನ್ನುಮ್ರಾಕ್ನಕ್ಕೋ
ಆಬ್‌ತೀ ತೋರೋ ಗುಸಂಯೀಸ್ಸ್ ಒತ್ತೀ – ಚಿಂತಾಕರ್ ನಕ್ಕೋ

ಸಾಸು – ಸಸ್ರಾಸ್ ಮಾಯಿ ಬಾಪು – ದೇವರುಣೇಸ್ ದಾದಾ ಭಯ್ಯಿ
ಹೊಂದ್ಲೇಕ್ ಜಾಣೋ ಬೇಟೀ ತೂ ಒತ್ತಿಂಕ್ ಜೋಳುಯ್ಯಿ ||
ನೌರೀ ನಿಕ್ಳೀಸೇ ಘರತೀ ನೌರೀ ನಿಕ್ಳೀಸೆ....

ನಣ್ದು – ಭಾಬೀ ಒತ್ತೀ ರ್ಥಂಚೇ ದೇಕ್ಲೇಕ್ ಬಾತ್‌ಕರೀ
ಕೂಣ್‌ತೀ ಕಾವ್‌ತೀ ಕಂದ ತೂ ಯೋಚ್ನಾಕರ್‌ನಕ್ಕೋ ಬೇಟೀ ಚಿಂತಾಕರ್ನ್ನಕ್ಕೋ
ಬಾಯ್ಕೋ ಹೋಯ್ಕೆ ಉಜ್ಜೀಸ್ ಅಟುಣ್ ರಾಕ್ಲೇತೂ
ಒತ್ತಿಂಕ್ ಜೋಳುಯ ಹೊಂದ್ಲೇಕ್ ಜಾತೀರ್ಥೋ ||
ನೌರೀ ನಿಕ್ಳೀಸೇ.... ಘರ್‌ತೀ....
ಬಾಬಾ ಬಾಬಾ ಬಾಬಾ ಕೈಕೆ ಬಾಪುಕ್ ಬುಲಾವ್‌ತೀಸೇ

ಕಂದೀಣುಯ್ಯಿ ಬಿಸರ್‌ನಕ್ಕೊ ಕೈಕೆ ಬಿಕ್ಕಳಿಸ್‌ಲೇತೀ ಸೇ ......
ದಾದಾ ಭೈಯ್ಯಿಂಕ್ ದೋಳಾಮ್ ಪಾಣೀ ನದ್ದೀ ಹರ್ದೇಸೇ
ಭೈಣುಕ್ ಸುದ್ಧಾತಡುದ್ನೇ ಹೋಣ್ಣೈತೇ ಘಟ್ಟುಕ್ ರಡಾತ್ತೇ
ನೌರೀ ನಿಕ್ಳೀಸೇ...... ಘರ್‌ತೀ.....

ತಿವಾರ್ ಬಾರ್‌ಕ – ಬುಲಾವ್‌ಣೇ ಔಸು, ಚಿಂತಾಕರ್‌ನಕ್ಕೋ
ಜಾಯ್‌ಕ್ಯಾವ್ ಬೇಟ, ನಿಖ್ಖೋ ಹೋಂದೆ.... ಆಶೀರ್ವಾದುಣೆ.... ತಕ ಅಜೀರ್ವಾದುಣಿ
ನೌರಿ ನಿಕ್ಳೀನೇ...... ಘರ್‌ತೀ ನಿಕ್ಳೀಸೇ...... ಮಾಯ್‌ಕೋ ಘರ್‌ತೀ ನಿಕ್ಳೀಸೇ.....

**ಭಾಷೆಯ ನಮೂನೆ :**

೧) ಲಾಡ್‌ಕೊ ಲಲ್ಲಾ, ಜೋಡ್ಯಾ ಮಾಂಗ್ಯೋ
ಪಡೋಳಾ ದೇಕ್ಕೇ ಉತರ್ ಪಡ್ಯೋ.
(ಲಾಡರ ಮಾಣಿ ಹೀರೇ ಬಯಸಿದ
ಪಡವಲ ದೊರೆಯಲು ಆದಕೇ ರಾಜಿಯಾದ.)

೨) ಲಾಡ್ ಲಕ್ಪತೀ ಭಲ್ಲೋ ಹಿಕ್ಮತೀ.
(ಸಿರಿವಂತ ಲಾಡ ಸದಾ ಚತುರ)

೩) ಲಾಡುಂಕೊಮ್ಮ ಝುಗಡಾ ನೈತೆ ಭ್ಯಾವ್‌ನಯ್
ಕೊಲ್ಡೋ ನೈತೆ ಮರಿಗೆಮ್ಮನ್ನ ||
(ಲಾಡರಲ್ಲಿ ಜಗಳವಿಲ್ಲದೆ ವಿವಾಹವಿಲ್ಲ,
ಪ್ರಾಣಬಲಿ ಇಲ್ಲದೆ ಮರಿಗೆಮ್ಮನ ಪೂಜೆಯಿಲ್ಲ.)

# ಕುಲದೇವತೆ ಅಂಬಾ ಭವಾನಿಗೆ ನಮನ



ಅಂಬಾ ಭವಾನೇಶ್ವರಿ ಮಾತೆಯ ಚಿತ್ರ

## ನಮನ

ಮಾತಾ ಭವಾನೀ ಸರ್ವಹಿತ ಮನೋಜ್ಞೆ
ಸಂಸಾರ ತಾಪತ್ರಯ ಹರ ಗುಣಾಢ್ಯೆ।
ಕರ್ಪೂರ ಮಾಣಿಕ್ಯ ಪ್ರದೀಪೌ
ಸಕಲ ಲಾಡ ಜನಾಂಗ ವಂದಿತೇ॥
ಸ್ಮರತಿ ಪಠತಿ ಮಾಲಾಂ ಶ್ರೀ ಶಂಕರ ವಲ್ಲಭೇ
ಸಕಲ ಗುಣ ಸಂಯುಕ್ತಾಸಂಪದ ಮಾಲೇ।
ದುಷ್ಟ ಸಂಹಾರ ತ್ರಿಭುವನ ಪಾಲಿಕೇ
ವಿಜಯಶ್ರೀ ಗಿರಿವರಕೃತ ನಿವಾಸೇ॥
ನಮಸ್ತೇ ಸಕಲ ಲಾಡಕುಲ ಸಂವರ್ಧಿತೇ
ಅನಂತ ಗುಣಾಸ್ಪದ ಸಂಗಮ ಯುಕ್ತೇ।
ಶ್ರೀಮಾತೇ ವರಕ್ಷತ್ರಿಯ ಜನ ಸಂಸೇವಿತೇ
ದರ್ಶನ ಮಾತ್ರೇ ಸಕಲ ಪಾಪ ನಿವಾರಣೇ॥
ನಮಸ್ತೇಸ್ತುನಮಸ್ತೇಸ್ತುನಮೋ ಲಾಠಪುರಾಧೀಶ್ವರಿ
ಮಾತಾ ಅಂಬಾ ಭವಾನೀ ನಮೋ ನಮಃ।

✿✿✿✿

# ಲಾಡ ಜನಾಂಗದ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ

**ಶಬ್ಧಕೋಶ :**

ಪದಸಂಪತ್ತು : ಲಾಡರ ಮೂಲ ಭಾಷೆ ಚೌರಾಸಿ. ಇದನ್ನು 'ಲಾಡ' ಜನಾಂಗ ಮಾತನಾಡಲು ಬಳಸುವ ಭಾಷೆಯಾದ್ದರಿಂದ 'ಲಾಡಿ' ಭಾಷೆ ಎಂತಲೂ ಕರೆಯುತ್ತಾರೆ. ಈ ಭಾಷೆ ಮಾತನಾಡುವವರ ಸಂಖ್ಯೆ ಕರ್ನಾಟಕಕ್ಕೆ ಸೀಮಿತವಾಗಿದೆ. ಅಷ್ಟೇ ಅಲ್ಲದೆ ಈ ಗುಜರಾತಿ – ಮರಾಠಿ ಮಿಶ್ರಣ ಭಾಷೆ. ಸೌಧಾಘರ್ ಕ್ಷತ್ರಿಯ ಲಾಡರಿಂದ, ಮೈಸೂರು–ಬೆಲಗೂರಿನ ಕ್ಷತ್ರಿಯ ಲಾಡರಿಂದ, ಸೋಮವಂಶ ಕ್ಷತ್ರಿಯ ಲಾಡರಿಂದ ಮಾಡನಾಡಲ್ಪಡುತ್ತಿದ್ದ. ಆದರೆ, ಉಪಪಂಗಡಗಳು ಬಳಸುವ ಭಾಷೆಯಲ್ಲಿ ಸ್ವಲ್ಪ ಮಟ್ಟಿನ ವ್ಯತ್ಯಾಸಗಳು ಉಚ್ಛಾರಣೆ ಹಾಗೂ ಅರ್ಥದಲ್ಲಿ, ಪದಗಳ ಬಳಕೆಯಲ್ಲಿ ಕಂಡುಬರುತ್ತವೆ. ಈ ಭಾಗದಲ್ಲಿ ಚೌರಾಸಿ ಮನೆಮಾತಿನ ಜನ ಬಳಸುವ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಪದಗಳ ವಿವರಣೆ ನೀಡುವ ಪ್ರಯತ್ನ ಮಾಡಲಾಗಿದೆ. ಲಾಠ ದೇಶದಿಂದ ಹೊರಟು ಮೊದಮೊದಲು ಸಂಪೂರ್ಣ ಅಲೆಮಾರಿಗಳಾಗಿದ್ದ ಇವರು ಕ್ರಮೇಣ ತಾವು ನೆಲೆಸಿದ ಪರಿಸರದಿಂದ ಎರವಲು ಪಡೆದ ಪದಸಂಪತ್ತನ್ನು ತಮ್ಮದಾಗಿಸಿ ಚೌರಾಸಿಯನ್ನು ಒಂದು ಮಿಶ್ರಭಾಷೆಯನ್ನಾಗಿಸಿದ್ದಾರೆ.

**ಮನೆಗೆ ಸಂಬಂಧಿಸಿದ ಪದಗಳು :**

೧) ಭುಂಯ್ – ನೆಲ

೨) ಜಾಗ – ಸ್ಥಳ/ಜಾಗ

೩) ಘರು – ಮನೆ

೪) ಕಿವಾಡು – ಬಾಗಿಲು (ಕವಾಟ = ಸಂಸ್ಕೃತ)

೫) ಮಾಳಿ – ಮಾಳಿಗೆ

೬) ಖಿಡ್ಕಿ – ಕಿಟಕಿ

೭) ಭೀತು – ಗೋಡೆ (ಭಿತ್ತಿ = ಸಂಸ್ಕೃತ)

೮) ಪಡಸಾಲು – ಪಡಸಾಲೆ

೯) ಸಾಂದು/ಸಂದೋರಿ – ಸಂದಿ, ಗಲ್ಲಿ

೧೦) ಅಂಗಣ – ಅಂಗಳ

೧೧) ಮ್ಹೋರಿ – ಬಚ್ಚಲು

೧೨) ನ್ಹಾವಣೆ – ಸ್ನಾನದ ಮನೆ (ನಹನ = ಹಿಂದಿ)

೧೩) ದೇವುಘ್ಘರ್ – ದೇವರ ಮನೆ

೧೪) ರಂದಾಣಿ – ಅಡಿಗೆ ಮನೆ (ರಾಂದಣ್ = ಮರಾಠಿ)

೧೫) ರಸ್ತಾ – ರಸ್ತೆ

೧೬) ಜಗಲಿ – ಜಗಲಿ

೧೭) ಸಂದೂಕ – ಪೆಟ್ಟಿಗೆ

೧೮) ಟಿವ್‌ಟಣಗಿ – ಮೂರು ಕಾಲಿನ ಟೀಪಾಯಿ

೧೯) ಘಟ್ಟು – ಘಟ್ಟಿ

೨೦) ಮ್ಹಾಳ ಅಮೌಸು – ಮಹಾಲಯ ಅಮಾವಾಸ್ಯೆ

೨೧) ಭಂಡಾರು – ಹಣೆಗೆ ಹಚ್ಚುಕೊಳ್ಳುವ ಅರಸಿನ

೨೨) ಭೀರಿ – ಬಾವಿ

೨೩) ತಳು – ತಳ

೨೪) ಖುಂಟಾ – ಗೂಟ

೨೫) ಖುಂಟಿ – ಬಟ್ಟೆ ಸಿಕ್ಕಿಸುವ ಗೂಟ

೨೬) ಹೆಂಟಾ – ಮಣ್ಣಿನ ಹೆಂಟೆ

೨೭) ಮಾಟಿ – ಮಣ್ಣು

೨೮) ಧೋಂಡಾ – ಕಲ್ಲು

೨೯) ಭಂಡಾ – ಬಂಡೆ

೩೦) ಲಾಕ್ಡ – ಕಟ್ಟಿಗೆ

೩೧) ಬಾಳು – ಮರಳು

೩೨) ಚುನ್ನಾ – ಸುಣ್ಣ

೩೩) ಖೋದಿ – ಅಗಿ

೩೪) ಜೋಪಡಿ – ಗುಡಿಸಲು

೩೫) ಅಟ್ಲಾ – ಅಟ್ಟಣಿಗೆ

೩೬) ನಿಚ್ಚಣಗಿ – ಏಣಿ

೩೭) ಧೋರು – ಹಗ್ಗ

೩೮) ಧಾಗ – ದಾರ

೩೯) ಚಿಲಕು – ಚಿಲಕ

೪೦) ಅರದಂಡಾ – ಬೆಣೆ

೪೧) ಗಡಾರಿ – ಗಡಪಾರೆ

೪೨) ವತಾರು – ವತಾರ

೪೩) ಪೋಕಲ್ – ಅಳ್ಳಕ

೪೪) ಪಿಚಡ – ಹಿತ್ತಲು (ಪಿಛವಾಡಾ = ಹಿಂದಿ)

೪೫) ಅಗುಲ್‌ಬಗುಲ್ಲಾ – ಅಕ್ಕಪಕ್ಕದ

೪೬) ಖೇತು – ಹೊಲ

೪೭) ಮಳ – ತೋಟ

೪೮) ಬೈಲು – ಎತ್ತು

**ಮನೆಯ ಅಗತ್ಯಗಳು :**

೧) ಡಬರಿ – ಅಗಲವಾದ ಪಾತ್ರೆ/ಬೋಗುಣಿ

೨) ಹಂಡಾ – ಹಂಡೆ

೩) ಮಡಕ – ಮಡಕೆ

೪) ಕೋಂಡಿ – ಕುಡಿಕೆ

೫) ತಾಂಬ್ಯಾ – ತಂಬಿಗೆ

೬) ಸಾತ್‌ಬಾಟಿ – ಏಳು ಪಾತ್ರೆಗಳ ಸಮೂಹ

೭) ಬಿಂದಗಿ – ಬಿಂದಿಗೆ

೮) ಘಾಗರ್ – ಮಣ್ಣಿನ ಬಿಂದಿಗೆ

೯) ಚುಲ್ಲಾ – ಒಲೆ

೧೦) ಒಕಳಿ – ಒರಳು

೧೧) ವಳ – ಸೌಟು

೧೨) ಘಾಂಸಿ – ಈಳಿಗೆ ಮಣೆ

೧೩) ಫೂಖಣಿ – ಊದುಗೊಳವೆ

೧೪) ಬೆಲ್ಲಣು – ಅಟ್ಟಣಿಗೆ

೧೫) ಪಾಟ್ರ – ಮಣೆ

೧೬) ಚಾಪು – ಚಾಪೆ

೧೭) ಪರಾತು – ಪರಾತ

೧೮) ಝುಲ್ಡ– ಜರಡಿ

೧೯) ಚಮಚ – ಚಮಚ

೨೦) ತವಾ – ಹಂಚು

೨೧) ಝಾಕಣ – ಮುಚ್ಚಳ

೨೨) ಥಾಳ – ತಾಟು, ತಟ್ಟೆ

೨೩) ಬಾಟಿ – ಬಟ್ಟಲು

೨೪) ಚುಮಟಾ – ಚುಮಟ

೨೫) ಇಕ್ಕಳಾ – ಇಕ್ಕಳ

೨೬) ಖಡಬತ್ತಾ– ಅರೆಯುವ ದೋಣಿ ಆಕಾರದ ವಸ್ತು

೨೭) ಬಿಸ್ತು– ಬೆಂಕಿ

೨೮) ಪಾಣಿ – ನೀರು (ಪಾನಿ = ಹಿಂದಿ)

೨೯) ಝುಳು – ಝುಳ (ಬೆಂಕಿಯ)

೩೦) ಚಾಕಿ – ಬೀಸುವ ಕಲ್ಲು

೩೧) ಮುಸೂಳು – ಒನಕೆ

೩೨) ಪಳಿ – ಚಮಚೆ

೩೩) ರುಬ್‌ಗುಂಡು – ರುಬ್ಬುವ ಕಲ್ಲು

೩೪) ಕೊಳಸ – ಇದ್ದಿಲು

೩೫) ಭಾರಿ – ಕಸಬರಿಕೆ

೩೬) ರಾಕು – ಬೂದಿ

೩೭) ಕಚರಾ – ಕಸ

೩೮) ಚೂಡಿ – ಕುದಿಯು/ಬಳೆ

೩೯) ಔಟ್ಯೋ – ಕಾಯಿತು (ಬಿಸಿ)

೪೦) ಗೋಬರು – ಸಗಣಿ

೪೧) ರವಿ – ಬೇಳೆ ರುಬ್ಬುವ ಕೋಲು

೪೨) ತಾಕಡಿ – ತಕ್ಕಡಿ

೪೩) ತಪೇಲ – ತಪ್ಪಲೆ

೪೪) ಕೊಡೋಲೆ – ಕೋಡೊಲೆ

೪೫) ಗಾಳಸ್ತೆ – ಸೋಸುವುದು

೪೬) ಬಗಾರಿ – ಒಗ್ಗರಣೆ ಹಾಕು

೪೭) ಧವ್ – ಒಗಿ/ತೊಳಿ

೪೮) ಪೀಳಿ – ಹಿಂಡು (ಬಟ್ಟೆ)

೪೯) ಲಾಟಿ – ಲಟ್ಟಿಸು

೫೦) ಉತಾರಿ – ಇಳಿಸು (ಕೆಳಕ್ಕೆ)

೫೧) ಜಳ್ಯೊ – ಸೀಯಿತು

೫೨) ಚೂಡ್ಯೊ – ಬೆಂದಿತು

೫೩) ಉಬಾಯೊ – ಉಕ್ಕಿತು

೫೪) ಉಮಲ್ಯೊ – ಅನ್ನ ಬೆಂದಿತು

೫೫) ಟಳ್ – ಕರಿ (ಎಣ್ಣೆಯಲ್ಲಿ ಬೇಯಿಸು)

೫೬) ನಿತಾಳಿ – ತೊಟ್ಟಿಕ್ಕಿಸು

೫೭) ಕಾಟಿ – ಸೌದೆ

೫೮) ಭೇಣಿ – ಬೆರಣಿ

೫೯) ಗಲಬರಸಿ – ತೊಳೆದಿಡು

೬೦) ಡಾಬಣು – ದಬ್ಬಳ

೬೧) ಸುಂಯ್ಯಿ – ಸೂಜಿ

೬೨) ಹತ್ಯಾರು – ಉಪಕರಣ

೬೩) ಕಡೈ – ಕಡಾಯಿ

೬೪) ಸಿಲ್ಲು – ಮಸಾಲೆ ಅರೆಯುವ ಹಾಸುಗಲ್ಲು

೬೫) ಅಟ್ಟ – ಅಟ್ಟಣಿಗೆ

೬೬) ರೊಟ್ಟುಲ್ತಾಣಿ – ರೊಟ್ಟಿ ತಿರುವಿ ಹಾಕುವ ಹಲ್ಲೆ

೬೭) ಜಾಲರಾ – ಜಾಲರಿ

೬೮) ನಾಲು – ಮುದ್ದೆ ಕರೆಯುವ ಉಪಕರಣ

**ಆಹಾರ ಧಾನ್ಯಗಳು – ಮಸಾಲೆ/ಸಾಂಬಾರ ಪದಾರ್ಥ :**

೧) ಚೌಳು – ಅಕ್ಕಿ (ಚಾವಲ್ – ಹಿಂದಿ)
೨) ಘಂವ್ – ಗೋಧಿ
೩) ಸೋಜಿ – ರವೆ
೪) ಸಾಳು – ಭತ್ತ
೫) ರಾಗಿ – ರಾಗಿ
೬) ಪೀಟು – ಹಿಟ್ಟು
೭) ದಾಳು – ಬೇಳೆ
೮) ತೋರು – ತೊಗರಿ
೯) ಮುಂಗು – ಹೆಸರು
೧೦) ಹರ್‌ಬೇರೆ – ಕಕ್ಕೇಕಾಳು
೧೧) ತಿಲ್ಲು – ಎಣ್ಣೆ(ತಿಲ–ಸಂ)
೧೨) ಘುಟ್ಣಾ – ಹುರಿಕಡ್ಲೆ
೧೩) ಕಡ್ಲೆಬೀಜು – ಕಡ್ಲೇಬೀಜ
೧೪) ಅಲಸಂದಾ – ಅಲಸಂಡೆ
೧೫) ದಾಣಾ – ಕಾಳು
೧೬) ಉಡೀದು – ಉದ್ದು
೧೭) ದಾಳು – ಬೇಳೆ (ತೋರು, ಉಡೀದು, ಹರಬೇರೆ, ಮುಂಗು)
೧೮) ಸಾಕರು – ಸಕ್ಕರೆ
೧೯) ಖಸ್‌ಖಸ್ – ಗಸಗಸೆ
೨೦) ಏಳಾ – ಯಾಲಕ್ಕಿ
೨೧) ಲವಂಗು – ಲವಂಗ
೨೨) ದಾಲಚಿನ್ನಿ – ದಾಲಚಿನ್ನಿ
೨೩) ಜೀರಾ – ಜೀರಿಗೆ
೨೪) ಮೀರಿ – ಮೆಣಸು
೨೫) ಖಜೂರು – ಖರ್ಜೂರ

೨೬) ಪುರಿ – ಪುರಿ

೨೭) ಜಾಯ್‌ಕಾಯ್ – ಜಾಯಿಕಾಯಿ

೨೮) ಮೆಣಸಿನಕಾಯಿ – ಮೆಣಸಿನಕಾಯಿ

೨೯) ನಸೂಣ್ – ಬೆಳ್ಳುಳ್ಳಿ

೩೦) ಕಾಂದ – ಈರುಳ್ಳಿ

೩೧) ಧಣಾ – ಧನಿಯಾ

೩೨) ಹಿಂಗ್ – ಹಿಂಗು

೩೩) ಮಿಟ್ಬೋ ತೇಲು – ಕಡಲೆಕಾಯೆಣ್ಣೆ

೩೪) ಅರಂಡಿಕೊತೇಲ್ – ಹರಳೆಣ್ಣೆ

**ತರಕಾರಿ – ಕಾಯಿಪಲ್ಲೆಗಳು :**

೧) ಆಲೂಗಡ್ಡ – ಆಲೂಗಡ್ಡೆ

೨) ಮಟ್ಬೊಮೆಣಸಿನಕಾಯಿ – ದಪ್ಪ ಮೆಣಸಿನಕಾಯಿ

೩) ಪಾನು – ಎಲೆ

೪) ಫಾಲ್ಲೇಸ್ತೆಪಾನು – ವೀಳ್ಯೆದೆಲೆ

೫) ಜವಸ್ತೆಪಾನು – ಊಟದೆಲೆ

೬) ಗಾಜರ್ – ಗಜ್ಜರಿ

೭) ಮೂಳಾ – ಮೂಲಂಗಿ

೮) ಪಡೋಳಾ – ಪಡವಲಕಾಯಿ

೯) ದೋಡ್ಕಾ – ಹೀರೇಕಾಯಿ

೧೦) ಸೋರೇಕಾಯಿ – ಸೋರೆಕಾಯಿ

೧೧) ಬಾಳ್ಕಾ – ಸೌತೇಕಾಯಿ

೧೨) ಭೊಂಪ್ಲಾ – ಕುಂಬಳಕಾಯಿ

೧೩) ಕೋಸು – ಕೋಸು

೧೪) ಕರೇಲಾ – ಹಾಗಲಕಾಯಿ

೧೫) ಕೊತಿಂಬರು – ಕೊತ್ತುಂಬರಿಸೊಪ್ಪು

೧೬) ಕರೆಪ್ಪಾಕು – ಕರಿಬೇವು

೧೭) ಔರಾ – ಅವರೆಕಾಯಿ

೧೮) ಬೈಗಣು – ಬದನೆಕಾಯಿ

೧೯) ನಿಂಬು – ನಿಂಬೇಹಣ್ಣು

೨೦) ಅಂಬಾ – ಮಾವಿನಕಾಯಿ

೨೧) ಪಕ್ಕೋಅಂಬಾ – ಮಾವಿನ ಹಣ್ಣು

೨೨) ಕಿತ್ಲೆ – ಕಿತ್ತಳೆಹಣ್ಣು

೨೩) ಭಾಜಿ – ಸೊಪ್ಪು

೨೪) ಖಾರ್‌ಕೊಪೀಟು – ಖಾರದ ಪುಡಿ

೨೫) ಕೇಳಾ – ಬಾಳೆ

೨೬) ಭಾಯಿ – ಹಾಲಿನ ಕೆನೆ

೨೭) ಗಡ್ಡೊ – ಘನ, ಗಟ್ಟಿ (ಹಾಲು)

೨೮) ಚಿಕೂಲು – ಕೆಸರು

೨೯) ಬಡಿ – ಸಂಡಿಗೆ

೩೦) ಸಾಳಪಾಪಡ್ – ಅಕ್ಕಿಹಪ್ಪಳ

೩೧) ಭಿಜಾವ್ – ನೆನೆಸು

೩೨) ಚರಾವ್ – ಮೇಯಿಸು

೩೩) ರ್ಹ – ಇರು

೩೪) ಝುಟಕಿ – ಝಾಡಿಸು

**ಮಂಗಳ ಕಾರ್ಯ/ಪೂಜಾ ಉಪಕರಣಗಳು :**

೧) ಪಂಚಾರತಿ – ಐದು ಬತ್ತಿಯ ಆರತಿ

೨) ಗಂಟಿ – ಗಂಟೆ

೩) ಭವನಾಸಿ – ಸಂಗ್ರಹಣಾ ಪಾತ್ರೆ

೪) ರಂಗು – ಬಣ್ಣ

೫) ಕಳಸು – ಕಳಶ

೬) ದಿವ – ದೀಪ

೭) ಊದುಬತ್ತಿ – ಊದುಕಡ್ಡಿ

೮) ಬಾತು – ಬತ್ತಿ

೯) ತೇಲು – ಎಣ್ಣೆ

೧೦) ದೇವುಘ್ಘರು – ದೇವರ ಮನೆ

೧೧) ಜಾಗಟೆ – ಜಾಗಟೆ

೧೨) ಉಲಾಯಿ – ಶ್ರಾವಣದಲ್ಲಿ ನಡೆಸುವ ಭಿಕ್ಷಾಟನೆ

೧೩) ಯಾತ್ರಾ – ಯಾತ್ರೆ

೧೪) ಜಾತ್ರಾ – ಜಾತ್ರೆ

೧೫) ಖಾಂಬು – ಕಂಬ

೧೬) ನಿವುಜು – ನೈವೇದ್ಯ

೧೭) ಕರ್ಪೂರು – ಕರ್ಪೂರ

೧೮) ಮಿಠ್ಠೂ – ಸಿಹಿ/ಸಿಹಿತಿಂಡಿ

೨೦) ಪಾನಕು – ಪಾನಕ

೨೧) ಪಂಜು – ಪಂಜು

೨೨) ಸುಕ್ಕೋ ಖೊಬರಾ – ಗಿಟಕು

೨೩) ನಾರೇಳು – ತೆಂಗಿನ ಕಾಯಿ

೨೪) ಫೂಲ್‌ಕೊ ಹಾರು – ಹೂವಿನ ಹಾರ

೨೫) ಫೂಲುಪಾನು – ಹೂವು, ವೀಳ್ಯದೆಲೆ

೨೬) ಸಾಂಜಾ – ಸಜ್ಜಿಗೆ

**ಆಹಾರ ಪದಾರ್ಥಗಳು :**

೧) ಭಾತು – ಅನ್ನ

೨) ರೊಟ್ಟ – ರೊಟ್ಟಿ

೩) ಚಪಾತಿ – ಚಪಾತಿ

೪) ಚಟ್ನಿ – ಚಟ್ನಿ

೫) ಪಲ್ಯ – ಪಲ್ಯ

೬) ಸಾಗು – ಸಾಗು

೭) ರಸು – ಗೊಜ್ಜು

೮) ಖಟ್ಟಿ ಭಾಜಿ – ಹುಳಸೊಪ್ಪು

೯) ಭಜೀಕ್ ಪಾಣಿ – ಬಸ್ಸಾರು

೧೦) ತೊವ್ವೆ – ತೊವ್ವೆ

೧೧) ತೊಕ್ಕು – ತೊಕ್ಕು

೧೨) ಆತ್ನ – ಉಪ್ಪಿನಕಾಯಿ

೧೩) ಪಲಾವ್ – ಪಲಾವ್

೧೪) ಫಿಕ್ಕೋಪಾಣಿ – ಕಟ್ಟಿನಸಾರು

೧೫) ಮೀರಿನಸೂಣಕೊಕಟ್ಟು – ಉಪ್ಪೆಸರು

೧೬) ಧಂಯ್ಯಿ – ಮೊಸರು

೧೭) ತಾಕು – ಮಜ್ಜಿಗೆ

೧೮) ದೂದು – ಹಾಲು

೧೯) ವಡೆ – ವಡೆ

೨೦) ಬೋಂಡಾ – ಬೋಂಡಾ

೨೧) ಅಮ್ಮಟಿ – ಸಾರು

೨೨) ಕೊನೋಲಾ – ಖರ್ಜಿಕಾಯಿ/ಕರಗಡಬು

೨೩) ಪೂರಣು – ಹೂರಣ

೨೪) ರೊಟ್ಟಿ – ಹಳಿಗೆ

೨೫) ಸೇಮಿ – ಶ್ಯಾವಿಗೆ

೨೬) ಪಾಪಡು – ಹಪ್ಪಳ

೨೭) ನೋಣಿ – ಬೆಣ್ಣೆ

೨೮) ಪತಲಿ ಭಾಜಿ – ಮಸ್ಸೊಪ್ಪು

೨೯) ಖೊಬ್ರಾ – ತೆಂಗಿನಕಾಯಿ

೩೦) ಚಕ್ಕಲಿ – ಚಕ್ಕಲಿ

೩೧) ಭಜ್ಜಾ – ಸಿಹಿ–ಖಾರಾ ಇರುವ ಬಜ್ಜಿ

೩೨) ಪಳಿದ್ಯ – ಮಜ್ಜಿಗೆ ಸಾರು

೩೩) ಹಸೆಳ್ಳೆ – ಮಜ್ಜಿಗೆ ಸಾರು

೩೪) ತೇಲು – ಎಣ್ಣೆ

೩೫) ಬಗಾರು – ವಗ್ಗರಣೆ

೩೬) ಪರ್ಪು – ಬೇಳೆ ಹುಳಿ/ಸಾಂಬಾರು (ತಮಿಳಿನ ಪರ್ಪು 'ಬೇಳೆ')

# BIBLIOGRAPHY - ಪರಾಮರ್ಶನ ಗ್ರಂಥಸೂಚಿ


| | | |
|---|---|---|
| 1) | The Mysore Tribes & Castes Vol-III 1930 | H.V. Nanjundaiah & Anantha Krishna Iyer |
| 2) | Castes & Tribes of Southern India Vol-I - 1975 | Edgar Thursten |
| 3) | A Socio - Anthropological Study of Brahmin Lads | Dr. A.V. Saoji |
| | ನಿರೂಪಕರ ವಿವರಗಳು : | |
| 4) | Gosavi Samaj | Satara |
| 5) | Kshatriya Maratha Samaja | Salpur, Beed, Kolhapur, Hubli |
| 6) | Yeligar Lad Samaj | Dharwad |
| 7) | Kshatria Lad Samaj | Bangalore, Mysore, Belagur, Banavar & Hulikere. |
| 8) | Lad Bhuje (Kumbar) | Sion, Surat |
| 9) | Lad Sindhi Lohana Samaj | Surat |
| 10) | Lad Vanik Samaj | Dhule, Ahmedabad |
| 11) | Lad Sonar Mangal Karyalay | Poona (Pune) |
| 12) | Gauli Lad Samaj | Aurangabad |
| 13) | Vanjara Lad Samaj | Kannad, Aurangabad |
| 14) | Saudhagar Kshatriya Lad Samaj | Sira, Mysore & Tumkur. |
| 15) | Lad Brahmin Samaj | Nagpur - Dr. A.V. Saoji |
| 16) | Jain Sabharval Lad Samaj | Karanja Lad |
| 17) | Kalol Lad Samaj | Belgaum - Ananth. C. Lad |
| 18) | Lad Dussa, Vissa | Dhule - Dr. G.C. Shah |

| | | |
|---|---|---|
| 19) | Lad Baniya | Samasta Lad Pathrika, Mumbai |
| 20) | Vaishnav Lads | U.S.A. (web site) |
| 21) | Bhavasar Kshatriya Lad Samaj | Satara |
| 22) | Raghu Sugandhi | Gogi, Gulbarga |
| 23) | D. Nagaraj, HAL & B.R. Srinivas | Bangalore |
| 24) | Srinivas, Artist | Mysore |
| 25) | Narasimhappa, Yelgar, Ravi Yeligar, Prof. M.L. Yeligar & Dr. Shankar Narayan Holihosur | Dharwad |
| 26) | Prakash Sugandhi | Bijapur |
| 27) | Dr. U. Suryanath Kamath | Historian, Bangalore |
| 28) | Dr. M. Chidananda Murthy | Scholar |
| 29) | Sri Lingadevaru Halemane | C.I.I.L., Mysore |
| 30) | Sri. Puttaraju, D.T.P. & Shanthakumari D.T.P. | Chandra Layout Vismaya Graphics Bangalore-20. |
| 31) | Y. Mohan Lad, S.W. Railway | Hubli Division |
| 32) | Prof. S.G. Siddaramaiah | Writer & Retd. Principal Bangalore |
| 33) | Mr. M.J. Raghavendra | Hyderabad |
| 34) | Smt. M.J. Kasumalatha | Bangalore |
| 35) | Mr. Raghunath Rahut | BESCOM, Sira |
| 36) | Mr. Chandra Dhar Lad | Bangalore |
| 37) | Dr. Ramesh S. Suryawamsi | Kannad, Aurangabad |



ಮಹಾಭಾರತ ಕಾಲದಿಂದಲೂ ಖ್ಯಾತಿ ಹೊಂದಿದ್ದ ಬಾಲ ರಾಮಾಯಣ ಹಾಗೂ ಸ್ಕಂಧ ಪುರಾಣದಲ್ಲಿ ಉಲ್ಲೇಖವಿರುವ ಲಾಠ ದೇಶದ ಪ್ರಾಚೀನ ಸಂಸ್ಕೃತಿ ಹಾಗೂ ಅದರ ಐತಿಹಾಸಿಕ ಮಹತ್ವವನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. 14ನೇ ಶ. ದ ರಾಜಕೀಯ ವಿಪ್ಲವ ಮತ್ತು ಭೀಕರ ಬರಗಾಲಗಳಿಂದ ಲಾಠದ ಲಾಡ ಜನಾಂಗ ದಕ್ಷಿಣ ಗುಜರಾತಿನಿಂದ ವಲಸೆ ಹೊರಟು ರಾಜಸ್ಥಾನ, ಮಹಾರಾಷ್ಟ್ರ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ಬೇರು ಬಿಟ್ಟ ಅವರ ಪರಂಪರೆಯ ಏಳು ಬೀಳುಗಳನ್ನು ಲೇಖಕರು ಈ ಕೃತಿಯಲ್ಲಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ಲಾಡ ಜನಾಂಗದ ಅನೇಕ ಪಂಗಡಗಳ ಬಗ್ಗೆ ಒಂದು ಪಕ್ಷಿನೋಟ ಇಲ್ಲಿದೆ.

- ಡಾ॥ ಸಿದ್ಧಲಿಂಗಯ್ಯ
ಅಧ್ಯಕ್ಷರು